# ನವಕರ್ನಾಟಕ ಪ್ರಕಾಶನದ ಆಯ್ದ ಇಂಗ್ಲಿಷ್ ಕೃತಿಗಳು




₹ 100




₹ 190




₹ 250




₹ 200




₹ 100




₹ 75




₹ 200




₹ 475




₹ 200




₹ 110




8 vols. Each ₹ 95




3 Vols. Each ₹ 90




₹ 100




₹ 200




₹ 290

## 3 ವರ್ಷದ 'ಹೊಸತು' ಚಂದಾದಾರರಿಗೆ 20% ವಿಶೇಷ ರಿಯಾಯಿತಿ

ಪುಸ್ತಕಗಳ ಬೆಲೆಯ ಜೊತೆ ರೂ. 30 ಅಂಚೆ / ಕೊರಿಯರ್ ವೆಚ್ಚ ಸೇರಿಸಿ ಕೆಳಕಂಡ ವಿಳಾಸಕ್ಕೆ ಎಂ. ಓ./ಡಿ. ಡಿ. ಕಳುಹಿಸಿ




## ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್

ಎಂಬೆಸಿ ಸೆಂಟರ್, 11, ಕ್ರೆಸೆಂಟ್ ರಸ್ತೆ, ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – 560 001.

ದೂರವಾಣಿ : 30578022, 22203580. ಫ್ಯಾಕ್ಸ್ : 30578023.

e-mail : navakarnataka@gmail.com URL : www.navakarnataka.com blog : http://navakarnataka.blogspot.com

ಹೊಸತು
ನೆಮ್ಮದಿಯ ನಾಳೆ ನಮ್ಮದು

## ಒಳಗೇನಿದೆ ...



**ಚಿತ್ರಗಳು :** ಶ್ರೀಹರಿ, ಸಂಕೇತ್, ಕಮಲಂ ಅರಸು, ರಾಂಚಂದ್ರ ಕೊಪ್ಪಲು, ಗೋಪಿ ಹಿರೇಬೆಟ್ಟು, ಜಿ. ಎಂ. ಬೊಮ್ನಳ್ಳಿ
**ಮುಖಚಿತ್ರ :** ವರ್ಣ. ಟಿ. ಹಳ್ಳಿ
**ವಿನ್ಯಾಸ :** ನವಕರ್ನಾಟಕ ವಿನ್ಯಾಸ
**ಕಚೇರಿ ಸಹಕಾರ :** ಜಿ. ವಿ. ತೇಜೋವತಿ

# ಈ ತಿಂಗಳು

ಸಾವಡಿ, ಪಾಟೀಲ ಮತ್ತು ಪಾಲೇಮಾರ್ ಎಂಬ ಮೂರು ಮಂದಿ ಭಾರತೀಯ ಜನತಾ ಪಕ್ಷದ ಸಚಿವರು ವಿಧಾನಸಭೆಯಲ್ಲಿ ಅಲ್ಲಿಯ ನಡಾವಳಿಗಳ ಬಗ್ಗೆ ನಿರಾಸಕ್ತಿ ತುಂಬಿಕೊಂಡು, ಬೇರೇನೋ ಕಣ್ಣು ತುಂಬಿಕೊಳ್ಳುವ ''ಕೆಲಸ''ದಲ್ಲಿ ಆಸಕ್ತರಾದದ್ದು ಅವರನ್ನು ದೇಶದಲ್ಲೆಲ್ಲಾ ಸಮಾಚಾರದ ಕೇಂದ್ರವನ್ನಾಗಿಸಿದೆ. ನಮ್ಮ ರಾಜ್ಯವನ್ನು ಪದೇಪದೇ ಹೀಗೆ ಕೀಳಾಗಿ ಸುದ್ದಿಮಾಡುವ ಮಟ್ಟಕ್ಕೆ ಮುಟ್ಟಿಸಿದ್ದು ಬಿಜೆಪಿ ಸರ್ಕಾರದ ಅಪಖ್ಯಾತಿ, ಅಪಸಾಹಸ. ಈ ಪ್ರಸಂಗದ ಆಯಾಮಗಳನ್ನು ಪ್ರಸ್ತುತ ಸಂಚಿಕೆಯ ಆಹ್ವಾನಿತ ಸಂಪಾದಕೀಯದಲ್ಲಿ ಡಾ|| ಬದರಿನಾಥ್ ಕೆ. ರಾವ್ ಚರ್ಚಿಸಿದ್ದಾರೆ. ಶ್ರೀಯುತರು ಅಮೆರಿಕಾದ ಮಿಶಿಗನ್ ರಾಜ್ಯದ ಫ್ಲಿಂಟ್‌ನಲ್ಲಿ ಕೆಟರಿಂಗ್ ವಿಶ್ವವಿದ್ಯಾನಿಲಯದ ಸಮಾಜಶಾಸ್ತ್ರ ವಿಭಾಗದಲ್ಲಿ ಪ್ರಾಧ್ಯಾಪಕರಾಗಿದ್ದಾರೆ. ಬೆಂಗಳೂರಿನವರಾದ ಶ್ರೀ. ಬದರಿನಾಥ್ ಅವರ ''ಅಲ್ಪಸಂಖ್ಯಾತರು ಮತ್ತು ಧರ್ಮನಿರಪೇಕ್ಷತೆ'' ಎಂಬ ಗ್ರಂಥವನ್ನು ಹಿಂದೆ ನವಕರ್ನಾಟಕ ಪ್ರಕಾಶನದಲ್ಲಿ ಹೊರತರಲಾಗಿತ್ತು.

* * *

ಜೈಪುರದಲ್ಲಿ ಶ್ರೀಮಂತ ಸಾಹಿತ್ಯ ಮೇಳ ನಡೆದದ್ದು ಸಲ್ಮಾನ್ ರಶ್ದಿ ಪ್ರಕರಣದಿಂದಾಗಿ ಬಹಳ ಪ್ರಧಾನವಾಗಿ ವರದಿಗಳ ವಸ್ತುವಾಯಿತು. ನಮ್ಮ ರಾಜ್ಯ ಎಂದಾದರೂ ಸಾಹಿತ್ಯ ಜಾತ್ರೆ ನಡೆಸುವುದರಲ್ಲಿ ಹಿಂದೆ ಬೀಳುವುದುಂಟೆ ? ಸರಿ, ಬೆಂಗಳೂರಿನಲ್ಲೂ ಅದ್ದೂರಿ ಸಾಹಿತ್ಯ ಮೇಳ ನಡೆದುಹೋಯಿತು. ಜೈಪುರದ ತದ್ವತ್ತು ಮೇಳ ಇದು. ಯೂರೋಪಿನಲ್ಲಿ ನಡೆಯುವ ಸಾಹಿತ್ಯ ವಿಮರ್ಶೆಯ ಛಾಯೆ ಮೊದಲು ದೊರಕುವುದು ಕರ್ನಾಟಕದಲ್ಲಿ. ಅಲ್ಲಿ ಅಬ್ಸರ್ಡ್ ನಾಟಕ ಬಂದರೆ ಅದು ಇಲ್ಲೂ ಬರುತ್ತದೆ; ಅಲ್ಲಿ ನಿಂತರೆ ಇಲ್ಲೂ ನಿಲ್ಲುತ್ತದೆ. ಅಂತಹ ಹತ್ತು ಬೇರೆ ಉದಾಹರಣೆಗಳನ್ನು ಕೊಡಬಹುದು, ಆದರೆ ಈಗ ಅದು ಅಪ್ರಸ್ತುತ. ಪ್ರಸ್ತುತವಾದ್ದು ಏನೆಂದರೆ ಜೈಪುರವನ್ನು ಅನುಕರಿಸಿದ (ಕು) ಖ್ಯಾತಿ ನಮ್ಮದು, ಎಂಬುದು. ಇರಲಿ, ನಮ್ಮ ನಮ್ಮ ತೆವಲುಗಳು ನಮನಮಗೆ! ಜೈಪುರಕ್ಕೆ ಓಪ್ರಾ ವಿನ್‌ಫ್ರಿ ಎಂಬ ಅಮೆರಿಕಾದ ಮಹಿಳೆ ಬಂದಿದ್ದಳು. ಆ ದೇಶದ ಟಿ.ವಿ.ಗಳಲ್ಲಿ ಈಕೆ ಪ್ರಸಿದ್ಧಳು. ''ಟಾಕ್ ಶೋ'' ಎಂಬ ಪದ ಬಂದದ್ದೇ ಆಕೆಯಿಂದ ಎನ್ನುತ್ತಾರೆ. ಏನು ಆಕೆಯ 'ಟಾಕ್'? ಟಾಕ್‌ನಲ್ಲೇ ಶಾಕ್ ಕೊಡುತ್ತಾಳಂತೆ. ಒಬಾಮ ಸಹ ಆಕೆಯ ಕೈಗೆ ಸಿಕ್ಕು ಪೇಂದಾ ಆಗಿಬಿಟ್ಟನಂತೆ. ಈ 'ಅಂತೆ'ಗಳನ್ನು ಹೊರತುಪಡಿಸಿದರೆ ಆಕೆಯ ಬಹುತೇಕ ಟಾಕ್ ಶೋಗಳಲ್ಲಿ ಸಾಮಾನ್ಯವಾಗಿ ಪಾತ್ರಗಳೆಂದರೆ ಕರಿಯ ಮಹಿಳೆಯರು, ಅದರಲ್ಲೂ ೨೦ಕ್ಕೆ ಕಡಿಮೆ ಅಥವಾ ೪೦ಕ್ಕೆ ಜಾಸ್ತಿ ವಯಸ್ಸಿನವರು. ಅಂಥವರ ಭಗ್ನಪ್ರೇಮ, ಅದರ ರೋಚಕತೆ, ಹೊಸ ಪ್ರೇಮವೇನಾದರೂ ಅಂಕುರಿಸುತ್ತಿದೆಯೆ, ಹೌದಾದರೆ ಅದರ ರುಚಿ ಹೇಗಿದೆ, ಇಲ್ಲವಾದರೆ ಏಕಿಲ್ಲ, ಅದು ಉದಯಿಸಲು ಸಲಹೆ ಪಡೆದರೆ ಅಥವಾ ಸಲಹೆ ಬೇಕೆ, ಹೀಗೆ ಆಕೆಯ 'ಕ್ವೆಶ್ಚನ್ ಟಾಕ್' ನಿರರ್ಗಳವಾಗಿ ಸಾಗುತ್ತದೆ. ಆಕೆಯ ಈ 'ಗ್ಲಾಮರ್'ನ ಒಂದೇ ಕಾರಣಕ್ಕಾಗಿ ಆಕೆಗೆ ಜೈಪುರಕ್ಕೆ ಆಹ್ವಾನ ನೀಡಿದ್ದು, ಇಲ್ಲವಾದರೆ ಆಕೆ ಸಾಹಿತ್ಯವನ್ನು ಮೂಸಿನೋಡುವ ಗೋಜಿಗೆ ಹೋಗಲು ಸಮಯವೇ ಇಲ್ಲದಂಥ ಪ್ರತಿಭಾವಂತೆ. ಆಕೆಯನ್ನು ಆಹ್ವಾನಿಸಿದ ಮನಸ್ಸುಗಳು ವಸಾಹತು ಕಾಲದ ಮನೋಭಾವದಿಂದ ಹೊರಬಂದಿಲ್ಲ. ಆಕೆಯನ್ನು ''ಸಂದರ್ಶಿಸಿ'' ಅಪಾರ ''ಸಾಂಸ್ಕೃತಿಕ'' ಅಂಶಗಳನ್ನು ಹೊರಗೆಳೆಯಲು ನೇಮಕವಾಗಿದ್ದುದು ನಮ್ಮ ದೇಶದ ಬರ್ಖಾ ದತ್ ಎಂಬಾಕೆ. ಆಕೆ 'ಭಾರತದ ಓಪ್ರಾ' ಎನ್ನುವವರಿದ್ದಾರೆ, ಇರಲಿ. ಓಪ್ರಾ ಎದುರು ಬರ್ಖಾ ವಾಮನಳಾಗಿ ಬಿಟ್ಟಳೆಂದು ಒಂದು ವ್ಯಾಖ್ಯಾನ. ವಾಮನ ಬಲಿಯನ್ನು ತುಳಿದ, ಇಲ್ಲಿಯ ವಾಮನ ಓಪ್ರಾಳಿಗೆ ಬಲಿಯಾದಳು, ಎಂದು ಶೋಕಿಸಿದವರೂ ಇದ್ದಾರೆ. ಜೈಪುರದ ಸಂಘಟಕರ ವಸಾಹತು ಮನಸ್ಸನ್ನು ಮೀರಿದ್ದು ದೆಹಲಿಯ ಸರ್ಕಾರದ ಗೃಹಖಾತೆ ಸಚಿವರ ವಸಾಹತು ಮನಸ್ಸು. ಒಬ್ಬ ಪತ್ರಿಕಾ ಛಾಯಾಚಿತ್ರಕಾರ ಓಪ್ರಾಳ ಫೋಟೋ ತೆಗೆಯಲು ಸ್ವಲ್ಪ ಸನಿಹಕ್ಕೆ ಹೋದುದಕ್ಕೆ ಆಕೆಯ ಅಂಗರಕ್ಷಕ (ಅವನನ್ನು ಅಮೆರಿಕಾದಿಂದ ತಾನೇ ಕರೆತಂದಿದ್ದಳು, ಇಲ್ಲದಿದ್ದರೆ ಇಲ್ಲಿ ಆಕೆಯ ರಕ್ಷಕರಿರುವುದಿಲ್ಲವಲ್ಲ, ಪಾಪ!) ಆ ಛಾಯಾಚಿತ್ರಕಾರನನ್ನು

*(೭ನೇ ಪುಟಕ್ಕೆ)*

ತಿಂಗಳ ಪತ್ರಿಕೆ
**ಹೊಸತು**
ನಿತ್ಯದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ

**ಸಂಪುಟ-೧೩ ಸಂಚಿಕೆ-೮ ಮಾರ್ಚ್ ೨೦೧೨**

**ಸಂಪಾದಕ**
ಜಿ. ರಾಮಕೃಷ್ಣ

**ಸಹಸಂಪಾದಕರು**
ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ಕೆ. ಎಸ್. ಪಾರ್ಥಸಾರಥಿ
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**
ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**
ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**
**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**
ನವಕರ್ನಾಟಕ ಪ್ರಕಾಶನ
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೯೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http : //navakarnataka.blogspot.com**
**http : //hosathu.blogspot.com**

# ಮತೀಯ ವಾದಿಗಳ ಅಟ್ಟಹಾಸ ಮಟ್ಟ ಹಾಕಬೇಕು




ಕೇಸರೀಕರಣ, ಮೌಲ್ವೀಕರಣ ಎರಡೂ ನಮ್ಮ ದೇಶದ ಬಹುಮುಖಿ ಸಂಸ್ಕೃತಿಗೆ, ನಮ್ಮ ಸಂವಿಧಾನದ ಆಶಯಗಳಿಗೆ ಮಾರಕ. ಅಧಿಕಾರಾರೂಢ ಸರಕಾರ ಎಲ್ಲಿಯವರೆಗೆ ಮತೀಯ ರಾಜಕಾರಣದ ಮೇಲೆ ಕಣ್ಣಿರಿಸಿ, ಮೂಲಭೂತವಾದಿಗಳ ಪುಂಡಾಟಿಕೆಗಳಿಗೆ, ಒತ್ತಾಯಗಳಿಗೆ ಮಣಿಯುವುದೋ ಅಲ್ಲಿಯವರೆಗೆ ಭವಿಷ್ಯ ಆತಂಕಕಾರಿ ಹಾಗೂ ಫಾಸಿಸ್ಟ್ ಪ್ರವೃತ್ತಿಗಳಿಗೆ ಉತ್ತೇಜನಕಾರಿ. ಇತ್ತೀಚೆಗೆ ಸಂಭವಿಸಿದ ಕೆಲವು ಘಟನೆಗಳನ್ನು ಅವಲೋಕಿಸಿದರೆ ಅದು ಎಷ್ಟು ನಿಜ ಎನ್ನುವುದು ಸಾಬೀತಾಗುತ್ತದೆ. ಜೈಪುರದಲ್ಲಿ ಜರುಗಿದ ಸಾಹಿತ್ಯ ಉತ್ಸವದಲ್ಲಿ ಲೇಖಕ ಸಲ್ಮಾನ್ ರಷ್ದೀ ಭಾಗವಹಿಸಲು ಸಾಧ್ಯವಾಗದೇಹೋದದ್ದು ಜಗತ್ತಿನ ಮುಂದೆ ತಲೆ ತಗ್ಗಿಸುವಂಥ ಪ್ರಕರಣ. ರಾಜಾಸ್ಥಾನ ಸರಕಾರದ ಬೇಜವಾಬ್ದಾರಿ ವರ್ತನೆ, ಹಾಗೂ ಪುಕ್ಕಲುತನವೇ ಇದಕ್ಕೆ ಮೂಲ ಕಾರಣ. ಕೆಲವು ಮುಸ್ಲಿಮ್ ಮೂಲಭೂತವಾದಿಗಳ ಒತ್ತಾಯಕ್ಕೆ ಬಲಿಯಾದ ಸರಕಾರ ಹೊಣೆಗಾರಿಕೆಯಿಂದ ನುಣುಚಿಕೊಳ್ಳಲು ಭದ್ರತೆ ಮತ್ತು ಕಾನೂನು ಸುವ್ಯವಸ್ಥೆಗೆ ಭಂಗವಾಗುವ ನೆಪವನ್ನು ನೀಡಿತು. ಅಂತರರಾಷ್ಟ್ರೀಯ ಖ್ಯಾತಿಯ, ಭಾರತೀಯ ಸಂಜಾತ ಲೇಖಕನಿಗೆ ರಕ್ಷಣೆ ಒದಗಿಸಲಾಗದ ಸರಕಾರಕ್ಕೆ ಮುಖಭಂಗವಾಯಿತು. ಮೂಲಭೂತವಾದಿಗಳ ಬೆದರಿಕೆಗೆ ತಲೆಬಾಗಿದ ಸರಕಾರ ರಷ್ದಿಯವರ ನಿಷೇಧಿತ ಕಾದಂಬರಿಯ ಭಾಗಗಳನ್ನು ಪಠಿಸಿದ ಅಪಾದನೆಯ ಮೇಲೆ ಕ್ರಮ ಕೈಗೊಳ್ಳಲು ಮುಂದಾಯಿತು. ಅದರ ಬೆನ್ನಲ್ಲೇ ಹೈದರಾಬಾದ್‌ನಲ್ಲಿ ಈ ಪ್ರಕರಣ ಕುರಿತು ಆಯೋಜಿಸಲಾಗಿದ್ದ ವಿಚಾರ ಸಂಕಿರಣವನ್ನು ಮಜ್ಲಿಸ್ ಬಚಾವೋ ತೆಹ್ರೀಕ್ ಎಂಬ ಸಂಘಟನೆಯ ಒತ್ತಾಯದ ಮೇಲೆ ಕೈಬಿಡಲಾಯಿತು. ಅದೇ ರೀತಿಯಲ್ಲಿ ಕೊಲ್ಕತ್ತಾದ ಪುಸ್ತಕ ಮೇಳದಲ್ಲಿ ನಡೆಯಬೇಕಾಗಿದ್ದ ಬಾಂಗ್ಲಾ ದೇಶದ ಲೇಖಕಿ ತಸ್ಲಿಮಾ ನಸ್ರೀನ್‌ರ ಆತ್ಮಕಥೆಯ ಲೋಕಾರ್ಪಣೆಯ ಸಮಾರಂಭವನ್ನು ರದ್ದುಗೊಳಿಸಲಾಯಿತು. ಈ ಪುಸ್ತಕವು ಪ್ರಕಾಶಕರ ಮಳಿಗೆಯಲ್ಲಿ ಒಂದೇ ದಿನ ಒಂದು ಸಾವಿರ ಪ್ರತಿಗಳು ಮಾರಾಟವಾದುವು. ಭಾರತ ಸರಕಾರ ಈ ಲೇಖಕಿಗೆ ಆಶ್ರಯ ನೀಡಿ, ರಕ್ಷಣೆ ನೀಡಲು ವಿಫಲಗೊಂಡು, ಈಕೆ ಬೇರೆ ದೇಶಕ್ಕೆ ವಲಸೆ ಹೋಗಬೇಕಾಗಿಬಂದ ಪ್ರಕರಣವನ್ನು ನೆನಪಿಸಿಕೊಳ್ಳಬಹುದು. ಇಂಥ ತಲೆತಗ್ಗಿಸುವ ಪ್ರಕರಣಗಳು ನಡೆಯುತ್ತಲೇ ಇವೆ.

ಸಂಘಪರಿವಾರದ ವಿದ್ಯಾರ್ಥಿ ಸಂಘಟನೆ ಅಖಿಲ ಭಾರತ ವಿದ್ಯಾರ್ಥಿ ಪರಿಷತ್ತಿನ ಗೂಂಡಾಗಿರಿಗೆ ನಮ್ಮ ವಿಶ್ವವಿದ್ಯಾನಿಲಯಗಳ ಅಧಿಕಾರಿವರ್ಗ ತಲೆ ತಗ್ಗಿಸುತ್ತಿರುವುದು ನಿಜಕ್ಕೂ ಹಾನಿಕರ. ಇದಕ್ಕೆ ಅನೇಕ ಉದಾಹರಣೆಗಳಿವೆ. ಪುಣೆಯ ಸಿಂಬಯೋಸಿಸ್ ವಿಶ್ವವಿದ್ಯಾಲಯ ಕಾಶ್ಮೀರವನ್ನು ಕುರಿತ ವಿಚಾರ ಸಂಕಿರಣವನ್ನು, ಸಾಕ್ಷ್ಯಚಿತ್ರ ಪ್ರದರ್ಶನವನ್ನು ರದ್ದುಗೊಳಿಸಿದ್ದು ಇತ್ತೀಚಿನ ಪ್ರಕರಣ. ಇದಕ್ಕೆ ಮುಂಚೆ ದೆಹಲಿ ವಿಶ್ವವಿದ್ಯಾನಿಲಯ ಲೇಖಕ ಎ. ಕೆ. ರಾಮಾನುಜನ್‌ರ ರಾಮಾಯಣ ಕುರಿತ ಪ್ರಬಂಧವನ್ನು ಪಠ್ಯದಿಂದ ಕೈಬಿಡಲು ಸಮ್ಮತಿಸಿದ್ದು ದೊಡ್ಡ ಅಪಚಾರ. ಇದುವರೆಗೆ ಆ ಪ್ರಬಂಧಕ್ಕೆ ಯಾವ ಆಕ್ಷೇಪವೂ ಇರಲಿಲ್ಲ, ಏಕಾಏಕಿಯಾಗಿ ಹಿಂದೂ ಮೂಲಭೂತವಾದಿಗಳು, ರಾಮಭಕ್ತರು ಅನಗತ್ಯ ಧೂಳೆಬ್ಬಿಸಿದರು. ಹಾಗೆಂದಮಾತ್ರಕ್ಕೆ ನೂರಾರು ರಾಮಾಯಣಗಳಿರುವ ಸತ್ಯವನ್ನು ಮುಚ್ಚಿಹಾಕಲಾಗುವುದಿಲ್ಲ. ಸಂಘಪರಿವಾರದ ಸಂಘಟನೆಗಳಾದ ಹಿಂದೂ ಜಾಗರಣ ಸಮಿತಿ, ಬಜರಂಗದಳ, ಶ್ರೀರಾಮ ಸೇನೆ ಮೊದಲಾದುವು ಸಂಸ್ಕೃತಿಯ ರಕ್ಷಣೆಯ ಹೆಸರಿನಲ್ಲಿ ನಡೆಸುತ್ತಿರುವ ದೌರ್ಜನ್ಯಗಳು ದಿನೇ ದಿನೇ ಹೆಚ್ಚುತ್ತಿವೆ. ಪುಣೆಯ ಭಂಡಾರ್ಕರ್ ಇನ್‌ಸ್ಟಿಟ್ಯೂಟ್‌ನ ಮೇಲೆ ನಡೆಸಿದ ದಾಳಿಯಲ್ಲಿ ಅಮೂಲ್ಯ ಗ್ರಂಥಗಳು ನಾಶವಾದ್ದು, ನಾಡಿನ ಇತಿಹಾಸಕಾರರ ವಿರುದ್ಧವಾಗಿ ನಡೆಸಿರುವ ಪುಂಡಾಟಿಕೆಗಳು ಮರೆಯುವಂಥ ಘಟನೆಗಳಲ್ಲ. ಇವೆಲ್ಲ ಹಿಂದುತ್ವವಾದಿಗಳ ಫಾಸಿಸ್ಟ್ ಪ್ರವೃತ್ತಿಗೆ ಉದಾಹರಣೆಗಳಾಗಿವೆ.

ಇನ್ನು ಭಾರತೀಯ ಜನತಾಪಕ್ಷ ಅಧಿಕಾರದಲ್ಲಿರುವ ರಾಜ್ಯಗಳಲ್ಲಿ ಎಲ್ಲ ಕ್ಷೇತ್ರಗಳಲ್ಲೂ, ಮುಖ್ಯವಾಗಿ ವಿದ್ಯಾಭ್ಯಾಸ ಕ್ಷೇತ್ರದಲ್ಲಿ ಕೇಸರೀಕರಣದ ಪ್ರಕ್ರಿಯೆ ಬಿರುಸಿನಿಂದ ಸಾಗುತ್ತಿದೆ. ನಮ್ಮ ರಾಜ್ಯದಲ್ಲಿ ಪಠ್ಯಪುಸ್ತಕಗಳ ಕೇಸರೀಕರಣದ ಬಗ್ಗೆ ಈಗ ದೊಡ್ಡ ವಿವಾದವೇ ಎದ್ದಿದೆ. ಸರಕಾರ ಶಾಲೆಗಳಲ್ಲಿ ಭಗವದ್ಗೀತೆ ಬೋಧನೆಗೆ ಚಿಂತನೆ ನಡೆಸಿದೆ. ಪ್ರಗತಿಪರ ಚಿಂತಕರಿಂದ, ಬುದ್ಧಿಜೀವಿಗಳಿಂದ, ಶಿಕ್ಷಕರಿಂದ ಇದಕ್ಕೆ ವಿರೋಧ ವ್ಯಕ್ತವಾಗುತ್ತಿರುವುದೊಂದೇ ಶ್ರೀರಕ್ಷೆ. ಸಾಹಿತ್ಯ ಕೃತಿಗಳ ಬಗ್ಗೆ ಸಂಕುಚಿತ ಮನೋಭಾವ, ಜಾತಿವಾದಿಗಳ ಅಸಹನೆ, ಪ್ರತಿಭಟನೆ ನಮ್ಮ ರಾಜ್ಯಕ್ಕೆ ಹೊಸದೇನಲ್ಲ. ಸರಕಾರ ಇಂಥ ಒತ್ತಡಗಳಿಗೆ ಮಣಿದು ತಲೆಬಾಗಿ ಪುಸ್ತಕಗಳನ್ನು ನಿಷೇಧಿಸಿರುವುದು ಖಂಡನೀಯ. ಉದಾಹರಣೆಗೆ, ಕೆ. ವಿ. ನಾರಾಯಣರವರ 'ಧರ್ಮಕಾರಣ', ಬಂಜಗೆರೆ ಜಯಪ್ರಕಾಶ ಇವರ 'ಆನುದೇವಾ ಹೊರಗಣವನು' ಪುಸ್ತಕಗಳು. ಮಾಸ್ತಿಯವರ 'ಚಿಕವೀರ ರಾಜೇಂದ್ರ', ಹೆಚ್. ಎಸ್. ಶಿವಪ್ರಕಾಶ್‌ರವರ 'ಮಹಾಚೈತ್ರ' ಇಂಥದೇ ಆಕ್ಷೇಪಗಳಿಗೆ ಗುರಿಯಾಗಿವೆ. ಇತ್ತೀಚಿನ ಪ್ರಕರಣ ಎಂದರೆ ಶ್ರೀಮತಿ ನಾಗವೇಣಿ ಅವರ 'ಗಾಂಧಿ ಬಂದ' ಕಾದಂಬರಿ ವಿವಾದ. ಸಣ್ಣ ಸಮುದಾಯವೊಂದರ ಆಕ್ಷೇಪವೇ ಇದಕ್ಕೆ ಕಾರಣ. ಹೀಗೇ ಮುಂದುವರಿದರೆ ಲೇಖಕರು ಕೃತಿರಚನೆಗೆ ಮುನ್ನ ಇಂಥ ಸಂಪ್ರದಾಯವಾದಿಗಳ ಸಮ್ಮತಿ ಪಡೆಯಬೇಕಾದ ದಿನ ಬಂದೀತೇನೊ:
ಅದಕ್ಕೆ ಮುನ್ನವೇ ಮತೀಯವಾದಿಗಳ ಅಟ್ಟಹಾಸವನ್ನು ಮಟ್ಟಹಾಕುವುದು ಅಗತ್ಯ.

ಜಿ. ರಾಮಕೃಷ್ಣ

ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ



# ಅಶ್ಲೀಲ ಚಿತ್ರ ವೀಕ್ಷಣೆಯ ನೀತಿಪಾಠ

**ಮೂ**ರು ಮಂದಿ ಬಿಜೆಪಿ ಸದಸ್ಯರಿಗೆ ಶಾಸನಸಭೆಯ ಹೊರಗೆಲ್ಲೂ ಮೊಬೈಲುಗಳಲ್ಲಿ ಅಶ್ಲೀಲ ಚಿತ್ರ ನೋಡಲು ಪುರಸೊತ್ತು ಸಿಗಲಿಲ್ಲ. ಅವರೆಲ್ಲಾ ಮಂತ್ರಿಗಳು ಬೇರೆ. ಮಂತ್ರಿಗೆ ಪ್ರಾಸ ಕೂಡುವ ಪದವನ್ನು ಹೇಳುವುದು ಬೇಡ. ನಾಯಿಗೆ ವಿಶೇಷಣವಾಗಿ ಅದನ್ನು ಬಳಸುತ್ತಾರೆ. ಮಹಿಳಾ ಕಲ್ಯಾಣ, ದೇವಸ್ಥಾನ, ಸಹಕಾರ – ಇವುಗಳನ್ನು ಇವರು ಎಷ್ಟು ಚೆನ್ನಾಗಿ ನಿಭಾಯಿಸಿದ್ದಾರೆ! ಅವರ ಮೋಜಿನ ಬಗ್ಗೆ ಅಗಾಧವಾದ ನೈತಿಕತೆಯ ಪ್ರವಚನಗಳು ಹೊರಬಂದಿವೆ. ಬೇರೆ ಕೀಳು ಅಪರಾಧಗಳು ನಡೆದಾಗ ಮತ್ತೆ ಅವನ್ನು ಪುನರುಚ್ಚರಿಸಲು ಇದೇ ನೀತಿವಂತರು ಕಾದು ಕೂತಿರುತ್ತಾರೆ, ಅನುಮಾನವಿಲ್ಲ. ಏಕೆಂದರೆ, ಮಕ್ಕಳ ಮೇಲೆ ಅತ್ಯಾಚಾರ, ಮಹಿಳೆಯರ ಮೇಲೆ ಸಾಮೂಹಿಕ ಅತ್ಯಾಚಾರ, ಮುಂತಾದವುಗಳಿಗೆ ನಮ್ಮಲ್ಲೇನೂ ಕೊರತೆ ಇಲ್ಲವಲ್ಲ! ಈ ಮಂತ್ರಿ ತ್ರಯರಿಗೆ ಅಷ್ಟೋತ್ತರ ಶತನಾಮಾವಳಿ ಹೇಳಲಾಗಿದೆ : ಲಂಪಟರು, ತಲೆತಿರುಕರು, ಕೊಳಕರು, ಹೀನಮತಿಗಳು, ಹೀಗೆ. ಸಂಪ್ರದಾಯಸ್ಥರು, ಪಕ್ಕಾ ಸನಾತನಿಗಳು, ಜಡ್ಡು ಮತಾಂಧರು, ನೈತಿಕತೆಯ ಕಟ್ಟಾಳುಗಳು, ಇವರೆಲ್ಲಾ ಸಾರ್ವಜನಿಕ ಜೀವನದಲ್ಲಿ ಮುಚ್ಚಿಡುವಂಥದೇನೂ ಇರಬಾರದೆಂದು ಹೇಳಿ ತಮ್ಮ ಅಸಮಾಧಾನ ಹೊರಚೆಲ್ಲಿದ್ದಾರೆ. ''ಪ್ರಜಾಪ್ರಭುತ್ವದ ದೇಗುಲ''ದಲ್ಲಿ ಇಂಥದು ಘಟಿಸಿತೇ ಎಂದು ವ್ಯಥಿಸಿ ಚುನಾಯಿತ ಪ್ರತಿನಿಧಿಗಳ ಕೀಳು ನೈತಿಕತೆಯನ್ನು ಸಿಟ್ಟಿನಿಂದ ಖಂಡಿಸಲಾಗಿದೆ. ಸಚಿವ ಸ್ಥಾನಕ್ಕೆ ರಾಜಿನಾಮೆ ಸಾಲದು, ಅವರು ಶಾಸನಸಭೆಯನ್ನು ತೊರೆಯಬೇಕು ಎಂದವರೂ ಇದ್ದಾರೆ. ಅಣ್ಣಾ ಹಜಾರೆ ಹೇಗೂ ಈಚಿನ ದಿನಗಳಲ್ಲಿ ದೇಶದ ಸಾಕ್ಷಿಪ್ರಜ್ಞೆ ತಾನೆ, ಇವರನ್ನೆಲ್ಲಾ ಜೈಲಿನಲ್ಲಿ ಕೂಡಿಹಾಕಬೇಕೆಂದು ಅವರು ಆಗ್ರಹಿಸಿದ್ದಾರೆ.

ಈ ಸಚಿವರ ವಿಕೃತ ಮನಸ್ಸಿನಿಂದ ರೋಸಿಹೋದ ಕೆಲವು ಮಾಧ್ಯಮಗಳು ಅದಕ್ಕಿಂತಲೂ ಹೆಚ್ಚು ವಿಕೃತವಾದ ಪ್ರತಿಕ್ರಿಯೆ ನೀಡಿವೆ : ಈಗಿನ ದಿನಗಳಲ್ಲಿ ಶಾಸನಸಭೆಗೆ ಆರಿಸಿ ಬರುವವರು ಬಹುತೇಕ ಇಂಥವರೇ, ಅವರ ಹಿನ್ನೆಲೆಯೇ ಹಾಗೆ, ಅವರದು ಅಸಂಸ್ಕೃತ ಮನಸ್ಸು, ತಲೆ ತೊಳೆದುಕೊಳ್ಳದವರ ನಡುವಿನಿಂದ ಬಂದಿರುವವರ ಚಾಳಿಯೇ ಅದು, ಇತ್ಯಾದಿ. ಈ ವ್ಯಾಖ್ಯಾನ ನೀಡಿದವರು ತಾವು ಅತಿ ಶ್ರೇಷ್ಠರೆಂಬ ಭ್ರಾಂತಿಯಲ್ಲಿದ್ದಾರೆ. ಅವರ ಪ್ರಕಾರ ನಮ್ಮ ರಾಜಕೀಯ ವ್ಯವಸ್ಥೆಯು ಇಂಥವರಿಗೆ ಆಶ್ರಯ ನೀಡಬಾರದಿತ್ತು. ಈ ಅಭಿಪ್ರಾಯವನ್ನು ಮಾನ್ಯ ಮಾಡಿದರೂ ಒಂದು ಸ್ವಾರಸ್ಯಕರ ವ್ಯಂಗ್ಯ ಅದರಲ್ಲಡಗಿರುತ್ತದೆ : ಮಡಿವಂತ, ಶ್ರೇಷ್ಠ, ಪ್ರತಿಭಾವಂತ ಅಲ್ಪಸಂಖ್ಯಾತರು ಇಚ್ಛಿಸದಿದ್ದರೂ ಪ್ರಜಾಪ್ರಭುತ್ವವು ಅತಿಸಾಮಾನ್ಯರಿಗೆ ಜನಪ್ರತಿನಿಧಿಗಳಾಗುವ ಅವಕಾಶ ಕೊಟ್ಟಿದೆ, ಎಂದು.

ಸಚಿವರ ವರ್ತನೆ ಖಂಡನೀಯ, ಅದನ್ನು ಸರ್ವಥಾ ಸಮರ್ಥಿಸಲಾಗದು, ಅವರಿಗೆ ಶಾಸನಸಭೆಯ ಮರ್ಯಾದೆ ಸಹ ಲೆಕ್ಕಕ್ಕೆ ಬರುವುದಿಲ್ಲ, ಎಂಬುವೆಲ್ಲಾ ನಿಜ. ಅದನ್ನು ಎಷ್ಟು ಒತ್ತಿಹೇಳಿದರೂ ಸಾಲದು. ಅವರು ಸಭೆಯ ನಡಾವಳಿಯ ನಿಯಮವನ್ನು ಗಾಳಿಗೆ ತೂರಿದರು, ಮಾಹಿತಿ ತಂತ್ರಜ್ಞಾನ ಕಾಯಿದೆಯನ್ನು ಮುರಿದರು. ಅದಕ್ಕೆ ಅವರಿಗೆ ಶಿಕ್ಷೆ ಖಂಡಿತ ಆಗಬೇಕು. ಸಾರ್ವಜನಿಕರ ಬೈಗುಳ ತಿಂದ ಸಚಿವರು ಈಗ ಶಾಸನಸಭೆಯ ಸಮಿತಿಯೆದುರು ಬರಬೇಕಾಗಿದೆ. ಅಂತಹ ಸಮಿತಿ ಏಕಾದರೂ ಬೇಕು, ಅವರ ಅಪರಾಧ ಸಾಬೀತಾಗಿದೆಯಲ್ಲಾ, ಎಂದು ವಿರೋಧ ಪಕ್ಷ ಹೇಳಿದೆ. ಒಟ್ಟಿನಲ್ಲಿ ಅಶ್ಲೀಲತೆಯ ಹಗರಣವು ನಮ್ಮ ನಡುವಿನ ಸಾಮಾಜಿಕ ಜೀವನದಲ್ಲಿ ಕಾಣಬರುವ ದುರ್ನಡತೆಯ ಒಂದು ಕಪ್ಪು ಚಿತ್ರವನ್ನು ತೆರೆದಿಟ್ಟಿದೆ. ತೆರೆಮರೆಯಲ್ಲಿ ಏನೂ ನಡೆಯುವುದೇ ಇಲ್ಲವೇನೋ ಎಂಬಂತಹ ಹುಂಬ ನಂಬಿಕೆಗೆ ಇದು ಭಾರಿ ಪೆಟ್ಟು ಕೊಟ್ಟಿದೆ. ಇದರಿಂದ ಪಾಠ ಕಲಿಯಬೇಕಾದ್ದು ಬೇಕಾದಷ್ಟಿದೆ; ಅದಕ್ಕೆ ನಾವು ಮೊದಲು ಮಾಡಬೇಕಾದ್ದು ಉಪದೇಶ ನೀಡುವ ಕೆಟ್ಟಚಾಳಿಯನ್ನು ಬಿಡುವುದು, ನಾವು ಮಾತ್ರ ಅಪರಾಧಾತೀತರು ಎಂಬ ಬಿಗುಮಾನವನ್ನು ಹೊರಗಟ್ಟುವುದು. 'ಪ್ರಜಾಪ್ರಭುತ್ವದ ದೇಗುಲ'ದ ಮಾತನಾಡುವುದು ನಿರರ್ಥಕ. ಆದರೆ ಹಾಗೆ ಮಾತನಾಡುವುದರಲ್ಲಿ ಎರಡು ಉಪಯೋಗಗಳಿವೆ : (ಅ) ನಮ್ಮ ಸಾಮೂಹಿಕ ಸಾಕ್ಷಿಪ್ರಜ್ಞೆ ಶುಭ್ರವಾಗಿದೆಯೆಂಬ ಭಾವನೆ ಮೂಡಿ, ಆಹಾ, ನಾವೆಷ್ಟು ಸಜ್ಜನ, ಎಂಬ ಉದ್ಗಾರ ತೆಗೆಯಬಹುದು; ಮತ್ತು (ಆ) ಸಚಿವರು ಅನೈತಿಕ ಬಾಳಿನವರೆಂದು ಬಗೆದಾಗ ಸಮಾಜದ ಪಿಡುಗುಗಳಿಗೆಲ್ಲಾ ಅವರೇ ಬಾಧ್ಯರು, ಅದರಲ್ಲಿ ನಮ್ಮ ಪಾತ್ರವೇನೂ ಇಲ್ಲ, ಎಂಬ ಆತ್ಮ ಸಂತೋಷ ಅಥವಾ ತೃಪ್ತಿಯಿಂದ ಬೀಗಬಹುದು. ಅಲ್ಲಿಗೆ ನಮ್ಮ ಜವಾಬ್ದಾರಿ ಮುಗಿಯಿತು; ನಮ್ಮ ವ್ಯವಸ್ಥೆಯ ಆಂತರಿಕ ಹುಳುಕುಗಳನ್ನು ಹೆಕ್ಕಿ ತೆಗೆಯಬೇಕಾಗಿಲ್ಲ, ಆತ್ಮಾವಲೋಕನ ಅನಗತ್ಯವಾಯಿತು.

ಈ ಅಶ್ಲೀಲತೆಯ ಪ್ರಸಂಗವನ್ನು ಬೇರೊಂದು ನಿಟ್ಟಿನಿಂದ ನೋಡಿದರೆ ಪ್ರಯೋಜನವಾದೀತು. ಅದಕ್ಕೆ ಪೂರ್ವಭಾವಿಯಾಗಿ ತಾವೇ ಮಹಾನೀತಿವಂತರೆಂದುಕೊಳ್ಳುವ ಪ್ರವೃತ್ತಿಯನ್ನು ಬಿಡಬೇಕು. ಸಚಿವರ ಅಶ್ಲೀಲತೆಯಿಂದ ಮನನೊಂದವರು ತಮಗೆ ಹಾಕಿಕೊಳ್ಳಬಹುದಾದ ಪ್ರಶ್ನೆ ಇದು : ಯಾವುದು ಘೋರ ? ಈ ಅಶ್ಲೀಲತೆಯೋ ಅಥವಾ ಮುಂದಿನ ಕೆಲವು ಪ್ರಸಂಗಗಳೋ ? ಉದಾಹರಣೆಗೆ, ರೈಲ್ವೆ ನಿಲ್ದಾಣಗಳಲ್ಲಿ ತೊರೆಯಲ್ಪಟ್ಟ ಮಕ್ಕಳು, ಅನಾಥಾಶ್ರಮಗಳಲ್ಲಿರುವ ಮಕ್ಕಳು, ಅಷ್ಟೇ ಏಕೆ, ಕೆಲವು ಶಾಲೆಗಳ ಮಕ್ಕಳ ಮೇಲೂ ಅತ್ಯಾಚಾರ ಜರುಗುತ್ತದಲ್ಲ, ಏನಿದು ಅಸಹ್ಯ ! ಮನೆಗೆಲಸಕ್ಕೆ ಬಂದ ಮಹಿಳೆ, ಅಂಗನವಾಡಿ ಕಾರ್ಯಕರ್ತೆ, ಆಸ್ಪತ್ರೆಯ ಆಯಾ, ಕಡಿಮೆ ಕೂಲಿಯ ಹೆಣ್ಣು ಕೂಲಿ, ಶಾಲೆಯ ಅಧ್ಯಾಪಕಿ, ಇವರೆಲ್ಲರ ಮೇಲೆ ಅವರವರ ಕೆಲಸದ ಜಾಗಗಳಲ್ಲಿ ಎಂತೆಂತಹ ಪಾತಕಗಳು ನಡೆಯುತ್ತವಲ್ಲಾ, ಆಗೆಲ್ಲಾ ನಮ್ಮ ನೈತಿಕ ಪ್ರಜ್ಞೆ ಏಕೆ ಕದಡುವುದಿಲ್ಲ? ಆ ಪ್ರಜ್ಞೆಯನ್ನು ಕಳೆದುಕೊಂಡಿದ್ದೇವೆಂಬ ಪ್ರಜ್ಞೆಯಾದರೂ ಉಳಿದಿದೆಯೆ ? ದೆಹಲಿಯ ಪ್ರತಿಷ್ಠಿತ ವೈದ್ಯಕೀಯ ಸಂಸ್ಥೆಯಲ್ಲಿ ಜೀವಕ್ಕೆ ಆ ಮಗು ಫಾಲಕ್ ಸೆಣಸುತ್ತಿದ್ದಾಳಲ್ಲ, ಅದಕ್ಕೆ ನಮ್ಮ ನೈತಿಕ ವಿವರಣೆ ಏನು ? ಅವಳ ಮೇಲೂ ಅತ್ಯಾಚಾರವೆ! ಇತ್ತೀಚೆಗೆ ಒಬ್ಬ ಬಸುರಿಯನ್ನು ಒಂದು ಆಸ್ಪತ್ರೆ



**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೫೦/- |
| ಮೂರು ವರ್ಷಕ್ಕೆ | ರೂ. ೩೫೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨

ಒಳಕ್ಕೆ ಬಿಟ್ಟುಕೊಳ್ಳಲಿಲ್ಲ, ಅವಳು ಬೀದಿಯಲ್ಲಿ ಮಗುವನ್ನು ಹೆತ್ತಳು. ಎಲ್ಲಿ ಹೋಗಿದೆ ನಮ್ಮ ನೈತಿಕ ಪ್ರಜ್ಞೆ? ಇದೇ ವಿಪರ್ಯಾಸ. ಇಂಥವಕ್ಕೆ ಮನ ಮಿಡಿಯುವುದಿಲ್ಲ; ರಾಜಕೀಯ ವ್ಯಕ್ತಿಯ ಅವಿವೇಕವನ್ನು ಮೂದಲಿಸುವಾಗಷ್ಟೇ ನಾವು ಜಾಗೃತರಾಗಬೇಕೇನು? ಅದಕ್ಕಿಂತಲೂ ಅಸಹ್ಯವಾದವು ಜರುಗಿದಾಗ ಮೂಕರೇಕಾಗುತ್ತೇವೆ? ರೈತರ ಆತ್ಮಹತ್ಯೆಗಳು, ಜನ ಹೊಟ್ಟೆಗಿಲ್ಲದೆ ಸಾಯುವುದು, ಮಕ್ಕಳ ಅಪೌಷ್ಟಿಕತೆ, ಮಾನವ ಅಭಿವೃದ್ಧಿ ಸೂಚ್ಯಂಕಗಳಿಂದ ಕಾಣಬರುವ ದೇಶದ ಅಧಃಪತನ, ಜನಸಂಖ್ಯೆಯ ಶೇ. ೮೦ರಷ್ಟು ಮಂದಿ ದೂರಕ್ಕೆ ದೂಡಲ್ಪಟ್ಟಿರುವುದು, ಅವರ ಅಧೋಗತಿಯ ಅಸ್ತಿತ್ವ, ಹೀಗೆ ಪಟ್ಟಿ ಮಾಡಿದರೆ ಕೊನೆಯೆಲ್ಲಿ! ತಿರಸ್ಕಾರಕ್ಕೆ ಯೋಗ್ಯರಾಗಿರುವ ಈ ಸಚಿವರುಗಳಂತೆ ಸಮಾಜದ ಬೇರೆ ವ್ಯಕ್ತಿಗಳೂ ತಮ್ಮ ಅನುಕೂಲಕ್ಕೆ ತಕ್ಕಂತೆ ಎಷ್ಟೊಂದು ಅನಿಷ್ಟಗಳೊಡನೆ ರಾಜಿ ಮಾಡಿಕೊಂಡುಬಿಟ್ಟಿಲ್ಲ? ಕಮ್ಯುನಿಸ್ಟ್ ಪ್ರಣಾಲಿಕೆಯಲ್ಲಿ ಇಂತಹ ''ಶಿಷ್ಟ''ರ ಬಗ್ಗೆ ಬರುವ ಮಾತು ಹೀಗಿದೆ: ''ಸ್ವ-ಹಿತಾಸಕ್ತಿಗಳೆಂಬ ಹೆಪ್ಪುಗಟ್ಟಿದ ನೀರಿನಲ್ಲಿ ತಮ್ಮ ಅಂತಸ್ಸಾಕ್ಷಿಯನ್ನು ಮುಳುಗಿಸಿ ಬಿಟ್ಟಿರುವವರು.'' ಅಂತಹ ''ಶಿಷ್ಟ''ರ ಜೊತೆ ನಾವು ಶಾಮೀಲಾಗಬೇಕೆ?

ಈ ಸಚಿವರ ಅಶ್ಲೀಲ ನಡತೆಯಿಂದ ''ಪ್ರಜಾಪ್ರಭುತ್ವದ ದೇಗುಲ''ದ ಅಪವಿತ್ರೀಕರಣ ವಾಯಿತು ಎಂಬ ಮಾತು ಪೂರ್ತಿ ಸತ್ಯ. ವರ್ಷೇ ವರ್ಷೇ ಇವೇ ದೇಗುಲಗಳಲ್ಲಿ ಕೆಲವೇ ನಿಮಿಷಗಳಲ್ಲಿ ಇಡೀ ವರ್ಷದ ಬಜೆಟ್‌ಗಳು ಯಾವ ಚರ್ಚೆಯೂ ಇಲ್ಲದೆ ಪಾಸಾಗುತ್ತವೆ, ಅತಿ ಪ್ರಮುಖ ಶಾಸನಗಳು ಕಿಂಚಿತ್ತೂ ಚರ್ಚೆಯಿಲ್ಲದೆ ಅಂಗೀಕೃತವಾಗುತ್ತಿವೆ. ಅದರಿಂದ ದೇಗುಲಗಳ ತೇಜೋವಧೆ ಕಮ್ಮಿಯೇನು? ಪಾರ್ಲಿಮೆಂಟಿನಲ್ಲಿ ಪ್ರಶ್ನೆ ಕೇಳಲು ಹಣ ಪಡೆಯುವ ಪಾಪಿಗಳಿದ್ದಾರೆ, ನಿರ್ಧಾರಕ ಘಳಿಗೆ ಬಂದಾಗ ಹಣ ಪಡೆದು ಮತ ಚಲಾಯಿಸುವ ಶಾಸಕರಿದ್ದಾರೆ. ಇದೆಲ್ಲಾ ಅಶ್ಲೀಲ ಎನಿಸಿಕೊಳ್ಳಬೇಡವೆ? ಹೋಗಲಿ, ಶಾಸನಸಭೆಗಳು ನಡೆಯುವ ಪರಿಯಾದರೂ ಹೇಗಿದೆ? ಗಲಭೆಯ ಕೇಂದ್ರಸ್ಥಾನಗಳಾಗಿ ಕೂತಿವೆ, ಅದು ಚುನಾಯಿತ ಪ್ರತಿನಿಧಿಗಳಿಗೆಲ್ಲಾ ತಿಳಿದಿದೆ. ಪ್ರಜಾಪ್ರಭುತ್ವವು ಇಷ್ಟೊಂದು ಅನೌಪಚಾರಿಕವಾಗಿಬಿಡುವುದು ಅಶ್ಲೀಲವಲ್ಲದೆ ಮತ್ತೇನು? ಕಾರ್ಪೊರೇಟ್ ಘಾತುಕರು, ಮುಸುಕಿನಲ್ಲೇ ಸಂಪತ್ತು ಲಪಟಾಯಿಸುವ ಬಂಡವಳಿಗರು, ಮರ್ಯಾದಸ್ಥರೆನಿಸಿ ಕೊಂಡುಬಿಟ್ಟಿರುವ ದಳ್ಳಾಳಿಗಳು, ಲಾಬಿಗಳಲ್ಲಿ ತೂರಿಕೊಂಡು ತಮಗೆ ಬೇಕಾದ ಆಜ್ಞೆ ಹೊರಡಿಸಿಕೊಳ್ಳುವವರು, ಇದೆಲ್ಲಾ ಶಾಸನಸಭೆ - ಪಾರ್ಲಿಮೆಂಟುಗಳಿಗೆ ಕಳಂಕ ತಂದಿರುವುದು ಕಡಿಮೆಯೆ? ಇಂತಹ ಪಿಡುಗುಗಳ ಹಿನ್ನೆಲೆಯಲ್ಲಿ ಅಶ್ಲೀಲ ಚಿತ್ರ ನೋಡುವ ಅಸಭ್ಯತೆ ಗೌಣವಾಗಿಬಿಡುತ್ತದೇನೊ!

'ಅಶ್ಲೀಲ ಚಿತ್ರ' ಎಂಬುದರ ಬಗೆಗೆ ಸಹ ನಮ್ಮಲ್ಲಿರುವ ಸಂದಿಗ್ಧತೆ ವಿಚಿತ್ರವಾದ್ದು. ಈ ಮೂರು ಸಚಿವರ ಪ್ರಸಂಗವು ಅದರತ್ತಲೂ ಗಮನ ಸೆಳೆಯುತ್ತದೆ. ಕಂಪ್ಯೂಟರ್ ಯುಗದಲ್ಲಿ ಗುಟ್ಟಾಗಿ ನೋಡಿಕೊಳ್ಳಲು ಏನಾದರೂ ಲಭ್ಯವಲ್ಲದ್ದು ಉಂಟೆ? ಅದೂ, ಎಲ್ಲ ವಯಸ್ಸಿನವರಿಗೆ; ಕೇವಲ ಯುವಕರಿಗೆ, ಮುದುಕರಿಗೆ, ಅಲ್ಲ. ಬಹಿರಂಗವಾಗಿ ಎಲ್ಲರೂ ಅದನ್ನು ಟೀಕಿಸುವವರೇ! ಆದರೆ ಅಂತರಂಗದಲ್ಲಿ ಎಷ್ಟೊಂದು ಮನಸ್ಸುಗಳು ಅದಕ್ಕೆ ಮುಗಿಬಿದ್ದಿವೆ, ಅಲ್ಲವೆ? ಅದಕ್ಕೆ ಪಾರವಿಲ್ಲ. ತಂತ್ರಜ್ಞಾನ ಎಷ್ಟು ''ಅನುಕೂಲ'' ಕಲ್ಪಿಸಿದೆಯೆಂದರೆ ಇಂದು ಜಾಗತಿಕ ಮಾರುಕಟ್ಟೆಯಲ್ಲಿ ಅಶ್ಲೀಲತೆಯ ಉದ್ಯಮ ವರ್ಷಕ್ಕೆ ಕನಿಷ್ಠ ಐವತ್ತು ಸಾವಿರ ಕೋಟಿ ರೂಪಾಯಿಗಳ ವ್ಯವಹಾರವಾಗಿದೆ. ಎಲ್ಲ ವಯಸ್ಸಿನವರು, ಎಲ್ಲ ಲಿಂಗದವರು, ಎಲ್ಲ ದೇಶಗಳವರು ಅದರ ಮೋಹಕ್ಕೆ ಒಳಗಾಗಿದ್ದಾರೆ. ಅಶ್ಲೀಲತೆಯ ವೈಶಿಷ್ಟ್ಯವೇನೆಂದರೆ ಅದಕ್ಕಿರುವ ಬೇಡಿಕೆ ಹಿಂಗಲಾರದಂಥದು. ಅಂದರೆ, ನಾವೆಲ್ಲಾ ಅನೀತಿವಂತರಾಗಿದ್ದೇವೆಂದು ಅರ್ಥವೆ? ಶ್ರೀರಾಮ ಸೇನೆ ಮತ್ತು ಸ್ವಾಮಿ ನಿತ್ಯಾನಂದ ಹೌದೆನ್ನುತ್ತಾರೆ! ಅವರು ನೈತಿಕತೆಯ ಮಹಾನ್ ರಕ್ಷಕರು ತಾನೆ? ಅನೈತಿಕತೆ ಹೆಚ್ಚಿದಂತೆ ಅಶ್ಲೀಲತೆ ಹೆಚ್ಚುತ್ತದೆಂಬ ಸುಲಭ ಸೂತ್ರ ನಮ್ಮಲ್ಲಿದೆ. ಆದರೆ ಅದರ ತರ್ಕ ಅಬದ್ಧ. ನಮ್ಮ ದೇಶವನ್ನು ಅಭಿವೃದ್ಧಿ ಹೊಂದುತ್ತಿರುವ ದೇಶವೆಂದು ಕರೆಯುತ್ತಾರೆ. ಅಂತಹ ದೇಶಗಳಲ್ಲಿ ಅಶ್ಲೀಲ ಚಿತ್ರಗಳ ತಯಾರಿಕೆ ಮತ್ತು ಪ್ರಸಾರ ಘನಘೋರ ಪರಿಣಾಮ ಉಂಟುಮಾಡುತ್ತದೆ. ಜಾಗತೀಕರಣ ಮತ್ತು ಕಾರ್ಪೊರೇಟ್ ದುರಾಸೆಗಳು 'ಅಭಿವೃದ್ಧಿ' ಎಂಬ ಅವತಾರ ತಾಳಿವೆ; ಕೊಳ್ಳುಬಾಕತನವನ್ನು ಆಧುನಿಕತೆ ಎನ್ನಲಾಗುತ್ತಿದೆ; ಎಲ್ಲವನ್ನೂ ಸರಕುಗಳನ್ನಾಗಿಸುವ ಸಂಸ್ಕೃತಿ ಹಬ್ಬಿದೆ; ಸ್ವಾರ್ಥವು ಮೌಲ್ಯವೆನಿಸಿದೆ. ಇದೆಲ್ಲಾ ಅಸಮಾನತೆಯನ್ನು ಎಗ್ಗಿಲ್ಲದೆ ಹೆಚ್ಚಿಸಿದೆ. ಇವೆಲ್ಲವುಗಳ ಅನಿಷ್ಟ ಪರಿಣಾಮವನ್ನು ಧಡಕ್ಕನೆ ಎತ್ತಿ ತೋರಿಸಲು ಅಶ್ಲೀಲತೆಯ ಜನಪ್ರಿಯತೆಗಿಂತಲೂ ಬೇರೊಂದು ನಿದರ್ಶನ ಬೇಕಿಲ್ಲ. ಎಷ್ಟು ದೊಡ್ಡ ಪ್ರಮಾಣದಲ್ಲಿ ಮಹಿಳೆಯರು ಮತ್ತು ಮಕ್ಕಳು ಈ ಅಶ್ಲೀಲತೆಯ ಉದ್ದಿಮೆಗೆ ಸೇರ್ಪಡೆಗೊಳ್ಳುತ್ತಿದ್ದಾರೆ ಎಂಬುದು ಆತಂಕದ ಸಂಗತಿ. 'ನೀಲಿ ಸಿನಿಮಾ ಚಿತ್ರಗಳು', ಮೈ ನೀವುವ ಘಟಕಗಳು, ಇತ್ಯಾದಿ ಕಡೆಗಳಲ್ಲಿ ಪ್ರವೇಶಿಸುವ ಮಹಿಳೆಯರಲ್ಲಿ ಅತಿ ಹೆಚ್ಚಿನವರು ಬಡಕುಟುಂಬ ಗಳವರು, ಅಶಕ್ತತೆಗೆ ಪಕ್ಕಾದವರು, ಅಂಚಿಗೆ ತಳ್ಳಲ್ಪಟ್ಟವರು. ಭಾರತದ ಮಾರುಕಟ್ಟೆಗೆ ಉಜ್ಬೆಕಿಸ್ತಾನ್ ಮತ್ತು ರಷ್ಯ ಸಹ ಈ ವರ್ಗದ ಮಹಿಳೆಯರನ್ನು ತಳ್ಳಿದೆ. ನೇಪಾಳ ಮತ್ತು ಈಶಾನ್ಯ ಭಾರತದ ಪಾಲೂ ಗಮನಾರ್ಹವಾಗಿದೆ. ನಿರಾಶೆ ಮತ್ತು ದಿಕ್ಕಿಲ್ಲದ ಪರಿಸ್ಥಿತಿ ಅವರೆಲ್ಲರಲ್ಲೂ ಕಾಣಬರುವ ಸಮಾನಾಂಶ. ನವ-ಉದಾರೀಕರಣದ 'ಅಭಿವೃದ್ಧಿ'ಯ ಲಾಭ ಪಡೆದವರಲ್ಲ ಇವರು, ಬದಲಾಗಿ, ಅದಕ್ಕೆ ಬಲಿಪಶುಗಳಾದವರು. ಸಾಮಾಜಿಕ-ಆರ್ಥಿಕ ಅಸಮಾನತೆಯು ಹೆಚ್ಚುತ್ತಿರುವಂತೆ ಲೈಂಗಿಕ ತೃಷೆಯನ್ನು ಹಿಂಗಿಸುವ ಉದ್ಯೋಗದ ವ್ಯಾಪ್ತಿ ಹಿಗ್ಗುತ್ತದೆ. ಆದ್ದರಿಂದ ನಾವು ಸ್ವೀಕರಿಸಿರುವ ಮೃಗೀಯ 'ಅಭಿವೃದ್ಧಿ ಮಾದರಿ'ಯ ಒಂದು ಉಪ-ಉತ್ಪನ್ನವೇ ಅಶ್ಲೀಲತೆಯ ವಿಜೃಂಭಣೆ. ಜಾಗತೀಕರಣದ ಪ್ರಭಾವದಲ್ಲಿ ಒಂದಾದ ಈ ಉತ್ಪನ್ನ, ಹೀಗೆ ಆನುಷಂಗಿಕವಾಗಿ ಲೈಂಗಿಕತೆಯ ಗುಂಗಿನ ರೂಪದ ಜಾಡ್ಯವಾಗಿ ಹರಡುವುದೇ ಆಗಿದೆ. ಆ ಉದ್ದಿಮೆಯಲ್ಲಿ ದೊಡ್ಡ ಭಾಗ ಬಡಜನರದ್ದು ನಿಜ; ಆದರೆ ಅಲ್ಲಿಯ ಗ್ರಾಹಕರು ವರ್ಗ-ಜಾತಿ-ಜನಾಂಗ ಮುಂತಾದ ಎಲ್ಲ ಗೋಡೆಗಳನ್ನೂ ಒಡೆದು ಹೊರ ಬಂದವರೇ. ಕಂಪ್ಯೂಟರ್ ಏನಿಲ್ಲವೆಂದರೂ ಗೋಡೆಗಳನ್ನು ಭಗ್ನಗೊಳಿಸಿದೆ ಎನ್ನಲಡ್ಡಿಯಿಲ್ಲ. ಅಲ್ಲಿ ಮೋಜು ಅಗ್ಗವಾಗಿ, ಸುಲಭವಾಗಿ ದಕ್ಕುತ್ತದೆ. ಲೈಂಗಿಕ ಅನುಭವದ ಆಪ್ತತೆ ಇಲ್ಲದಿರ ಬಹುದು, ಆದರೆ ಅದನ್ನು ವಿಕೃತವಾಗಿ ಪಡೆಯಲು ಸೈಬರ್ ತಂತ್ರಜ್ಞಾನವು ಸಾಧ್ಯವಾಗಿಸಿದೆ.

ಅರ್ಜುನ ಸೇನ್‌ಗುಪ್ತ ವರದಿ ತಿಳಿಸಿದ್ದಂತೆ ಅಸಂಘಟಿತ ಕ್ಷೇತ್ರದ ದುಡಿಯುವ ಜನರಲ್ಲಿ ಶೇ. ೭೮ರಷ್ಟು ಜನರ ದೈನಿಕ ಆದಾಯ ೨೦ ರೂಪಾಯಿ. ಅವರಲ್ಲಿ ಸುಖ-ಸಂತೃಪ್ತಿಯ ಭಾವ ಲಭ್ಯವಾಗುವುದೆಷ್ಟು ಮಂದಿಗೆ? ಅವರಲ್ಲಿ ಲೈಂಗಿಕ ಸಂಬಂಧಗಳು ಎಷ್ಟು ಗಟ್ಟಿ? ಆರ್ಥಿಕ ಸುಭದ್ರತೆಯ ಅಭಾವದಲ್ಲಿ ಸಂಬಂಧಗಳು ಎಷ್ಟು ಕಾಲ ಸ್ಥಿರವಾಗಿರಬಲ್ಲವು? ಅವರ ಆದಾಯವು ಕುಟುಂಬದ ವಾಂಛೆಯನ್ನು ಪೂರೈಸುತ್ತದೆಯೆ? ಆ ವರ್ಗದವರಲ್ಲಿ ಯುವಕರ ಪ್ರಮಾಣ ಎಷ್ಟಿರಬಹುದು? ಅವರು ಅಶ್ಲೀಲತೆಗೆ ಮಾರುಹೋದರೆ ಆಶ್ಚರ್ಯವೇನು? ಅಂದರೆ, ಬಡವರೆಲ್ಲಾ ಕಂಪ್ಯೂಟರ್‌ಗಳಲ್ಲಿ ಸಿಗುವ ಅಶ್ಲೀಲತೆಗೆ ಶರಣಾಗಿದ್ದಾರೆ ಎಂದಲ್ಲ. ಬಡತನವು ಎಂತೆಂತಹ ಕೂಪಗಳಿಗೆ ಜನರನ್ನು ತಳ್ಳುತ್ತದೆ ಎಂಬುದಕ್ಕೆ ಇದೊಂದು ನಿದರ್ಶನ, ಅಷ್ಟೆ. ಜನಸಂದಣಿ ಇರುವಲ್ಲಿ, ಬಸ್ಸು-ರೈಲು ಗಳಲ್ಲಿ, ಯುವತಿಯರನ್ನು ಲೈಂಗಿಕ ಕಿರುಕುಳಕ್ಕೆ ಗುರಿಮಾಡುವುದು ಹೆಚ್ಚುತ್ತಿದೆ. ದೆಹಲಿಯ ಬಸ್ಸುಗಳಲ್ಲಿ ಇದು ಹಲವು ವರ್ಷಗಳಿಂದ ಇರುವ ಪಿಡುಗು. ಎಷ್ಟೋ ಯುವತಿಯರು ಕೈಯ್ಯಲ್ಲಿ ಸೂಜಿ ಹಿಡಿದುಕೊಂಡೇ ಬಸ್ ಹತ್ತುತ್ತಾರೆ; ಚೇಷ್ಟೆ ಮಾಡ ಬರುವವರನ್ನು ಚುಚ್ಚಿ ದೂರ ಮಾಡಲು. ಹೀಗೆ ಕಿರುಕುಳ ನೀಡುವ ಯುವಕರು ಬಡಕುಟುಂಬಗಳವರೇ ಆಗಿರುತ್ತಾರೆಂಬುದಕ್ಕೆ ಪುರಾವೆ ಏನೂ ಇಲ್ಲ. ಹಾಗಿದ್ದರೆ ಶ್ರೀಮಂತರ ಪಾಡೇನು? ಸ್ವಲ್ಪ ಉತ್ತಮ, ಆದರೆ ಅವರ ಪಾರಸ್ಪರಿಕ ಸಂಬಂಧಗಳ ಸಮಸ್ಯೆಯ ಕಾರಣಗಳು ಬೇರೆಯೇ ಇವೆ. ಸಂಪತ್ತನ್ನು ಬಾಚಿಕೊಳ್ಳುತ್ತಲೇ ಇರಬೇಕೆಂಬ ಅವರ ಲಾಲಸೆಗೆ ಎಲ್ಲೆಯಿಲ್ಲ. ಕೊಳ್ಳುಬಾಕತನ ಮತ್ತು ಸ್ವಾರ್ಥ ಈ ವರ್ಗದ ಕುಟುಂಬಗಳಲ್ಲಿ ಹಲವೇಳೆ ಒಡಕುಂಟು ಮಾಡುತ್ತವೆ. ಮಾಹಿತಿ ತಂತ್ರಜ್ಞಾನವೆಂಬ ಕುಬೇರ ಧಂಧೆಯಲ್ಲಿ ನೌಕರಿ ಮಾಡುವವರ ದೊಡ್ಡ ಬಣವೇ ಇದಕ್ಕೆ ಉದಾಹರಣೆ. ಕಾರ್ಪೊರೇಟ್ ಸಂಸ್ಥೆಗಳ ಹಿರಿಯ ಅಧಿಕಾರಿ ಗಳದ್ದು ಇನ್ನೊಂದು ನಿದರ್ಶನ. ಅವರಲ್ಲಿ ಸಂಬಂಧಗಳು ಇಕ್ಕಟ್ಟಿಗೆ ಸಿಲುಕಿದಾಗ ಸಂಧಾನದ ಮೂಲಕ ಪರಿಹರಿಸಿಕೊಳ್ಳುವ ಪದ್ಧತಿ ವಿರಳ. ಅದಕ್ಕೆ ಅಗತ್ಯವಾದ ಮನೋಭಾವ, ದೃಢತೆ ಮತ್ತು ಸಮಯ ಅವರಲ್ಲಿ ಕಡಿಮೆ. ತಕ್ಷಣದಲ್ಲಿ ಅವರು ಅಶ್ಲೀಲತೆಯ ಹಂಗಿಗೆ ಸಿಲುಕುತ್ತಾರೆ. ಸಾಮಾನ್ಯೀಕರಿಸಿ ಹಾಗೆ ಹೇಳಲಾಗದಿದ್ದರೂ ಬಹುವೇಳೆ ಈ ಬೆಳವಣಿಗೆ ಕಂಡುಬಂದಿದೆ.

ಸಾರಾಂಶವಿಷ್ಟೆ: ಅಶ್ಲೀಲತೆ ಎಂಬುದು ಸಮಾಜ ಸೃಷ್ಟಿಸಿಕೊಂಡಿರುವ ಒಂದು ದೈತ್ಯ. ಮಾರುಕಟ್ಟೆಯ ಆರ್ಥಿಕತೆಯ ಮೂಲಕ ದೇಶದ ಮೋಕ್ಷ ಸಾಧಿಸು ತ್ತೇವೆಂದು ಹೊರಟು ಈ ಫ್ರಾಂಕೆನ್‌ಸ್ಟೈನ್‌ನ ನಿರ್ಮಾಣ ಮಾಡಿಕೊಂಡಿದ್ದೇವೆ. ಅದಕ್ಕೆ ಪರಿಹಾರವೋ ಎಂಬಂತೆ ನೀತಿ ಕತೆಗಳ ಉಪದೇಶ, ಸಾಹಿತ್ಯದಲ್ಲಿ ಮೌಲ್ಯಗಳ ಅರಸುವಿಕೆ, ಉಪನಿಷತ್ತಿನ ಅಧ್ಯಾತ್ಮದ ಗೀಳು, ಸೌಂದರ್ಯ ಲಹರಿಯ ಲಹರಿ, ಲೆಕ್ಕವಿಲ್ಲದಷ್ಟು ಹೋಮಗಳು - ವ್ರತಗಳು, ತಿರುಪತಿ ದರ್ಶನ, ಇವೆಲ್ಲಾ ಪ್ರದರ್ಶನಕ್ಕೆ ಬಂದಿವೆ. ಇದಾವುದೂ ವೈಯ್ಯಕ್ತಿಕ ನಡತೆಯ ಮೇಲೆ ಹೇಳಿಕೊಳ್ಳಬಹುದಾದ ಸಕಾರಾತ್ಮಕ ಪ್ರಭಾವ ಬೀರಿಲ್ಲ. ಒಂದು ಕಡೆ ವ್ರತ,

ಇನ್ನೊಂದು ಕಡೆ ಅಶ್ಲೀಲ ಚಿತ್ರಗಳ ವೀಕ್ಷಣೆ : ಎರಡೂ ಒಬ್ಬನೇ ವ್ಯಕ್ತಿಯ ಲಕ್ಷಣಗಳು ! ಲೈಂಗಿಕತೆಯನ್ನು ಸರಳೀಕರಿಸುವುದು, ಕಚಗುಳಿಗೂ ಲೈಂಗಿಕತೆಗೂ ವ್ಯತ್ಯಾಸವೇನೂ ಇಲ್ಲವೆಂಬಂತೆ ವರ್ತಿಸುವುದು, ಮಾನವ ಸಂಬಂಧಗಳನ್ನು ಸರಕುಗಳ ರೀತಿಯಲ್ಲಿ ಭಾವಿಸಿಕೊಳ್ಳುವುದು, ಇವೆಲ್ಲಾ ಇದರ ನೇರ ಪರಿಣಾಮ. ಜಾಗತೀಕರಣವನ್ನು ತಬ್ಬಿಕೊಂಡು, ಅದರ ಅನೀತಿಗಳ ಸೈನ್ಯವನ್ನು ಅಟ್ಟಿಬಿಡುತ್ತೇವೆಂದು ಕಲ್ಪಿಸಿಕೊಳ್ಳುವುದೇ ಅತಾರ್ಕಿಕ. ಅಶ್ಲೀಲತೆಯಲ್ಲಿ ಮನಸ್ಸನ್ನು ಮೀಯಲು ಬಿಡುವುದು ಅದರ ಒಂದು ಭಾಗ. ಕನಿಷ್ಠ ಬಟ್ಟೆ ಧರಿಸಿ ಲೈಂಗಿಕತೆಗೆ ಪ್ರಚೋದನೆ ನೀಡಲಾಗುತ್ತದೆ ಎಂಬ ಸನ್ನಿವೇಶವಷ್ಟೇ ಇದರ ಕೀಳುತನದ ಸೂಚನೆಯಲ್ಲ; ಮಾನವ ವ್ಯಕ್ತಿತ್ವದ ವಿಕಸನಕ್ಕೆ ಪೆಟ್ಟು ನೀಡುವುದು, ಮಾನವ ಘನತೆಯನ್ನು ಅಸಭ್ಯತೆಯ ಮಟ್ಟಕ್ಕಿಳಿಸುವುದು ಇದರ ಅತ್ಯಂತ ಕೀಳು ಲಕ್ಷಣ.

ಖ್ಯಾತ ಮಾನವತಾವಾದಿ ಡಾ|| ಅಮರ್ತ್ಯ ಸೇನ್ ಮಾನವ ಅಭಿವೃದ್ಧಿಯ ಸಂಭಾವ್ಯ ಲಕ್ಷಣಗಳನ್ನು ನಿರೂಪಿಸಿದ್ದಾರೆ; ಅದನ್ನು ನಾವು ಮಾದರಿಯಾಗಿ ಸ್ವೀಕರಿಸಬಹುದು. ಅದು ಅಶ್ಲೀಲತೆಯತ್ತ ಹೊರಳುತ್ತಿರುವ ಸಂಸ್ಕೃತಿಗೆ ಉತ್ತಮ ಪರ್ಯಾಯ, ಮದ್ದು. ಅವರು ನಿರೂಪಿಸುವ ಅಭಿವೃದ್ಧಿ ವ್ಯಾಖ್ಯಾನದಲ್ಲಿ ಮಾನವ ಸಾಮರ್ಥ್ಯಗಳು ವ್ಯಕ್ತಿಯಲ್ಲಿ ರೂಪುಗೊಂಡು, ಅವನ್ನು ಹೊರಸೂಸಲು ಸಾಧ್ಯವಾಗುವುದಕ್ಕೆ ತಕ್ಕ ಸನ್ನಿವೇಶದ ಕಲ್ಪನೆಗೆ ಒತ್ತುಕೊಡಲಾಗಿದೆ. ಆಯಾ ವ್ಯಕ್ತಿಯ ಸಾಮಾಜಿಕ ಮತ್ತು ವೈಯ್ಯಕ್ತಿಕ ಸನ್ನಿವೇಶಗಳನ್ನಾಧರಿಸಿಯೇ ಮಾನವ ಸಾಮರ್ಥ್ಯ ಅರಳುತ್ತದೆ. ಬೇರೆ ಕೆಲವು ಅರ್ಥಶಾಸ್ತ್ರಜ್ಞರು ಮಾರುಹೋಗುವಂತೆ ಸೇನ್ ತಥಾಕಥಿತ ಒಟ್ಟು ಅಭಿವೃದ್ಧಿಯ ಅಂಕಿ-ಅಂಶಗಳಿಂದ ಸಮಾಜದ ಬೆಳವಣಿಗೆಯ ಮಾಪನ ಮಾಡಿ ತೃಪ್ತಿ ಹೊಂದುವುದಿಲ್ಲ. ಜಿಡಿಪಿ ಮತ್ತು ಜಿಎನ್‌ಪಿಗಳ ಕೋಷ್ಟಕಗಳು ವ್ಯಕ್ತಿಯ ಅಭಿವೃದ್ಧಿಯ ಸೂಚ್ಯಂಕಗಳಲ್ಲ; ಅಭಿವೃದ್ಧಿಯೆಂದರೆ ಕೇವಲ ಆರ್ಥಿಕ ಮುನ್ನಡೆಯ ಬೆನ್ನತ್ತುವುದೂ ಅಲ್ಲ. ಮಾನವ ಸಾಮರ್ಥ್ಯ ಪ್ರತಿ ವ್ಯಕ್ತಿಯಲ್ಲೂ ಅಭಿವ್ಯಕ್ತವಾಗುವುದೆಂದರೆ ಪ್ರಭುತ್ವವು ಕೈಗೊಂಡ ಅಭಿವೃದ್ಧಿ ಕಾರ್ಯಕ್ರಮಗಳಿಂದ ವೈಯ್ಯಕ್ತಿಕವಾಗಿ ತನಗೆಷ್ಟು ಉಪಯೋಗ ಲಭಿಸಿದೆ, ಅದರ ಪ್ರಯೋಜನವೇನು, ಎಂಬುದರ ಮಾಪನವಾಗುತ್ತದೆ. ಮಾರ್ಥ ನುಸ್‌ಬಾಮ್ ಎಂಬ ತತ್ತ್ವವೇತ್ತಳೊಡನೆ ಜೊತೆಗೂಡಿ, ಸೇನ್ ಅಂತಹ ಸಾಮರ್ಥ್ಯಗಳು ಯಾವುವೆಂಬುದನ್ನು ಪ್ರತಿಪಾದಿಸಿದ್ದಾರೆ. ಮುಖ್ಯವಾಗಿ ಅಂತಹ ಹತ್ತು ಸಾಮರ್ಥ್ಯಗಳನ್ನವರು ಕನಿಷ್ಠವೆಂದು ಗುರುತಿಸಿದ್ದಾರೆ : ಜೀವನ, ದೇಹಾರೋಗ್ಯ, ಸುವ್ಯಕ್ತ ದೇಹಸೌಖ್ಯ, ತನ್ನ ಪರಿಸರದ ಮೇಲೆ ವ್ಯಕ್ತಿಯ ಹಿಡಿತದ ಸಾಧ್ಯತೆ, ಆಟಪಾಟ, ಯಾವುದರೊಂದಿಗೆ ಸಹಭಾವ ಇದೆ, ಇತ್ಯಾದಿ. ಅಭಿವೃದ್ಧಿ ಎಂಬುದರ ತೆಕ್ಕೆಯಲ್ಲಿ ಇರಲೇಬೇಕಾದ ಮೂರ್ತ ಸ್ವಾತಂತ್ರ್ಯದ ಚಿಹ್ನೆಗಳಿವು. ಈ ಮಾನವ ಸಾಮರ್ಥ್ಯಗಳು ಇಲ್ಲವಾಗಿವೆಯೆಂದರೆ ಅದೇ ಬಡತನ ಎಂದು ಸೇನ್ ವ್ಯಾಖ್ಯಾನಿಸಿದ್ದಾರೆ. ಆ ಸಾಮರ್ಥ್ಯಗಳು ಹೊಮ್ಮಲು ತಥಾಕಥಿತ ಅಭಿವೃದ್ಧಿಯು ಯಾವ ಕೊಡುಗೆಯನ್ನೂ ನೀಡದಿದ್ದರೆ ಅದು ಅಭಿವೃದ್ಧಿಯಲ್ಲ, ಬದಲಾಗಿ ಅವನತಿ. ಇದು ಸೇನ್ ಅವರ ಜೀವಪರವಾದ ದರ್ಶನ. ಅಭಿವೃದ್ಧಿಯನ್ನು ಆ ನೆಲೆಯಲ್ಲಿ ವಿಶ್ಲೇಷಿಸಿಕೊಳ್ಳಬೇಕು. ಆಗ ಅಶ್ಲೀಲತೆಯ ಆಧಾರ ತಿಳಿಯುತ್ತದೆ, ಅದನ್ನೆದುರಿಸುವ ಹಾದಿ ತೆರೆದುಕೊಳ್ಳುತ್ತದೆ. ಹಾಗೆ ಮಾಡದೆ ಅಶ್ಲೀಲ ಚಿತ್ರ ನೋಡುವವರನ್ನು ಸುಮ್ಮನೆ ಮೂದಲಿಸಿದರೆ, ಸದಾ ಮೂದಲಿಸುತ್ತಾ ಉಳಿಯುವುದೊಂದೇ ಕೆಲಸವಾದೀತು. ಸಚಿವರು ಅಶ್ಲೀಲ ಚಿತ್ರವನ್ನು ಶಾಸನಸಭೆಯಲ್ಲಿ ಕುಳಿತು ನೋಡುವುದು ಕೇವಲ ಅವರ ಸಂಸ್ಕಾರದ ಅಥವಾ ಮಾನಸಿಕ ರೋಗದ ಪ್ರಶ್ನೆಯಲ್ಲ. ಹಾಗೆಂದರೆ ಅವರು ಕ್ಷಮಾರ್ಹರು ಎಂದೂ ಅಲ್ಲ. ಅವರಿಗೆ ರೋಗ ಹತ್ತಿಕೊಂಡಿದ್ದೇಕೆ, ಉಲ್ಬಣವಾದದ್ದೇಕೆ, ಅದಕ್ಕೆ ಮದ್ದೇನು, ಎಂಬುದರ ವಿಶ್ಲೇಷಣೆಯಾಗಬೇಕು. ಅದನ್ನು ಮಾಡುವ ಮುನ್ನ ಅವರನ್ನು ಶಾಸನಸಭೆಯಿಂದ ಹೊರದೂಡುವುದು ಸಹ ಒಂದು ಅಗತ್ಯ ಕ್ರಮ. ಅಕ್ರಮಗಳಿಗೆ ಖ್ಯಾತರಾದ ಸಭಾಧ್ಯಕ್ಷ ಬೋಪಯ್ಯ ಅದನ್ನು ಮಾಡುತ್ತಾರೆಂದು ನಿರೀಕ್ಷಿಸಬಹುದೆ ?

ಬದರಿನಾಥ್ ರಾವ್

---

***ಈ ತಿಂಗಳು*** ***(೩ನೇ ಪುಟದಿಂದ)***

ತದುಕಿದ. ಅದಕ್ಕೆ ಅವನ ಮೇಲೆ ಕ್ರಮ ಜರುಗಿಸುವುದಿರಲಿ, ಒಂದು ಪ್ರತಿಭಟನೆಯ ಮಾತೂ ಬರಲಿಲ್ಲ. ಮಾಧ್ಯಮದವರಾದರೂ ಬಾಯಿ ಬಿಟ್ಟರೆ ? ಛೆ, ಎಲ್ಲಾದರೂ ಉಂಟೆ ! ಓಪ್ರಾಳ ಪರವಾಗಿ ಯಾವನೋ ನಮ್ಮ ಮಾಧ್ಯಮದವರಿಗೆ ಹೊಡೆದರೆ ಅದನ್ನು ಮಹಾಪ್ರಸಾದವೆಂದು ಸ್ವೀಕರಿಸಬೇಕು. ಇದಲ್ಲವೆ ನಿಜವಾದ ವಸಾಹತು ದೈನ್ಯಕ್ಕನುಗುಣವಾದ ಮನಸ್ಸು, ಸಂಸ್ಕೃತಿ ! ನಮ್ಮ ಖ್ಯಾತ ಬಚ್ಚನ್ ಬಾಬಾ ಇದ್ದಾರಲ್ಲ, ಅವರ ಸೊಸೆ ಅಮೆರಿಕಾಕ್ಕೆ ಹೋಗಲಿ, ಅಂಗರಕ್ಷಕನನ್ನು (ಅವರು ಅನುಮತಿ ನೀಡಿದರೆ) ಕರೆದುಕೊಂಡು ಹೋಗಲಿ, ಯಾರಾದರೂ ಛಾಯಾಗ್ರಾಹಕನಿಗೆ ಅವನು ಹೊಡೆಯಲಿ, ಆಮೇಲೆ ನೋಡಿ ಅವನಿಗೆ ಏನೆಲ್ಲಾ ಆಗುತ್ತದೆಂದು. ಆಗಲೂ 'ವಸಾಹತು ಮನಸ್ಸು' ಉಳ್ಳ ನಮ್ಮ ಮಾಧ್ಯಮಗಳು ಅದನ್ನು ಸಹಿಸಿಕೊಳ್ಳುತ್ತವೆ, ಸಮರ್ಥಿಸುತ್ತವೆ !

ರಿಪಬ್ಲಿಕ್ ಡೇ, ಸಾರ್ವಭೌಮತ್ವ, ಎಲ್ಲಾ ಭಾಷಣ ಆದಮೇಲೆ ಉಳಿಯುವುದು ಈ ಹೊಲಸು 'ವಸಾಹತು ಮನಸ್ಸು.' ಬೇಕಾದರೆ 'ಅಯ್ಯೋ ಭಗವಂತ' ಅನ್ನಿ, ಡಾ|| ಎಚ್. ನರಸಿಂಹಯ್ಯನವರು ಅನ್ನುತ್ತಿದ್ದಂತೆ. ವಸಾಹತೀಕರಣಗೊಂಡ ಮನಸ್ಸುಗಳ ಬಗ್ಗೆ ಅವರಿಗೆ ಅಷ್ಟು ಜಿಗುಪ್ಸೆ ಇತ್ತು.

*　　　*　　　*

ನ್ಯಾಯಮೂರ್ತಿ ಚಂದ್ರಶೇಖರಯ್ಯನವರು ನಮ್ಮ ರಾಜ್ಯದ ಜನಗಳ ಸೇವೆ ಮಾಡಲು ತಾವು ಬದ್ಧರು, ಆದ್ದರಿಂದ ಉಪಲೋಕಾಯುಕ್ತ ಸ್ಥಾನವನ್ನು ಬಿಟ್ಟಿಳಿಯುವುದಿಲ್ಲವೆಂದು ಹೇಳಿದ್ದಾರೆಂದು ವರದಿಯಾಗಿದೆ. ಬದ್ಧತೆಯು ಯಾರಲ್ಲೇ ಇರಲಿ, ಅದನ್ನು ಮೆಚ್ಚಬೇಕಾದ್ದೆ. ಆದರೆ ನ್ಯಾಯಮೂರ್ತಿ ಬನ್ನೂರುಮಠರಿಗೆ ಯಾವ ಕಾರಣಗಳಿಗಾಗಿ ಲೋಕಾಯುಕ್ತರಾಗಲು ಅವಕಾಶ ನಿರಾಕರಿಸಲಾಯಿತೋ ಆ ಕಾರಣಗಳೆಲ್ಲಾ ಮಾನ್ಯ ಚಂದ್ರಶೇಖರಯ್ಯನವರ ಬಗೆಗೂ ಅನ್ವಯವಾಗುತ್ತವೆಂದು ಹೇಳಲಾಗಿದೆ. ಹಾಗಿದ್ದರೆ ತಾರತಮ್ಯವೇಕೆಂಬುದು ತಿಳಿಯಬೇಕಾದ ಅಂಶ. ಈ ಮಧ್ಯೆ (ಅಂದರೆ, ಇದಕ್ಕೆ ಸಂಬಂಧಿಸಿದಂತೆ ಎಂದಲ್ಲ), ಲೋಕಾಯುಕ್ತ ಪೊಲೀಸರಿಂದ ಬಿ-ವರದಿಗಳ ಮಹಾಪೂರ ಹರಿದುಬರುತ್ತಿದೆ ಎನ್ನುತ್ತಿದ್ದಾರೆ. ಅದೇಕೆ ಹಾಗೆಂದು ತನಿಖೆ ನಡೆಸಲು ಯಾರನ್ನು ಗೊತ್ತುಪಡಿಸಬೇಕೆಂಬುದನ್ನು ಮಾನ್ಯ ಮುಖ್ಯಮಂತ್ರಿಗಳು ಚಿಂತಿಸಬೇಕಾಗಿದೆ. ಆದರೆ ಅವರಿಗೆ ಚಿಂತೆಗೂ ಪುರಸೊತ್ತಿಲ್ಲವಲ್ಲ !

*　　　*　　　*

ಭಾರತದ ವಾಯುಸೈನ್ಯಕ್ಕೆ ಫ್ರಾನ್ಸಿನ ಡಸೋ ಕಂಪನಿ ತಯಾರಿಸುವ 'ರಫಾಲ್' ಯುದ್ಧ ವಿಮಾನಗಳನ್ನು ಕೊಳ್ಳಲು ತೀರ್ಮಾನಿಸಲಾಗಿದೆ. ಅದು ಲಕ್ಷಗಟ್ಟಲೆ ಕೋಟಿ ರೂಪಾಯಿ ವ್ಯವಹಾರ. ಏನಿಲ್ಲವೆಂದರೂ ಫ್ರಾನ್ಸಿನಲ್ಲಿ ಹತ್ತಿಪ್ಪತ್ತು ಸಾವಿರ ಜನರಿಗೆ ಉದ್ಯೋಗದ ಖಾತರಿ ಆಯಿತೆಂದರ್ಥ. ನಮ್ಮ ದೇಶದ ರಕ್ಷಣಾ ಖಾತೆಯಲ್ಲಿ ಅಷ್ಟೊಂದು ಹಣ ತೊಡಗಿಸಿ ಅಪವ್ಯಯ ಮಾಡುವುದು ಅಗತ್ಯವೇ ಎಂಬುದು ಮೂಲಭೂತ ಪ್ರಶ್ನೆ. ನಾವು ಫ್ರಾನ್ಸಿನಿಂದ ಕೊಂಡರೆ ಪಾಕಿಸ್ತಾನ ಇನ್ನಾರಿಂದಲೋ ಕೊಳ್ಳುತ್ತದೆ. ಆ ದೇಶಕ್ಕೂ ಅಪವ್ಯಯವೇ. ಇದರಿಂದ ಖುಷಿಪಡುವವರು ಅಮೆರಿಕಾ ಮತ್ತು ಯೂರೋಪಿನ ರಾಜಕೀಯ ನಾಯಕರು. ನಮ್ಮ ದೇಶಗಳಿಗೆ ಎಂದು ಇದೆಲ್ಲಾ ಮನವರಿಕೆಯಾಗುವುದು ? ಅಮೆರಿಕಾಕ್ಕೆ ಅಧೀನವಾಗಿರುವವರೆಗೆ (ಮತ್ತು ಅಧೀನವಾಗಿರುವವರಿಗೆ) ಅದು ಸಾಧ್ಯವಿಲ್ಲ. ಇರಲಿ, ನಮ್ಮ ವಾಯುಸೈನ್ಯದ ಹಿರಿಯ ಅಧಿಕಾರಿಗಳು ಯಾವುದನ್ನು ಆಯ್ದುಕೊಳ್ಳುತ್ತಾರೋ ಅದನ್ನು ಕೊಳ್ಳುವುದು ಸರ್ಕಾರದ ಕರ್ತವ್ಯ. ಆದರೆ ಅದಕ್ಕೆ ಬ್ರಿಟನ್ನಿನ ಪ್ರಧಾನಿ ಕ್ಯಾಮೆರಾನ್ ಆಕ್ಷೇಪವೆತ್ತಿ ಭಾರತ ಸರ್ಕಾರವು 'ಕೃತಘ್ನ' ಎಂದು ಜರಿದಿರುವುದು ತೀರಾ ತಲೆಹರಟೆಯ ಪ್ರಸಂಗ. ಬ್ರಿಟನ್ ಭಾರತಕ್ಕೆ ಫ್ರಾನ್ಸಿಗಿಂತಲೂ ಹೆಚ್ಚು ಸಹಾಯ ನೀಡಿದೆ, ಹಾಗಿದ್ದೂ ಭಾರತವು ಬ್ರಿಟನ್ನಿನ 'ಟೈಫೂನ್' ಯುದ್ಧ ವಿಮಾನಗಳನ್ನು ಕೊಳ್ಳಲಿಲ್ಲವೆಂದು ಕ್ಯಾಮಿರಾನ್‌ಗೆ ಕೋಪ. ನಾವಿನ್ನೂ ಫ್ರಾನ್ಸಿನಿಂದ ಏನೂ ಕೊಂಡಿಲ್ಲ, ಆದರೆ ಕ್ಯಾಮೆರಾನ್ ಆಗಲೇ ತಮ್ಮ ರಕ್ಷಣಾ ಉಪ ಸಚಿವರನ್ನು ಭಾರತಕ್ಕೆ ದೌಡಾಯಿಸಿದ್ದಾರೆ. ಕ್ಯಾಮೆರಾನ್‌ಗೆ ಉತ್ತರ ಕೊಡಲು ಎ. ಕೆ. ಆಂಟನಿ ಅಂಜುತ್ತಾರೆ, ಮನಮೋಹನ ಸಿಂಗರಂತೂ ತಮ್ಮ ಯಾವತ್ತಿನ ಮೌನ ಮುರಿಯುವುದಿಲ್ಲ. ಆದರೆ ಜನಕ್ಕೆ ಗೊತ್ತಿದೆ ಉತ್ತರ. ಬ್ರಿಟನ್ ಆಗಲಿ, ಅಮೆರಿಕಾ ಆಗಲಿ, ಭಾರತಕ್ಕೆ ಹಣಕಾಸಿನ 'ಏಡ್' ಕೊಟ್ಟಿದೆಯೆಂದರೆ ಅದಕ್ಕಿರುವುದು ಎರಡೇ ಅರ್ಥಗಳು : (ಅ) ಅವರ ಹಣವನ್ನು ಬಂಡವಾಳ ರೂಪದಲ್ಲಿ ಇಲ್ಲಿ ಹೂಡಿದ್ದಾರೆ, ಇಲ್ಲವೆ (ಆ) ಹಣವನ್ನು ಸಾಲವಾಗಿ ಕೊಟ್ಟಿದ್ದಾರೆ. ಹಾಗಿದ್ದರೆ ಇದರಲ್ಲಿ ಸಹಾಯ ಎಂಥದು, ಮುಲಾಜು ಏಕೆ ? ಬಂಡವಾಳ ಹೂಡಿದ್ದಕ್ಕೆ ಲಾಭ ಸೆಳೆದುಕೊಳ್ಳುತ್ತಾರೆ, ಸಾಲ ಕೊಟ್ಟಿದ್ದರೆ ಬಡ್ಡಿ ಪೀಕಿಸುತ್ತಾರೆ. ಆದರೂ ಅದನ್ನು 'ಏಡ್'

ಎಂದು ರೂಢಿಗತವಾಗಿ ಕರೆಯಲಾಗುತ್ತಿದೆ. ಅಧಿಕ ಪ್ರಸಂಗತನ ಸಾಕು, ನಾವಿಷ್ಟ ಬಂದ ಹಾಗೆ ವ್ಯಾಪಾರ ಮಾಡಿಕೊಳ್ಳುತ್ತೇವೆ, ಅದಕ್ಕೆ ನಿನ್ನಂತಹ ದೊಣೆನಾಯಕನ ಅಪ್ಪಣೆ ಬೇಕಿಲ್ಲ, ಎಂದು ಕ್ಯಾಮೆರಾನ್‌ಗೆ ಪ್ರಧಾನಿಯವರು ಹೇಳದಿದ್ದರೂ ಜನತೆ ಹೇಳಬೇಕು, ಹೇಳುತ್ತದೆ.

✶ ✶ ✶

ಇರಾನಿನ ಮೇಲೆ ಧಾಳಿ ನಡೆಸಲು ಹಿನ್ನೆಲೆ ಮತ್ತು ವ್ಯೂಹ ರಚನೆಯಾಗಿದೆ. ಅದಕ್ಕೆ ಅಡ್ಡಗಾಲು ಹಾಕುತ್ತಿವೆಯೆಂದು ರಷ್ಯ ಮತ್ತು ಚೀಣಾ ಬೈಗುಳ ತಿನ್ನುತ್ತಿವೆ. ದೊಡ್ಡಣ್ಣ ಅಮೆರಿಕಾದ ಮಾತನ್ನು ಹೀಗೆ ಪ್ರಶ್ನಿಸುವುದು ಈ ದೇಶಗಳು ಕಳೆದ ಹದಿನೈದು ವರ್ಷಗಳಲ್ಲಿ ಇದೇ ಮೊದಲು. ನೊಬೆಲ್ ಶಾಂತಿ ಪ್ರಶಸ್ತಿ ಪಡೆದ ಒಬಾಮ ಇರಾನಿನ ಮೇಲೆ ಬಾಂಬು ಸುರಿಸುವ ತಮ್ಮ ಪರಮ ಹಕ್ಕನ್ನು ಚಲಾಯಿಸಿ ಮತ್ತೊಮ್ಮೆ ಶಾಂತಿ ಪ್ರಶಸ್ತಿ ಪಡೆಯುವ ಅವಕಾಶ ಇನ್ನೆಲ್ಲಿ ತಪ್ಪಿಹೋಗುತ್ತದೋ ಎಂಬ ಆತಂಕ ಅವರದಿರಬೇಕು. ಆದರೆ ಕಾಲ ಮಿಂಚಿಲ್ಲ, ಇರಾನಿನ ಮೇಲೆ ಬಾಂಬು ಸುರಿಸುವ ಸಾಧ್ಯತೆ ಹೆಚ್ಚಿದೆ ಎನ್ನಬೇಕು. ವಿಶ್ವಸಂಸ್ಥೆ ಇದೆ, ಅದಕ್ಕೊಬ್ಬ ಮಹಾಕಾರ್ಯದರ್ಶಿ ಇದ್ದಾರೆ ಎಂಬುದು ವಿಶ್ವಕ್ಕೆ ಮರೆತುಹೋಗುವಷ್ಟು ದಕ್ಷತೆ ಆ ಮಹಾರಾಯನದು.

✶ ✶ ✶

ನಮ್ಮ ದೇಶದಲ್ಲಿ ಹಾಗೂ ನಮ್ಮ ರಾಜ್ಯದಲ್ಲಿ ಅಸಮತೋಲನದ ಬೆಳವಣಿಗೆ ನಡೆದಿದೆ ಎನ್ನುತ್ತಾರೆ. ಡಾ|| ಡಿ. ಎಂ. ನಂಜುಂಡಪ್ಪನವರ ವರದಿಯೂ ಅದನ್ನೇ ಹೇಳಿದೆ. ಅದರ ಪರಿಣಾಮಗಳು ಗೋಚರಿಸುತ್ತಿವೆ. ಪರಿಣಾಮಗಳು ಇನ್ನೂ ಉಗ್ರವಾಗುವ ಮೊದಲೇ ಯಾವ ಕ್ರಮಗಳನ್ನು ಕೈಗೊಳ್ಳುವುದು ಅಗತ್ಯವೆಂದು ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಗಂಭೀರವಾಗಿ ಯೋಚಿಸುತ್ತಿರುವಂತೆ ತೋರುತ್ತಿಲ್ಲ. ನೈಜೀರಿಯಾದ ಸನ್ನಿವೇಶವನ್ನು ನೋಡಿ ಪಾಠ ಕಲಿಯಬೇಕು. ಅಲ್ಲಿ ಅಸಮತೋಲನದ ಬೆಳವಣಿಗೆ (ಅದನ್ನು 'ಬೆಳವಣಿಗೆ' ಎನ್ನಬಹುದೇ ಎಂಬ ಪ್ರಶ್ನೆಯೂ ಇದೆ, ನಮ್ಮಲ್ಲಿಯೂ ಇರುವಂತೆ) ವಿಪರೀತವಾಗಿದೆ. ಅದರಿಂದಾಗಿ ಮತೀಯ ಗಲಭೆಗಳು ಹದ್ದುಮೀರಿ ನಡೆಯುತ್ತಿವೆ. ಕಾನೋ ಎಂಬಲ್ಲಿ ೧೮೦ ಜನರ ಹತ್ಯೆ ಎರಡೇ ದಿನಗಳಲ್ಲಿ ನಡೆದುಹೋಯಿತು. ತೈಲ ಸಂಪತ್ತಿನ ಲಾಭ ನೈಜೀರಿಯಾದಲ್ಲಿ ಎಲ್ಲರಿಗೂ ಸಮಾನವಾಗಿ ದಕ್ಕಿಲ್ಲವೆಂಬುದು ವ್ಯಾಜ್ಯದ ಹಿನ್ನೆಲೆಯಲ್ಲಿದೆ; ಹೊರಗೆ ತೋರುವುದು ಮತೀಯ ವಿದ್ವೇಷ ಎಂಬಂತೆ. ಇದು ನಮ್ಮಲ್ಲಿರುವಂತೆ ಪ್ರಸ್ತುತ ರಾಜಕೀಯ ಆರ್ಥಿಕತೆಯ ಪರಿಣಾಮ. ''ಪಾಶ್ಚಿಮಾತ್ಯ ಶಿಕ್ಷಣ ಒಂದು ಪಾಪ'' (ಬೋಕೊ ಹರಾಮ್) ಎಂದು ಒಂದು ಮತದವರು ಘೋಷಣೆ ನೀಡುತ್ತಿದ್ದಾರೆ. ಉತ್ತರ ನೈಜೀರಿಯಾದಿಂದ ಕ್ರೈಸ್ತಮತದವರನ್ನೆಲ್ಲಾ ಹೊರಕ್ಕೆ ಅಟ್ಟಿ, ಎಂಬ ಕೂಗೂ ಎದ್ದಿದೆ. ಆರ್ಥಿಕತೆಯು ವಿಕೋಪಕ್ಕೆ ಹೋದಾಗ ಏನೆಲ್ಲಾ ಸಂಭವಿಸಬಹುದೆಂಬುದರ ಸೂಚನೆ ಇದು. ಎಚ್ಚೆತ್ತುಕೊಳ್ಳಲು ನಮ್ಮ ದೇಶಕ್ಕೆ ಈಗಾಗಲೇ ತಡವಾಗಿದೆ. ಆದರೆ ತಡವಾಗಿಯಾದರೂ ಎಚ್ಚರಗೊಳ್ಳುವುದು ಉತ್ತಮ. ಆರ್ಥಿಕತೆಯೊಡನೆ ಆಟವಾಡಿ ಅಸಮಾನತೆಯನ್ನು ಪೋಷಿಸಿದರೆ ನಾಳೆ ಗಲಭೆಗಳು ಅನಿಷ್ಟ ಸ್ವರೂಪ ಪಡೆದುಕೊಳ್ಳುತ್ತವೆ. ಯೋಜನಾ ಆಯೋಗದ ಅಹ್ಲುವಾಲಿಯಾಗೆ ಇದು ಕೇಳಿಸುವುದಿಲ್ಲ, ಗೃಹಸಚಿವ ಚಿದಂಬರಂ ಹೇಗೂ ತಮ್ಮಲ್ಲಿ ಬಂದೂಕುಗಳಿವೆಯೆಂಬ ಸಲ್ಲದ ಸಮಾಧಾನ ತಾಳಿದ್ದಾರೆ.

✶ ✶ ✶

ಕರ್ನಾಟಕ ಲೋಕಾಯುಕ್ತರಾಗಿ ನ್ಯಾಯಮೂರ್ತಿ ಸಂತೋಷ ಹೆಗ್ಡೆ ನಿವೃತ್ತರಾಗಿ ಆರು ತಿಂಗಳಾಗುತ್ತ ಬಂತು. ಇನ್ನೂ ಈ ಹುದ್ದೆಗೆ ಯಾರೂ ನೇಮಕವಾಗಿಲ್ಲ. ಸರಕಾರ ಸೂಚಿಸಿದ ಎರಡು ಹೆಸರುಗಳೂ ಭೂಹಗರಣದ ಕಳಂಕಕ್ಕೆ ಗುರಿಯಾಗಿ ಸ್ಥಾನ ಭರ್ತಿಯಾಗಲಿಲ್ಲ. ಮೊದಲನೆಯವರು ತಾವಾಗಿಯೇ ಹುದ್ದೆ ಬೇಡವೆಂದರೆ, ಎರಡನೆಯವರು ಮುಖ್ಯಮಂತ್ರಿ ಮತ್ತು ರಾಜ್ಯಪಾಲರ ಮಧ್ಯೆ ಶೀತಲ ಸಮರಕ್ಕೆ ಕಾರಣರಾಗಿ ಕೊನೆಗೆ ಬಂದ ದಾರಿಗೆ ಸುಂಕವಿಲ್ಲ ಎಂದು ಹುದ್ದೆಗೆ ಕೈಮುಗಿದರು. ಬೆಂಗಳೂರಿನಲ್ಲಿ ಯಾರಿಗೆ ಬೇಡ ನಿವೇಶನ! ಸರಕಾರದಿಂದ, ಸಹಕಾರದಿಂದ ಅಗ್ಗವಾಗಿ ಸಿಗುವಾಗ, ಸ್ವಲ್ಪ ಸುಳ್ಳು ಹೇಳಿ ಅಕ್ರಮವಾಗಿ ಪಡೆದುಕೊಂಡರೇನಂತೆ! ಅಧಿಕಾರ ಇರುವುದು ಮತ್ಯಾತಕ್ಕೆ. ಮುಖ್ಯಮಂತ್ರಿಗಳು ಲೋಕಾಯುಕ್ತ ಹುದ್ದೆಗೆ ಹೊರಗಿನ ರಾಜ್ಯಗಳಲ್ಲಿ ಹುಡುಕಾಟ ಪ್ರಾರಂಭಿಸಿದ್ದಾರೆ. ಯಾಕೆ? ಇಲ್ಲಿ ಯಾರೂ ಕಳಂಕರಹಿತರು ಇಲ್ಲವೆ? ಇದಷ್ಟೇ ಅಲ್ಲ ಈಗ ನೇಮಕಗೊಂಡಿರುವ ಉಪ ಲೋಕಾಯುಕ್ತ ನ್ಯಾಯಮೂರ್ತಿ ಚಂದ್ರಶೇಖರಯ್ಯ ಕೂಡ ವಿವಾದದಲ್ಲಿ ಸಿಕ್ಕಿಬಿದ್ದಿದ್ದಾರೆ. ರಾಜ್ಯದ ಉಚ್ಚ ನ್ಯಾಯಾಲಯದ ಮುಖ್ಯ ನ್ಯಾಯಮೂರ್ತಿಗಳು ನನ್ನನ್ನು ಕೇಳದೇ ಈ ನೇಮಕ ಆಗಿದೆ ಎಂದು ಕೆಂಡಾಮಂಡಲವಾಗಿದ್ದಾರೆ. ಮುಂದೇನಾಗುವುದೋ ನೋಡಬೇಕು. ಅಂತೂ ಕರ್ನಾಟಕ ಲೋಕಾಯುಕ್ತ ಯಾರಿಗೂ ಬೇಡದ ಕೂಸಾಗಿದೆ. ಭ್ರಷ್ಟ ರಾಜಕಾರಣಿಗಳಿಗೆ, ಅಧಿಕಾರಿಗಳಿಗೆ ಮಾತ್ರ ಖುಷಿ.

✶ ✶ ✶

ಬೃಹತ್ ಬೆಂಗಳೂರು ಮಹಾನಗರಪಾಲಿಕೆಯ ಹೆಸರನ್ನು ಮಹಾ ಭ್ರಷ್ಟಪಾಲಿಕೆ ಎಂದು ಬದಲಿಸಿದರೇನಾಗುತ್ತೆ. ನಗರವಾಸಿಗಳು ಖಂಡಿತ ಇದಕ್ಕೆ ಸಮ್ಮತಿಸುವುದು ನಿಜ. ನಮ್ಮೂರ ರಸ್ತೆಗಳ ಸ್ಥಿತಿ ನೋಡಿದರೆ ಇದು ಅರ್ಥವಾಗುತ್ತೆ. ಕಂಟ್ರಾಕ್ಟರುಗಳು ಮತ್ತು ಅಧಿಕಾರಿಗಳ ಜೇಬು ತುಂಬುತ್ತದೆಯೇ ಹೊರತು ರಸ್ತೆ ಗುಂಡಿಗಳು ಮಾತ್ರ ತುಂಬುವುದಿಲ್ಲ. ಮೊನ್ನೆ ನಮ್ಮ ಮನೆಯ ಹತ್ತಿರ (ಕತ್ರಿಗುಪ್ಪೆ) ಕ್ಷೇತ್ರದ ಭಾಜಪ ಶಾಸಕ ಬಂದಿದ್ದಾಗ ಜನ ರೊಚ್ಚಿಗೆದ್ದು ಆತನನ್ನು ಘೇರಾಯಿಸಿದರು; ಮೂರು ವರ್ಷದಿಂದ ರಸ್ತೆ ಡಾಮರು ಕಾಣದೇ ಇದೆ ಎಂದು. ರೊಚ್ಚಿಗೆದ್ದ ಆತ ಹಾಗೂ ಆತನ ಚೇಲಾಗಳು ನಾಗರಿಕರ ಮೇಲೆ ಕೈಮಾಡಲು ಹೊರಟಿದ್ದರು. ಹೇಗಿದೆ ವರಸೆ! ಪಾಲಿಕೆಯಲ್ಲಿ ಭ್ರಷ್ಟಾಚಾರ ಎಲ್ಲಿಗೆ ಮುಟ್ಟಿದೆ ಎನ್ನುವುದಕ್ಕೆ ಈ ಪ್ರಕರಣ ಸಾಕ್ಷಿ. ಬೆಂಗಳೂರಿನಲ್ಲಿ ನಡೆದ ಗಣರಾಜ್ಯೋತ್ಸವದ ಸರಕಾರಿ ಸಮಾರಂಭವನ್ನು ಪ್ರತ್ಯಕ್ಷವಾಗಿ ನೋಡಿರುವವರು, ಟೆಲಿವಿಷನ್ ಪರದೆ ಮೇಲೆ ನೋಡಿರುವವರಿಗೆ ಇದು ಗೊತ್ತಿದೆ. ಗಣರಾಜ್ಯೋತ್ಸವದ ಸಂದರ್ಭದಲ್ಲಿ ಶಾಂತಿ ಸಂಕೇತವಾಗಿ ಗಣ್ಯರು ಪಾರಿವಾಳಗಳನ್ನು ಹಾರಿಬಿಡುವುದು ವಾಡಿಕೆ. ಈ ಸಲ ಪಾರಿವಾಳಗಳು ಹಾರಲೇ ಇಲ್ಲ, ಸ್ವಲ್ಪ ದೂರದಲ್ಲಿ ದೊಪ್ಪನೆ ಬಿದ್ದವು. ಗಣ್ಯರ, ಅಧಿಕಾರಿಗಳ ಮುಖ ಕಪ್ಪಿಟ್ಟರೆ, ಉಳಿದವರಿಗೆ ನಗೆಪಾಟಲು. ಪಾರಿವಾಳಗಳು ಸೆಕೆಂಡ್ ಹ್ಯಾಂಡ್ ಆಗಿದ್ದು, ಗಾಯಗೊಂಡವಾಗಿದ್ದುವು. ಪ್ರಾಣಿ ದಯಾ ಸಂಘದವರು ಅದಕ್ಕೆ ಶುಶ್ರೂಷೆ ಮಾಡಿದರು. ಇಂಥ ಕಳಪೆ ಕೆಲಸ ಮಾಡಿದವರ ಮೇಲೆ ಪಾಲಿಕೆ ಏನು ಕ್ರಮ ಕೈಗೊಂಡಿತು ಎಂದು ತಿಳಿಯಲಿಲ್ಲ. ಅಂತೂ ಎಲ್ಲದರಲ್ಲೂ ಕಾಸು ಕದಿಯುವ ಚಟ ಇವರಿಗೆ.

✶ ✶ ✶

ಕೈಲಾಗದವನು ಮೈಪರಚಿಕೊಂಡ ಎನ್ನುವ ಗಾದೆ ಮಾತು ಕೇಳದವರಿಲ್ಲ. ನಮ್ಮ ರಾಜ್ಯದ ಮಂತ್ರಿಗಳ ಪಾಡು ಹಾಗಾಗಿದೆ. ಅಭಿವೃದ್ಧಿ ಮಂತ್ರ ಜಪಿಸುವ ಈ ಮಂತ್ರಿಗಳಿಗೆ ತಮ್ಮ ಅಭಿವೃದ್ಧಿಯದೇ ಕಾಳಜಿ. ಆದರೆ ಇವರನ್ನು ಆರಿಸಿ ಅಧಿಕಾರಕ್ಕೆ ತಂದ ಜನ ಕೇಳಬೇಕಲ್ಲ! ಅಂಥ ಸಂದರ್ಭಗಳಲ್ಲಿ ಅವರು ಎಗರಾಡುವುದು ಅಧಿಕಾರಿಗಳ ಮೇಲೆ. ಇದು ಹಿಂದಿನಿಂದಲೂ ನಡೆದುಬಂದಿರುವ ನಾಟಕ. ಸಚಿವರ ಆರ್ಭಟಗಳಿಗೆ ಸೊಪ್ಪು ಹಾಕುವಂಥವರಲ್ಲ ನಮ್ಮ ಅಧಿಕಾರಿಗಳು. ಮೊನ್ನೆ ಕೋಲಾರದಲ್ಲಿ ಸಚಿವರೊಬ್ಬರು ಸಭೆಯಲ್ಲಿ ಅಧಿಕಾರಿಗಳ ವಿರುದ್ಧ ಎಗರಾಡಿದರು. ಸರಿಯಾಗಿ ಕೆಲಸ ಮಾಡದಿರುವ ಅಧಿಕಾರಿಗಳನ್ನು 'ಕತ್ತರಿಸಿ ಬಿಡುತ್ತೇನೆ' ಎಂದು ಆರ್ಭಟಿಸಿದರು. ಕತ್ತರಿಸುವುದಿರಲಿ ತೆಗೆದುಹಾಕುವುದಕ್ಕೂ ಇವರ ಕೈಲಾಗುವುದಿಲ್ಲ. ಇವರ ಅಬ್ಬರಗಳಿಗೆ ಏನಾದರೂ ಅರ್ಥವಿದೆಯೇ! ಇಂಥ ಮಾತುಗಳನ್ನಾಡುವ ಸಚಿವರ ಪೈಕಿ ಇವರೇ ಮೊದಲಿಗರೇನಲ್ಲ. ಎಲ್ಲ ಸಚಿವರುಗಳು ಅಧಿಕಾರಿಗಳ ಕಡೆ ಬೊಟ್ಟು ಮಾಡಿ ಕಳಚಿಕೊಳ್ಳುವುದು ಮಾಮೂಲಿ. ಇದು ಅವರಿಗೂ ಗೊತ್ತು, ನಮಗೂ ಗೊತ್ತು.

✶ ✶ ✶

ಸುಮಾರು ಐದು ಸಾವಿರ ನರ್ಸುಗಳು ಹತ್ತು ದಿನಗಳಿಂದ ಬೆಂಗಳೂರಿನ 'ಫ್ರೀಡಮ್ ಪಾರ್ಕ್'ನಲ್ಲಿ ಅಹರ್ನಿಶಿ ಸತ್ಯಾಗ್ರಹ ನಡೆಸಿದರು. ದೂರದೂರುಗಳಿಂದ ಮಕ್ಕಳು ಮರಿಗಳನ್ನು ಕಟ್ಟಿಕೊಂಡುಬಂದಿದ್ದ ಇವರ ಸ್ಥಿತಿ ನಿಜವಾಗಿಯೂ ಚಿಂತಾಜನಕವಾಗಿತ್ತು. ಇವರನ್ನು ಕ್ಯಾರೇ ಅನ್ನುವವರೇ ಇರಲಿಲ್ಲ. ಮಾಧ್ಯಮಗಳಲ್ಲಿ ಸಾಕಷ್ಟು ಪ್ರಚಾರವೇನೋ ಸಿಕ್ಕಿತು. ಯಾವ ಮಂತ್ರಿಯೂ ಇವರನ್ನು ಭೇಟಿಯಾಗಲಿಲ್ಲ. ಅಲ್ಲಿಯೇ ಒಂದು ಹೆರಿಗೆಯೂ ಆಯಿತು. ಕೆಲವರು ಕುಸಿದುಬಿದ್ದರು. ಇವರೆಲ್ಲ ಕಂಟ್ರಾಕ್ಟ್ ಮೇಲೆ ಕೆಲಸಮಾಡುವವರು. ಹತ್ತಾರು ವರ್ಷಗಳಿಂದ ಇವರು ಖಾಯಂ ಕೆಲಸವಿಲ್ಲದೆ ಕೆಲಸಮಾಡುತ್ತ ಬಂದಿದ್ದಾರೆ. ಬಳಲಿ ಬೇಸತ್ತ ಈ ಸತ್ಯಾಗ್ರಹಿ ನರ್ಸುಗಳಿಗೆ ಸಾಂತ್ವನ ಹೇಳಲು ಕಡೆಗೂ ಆರೋಗ್ಯ ಸಚಿವರಾಗಲಿ, ಆರೋಗ್ಯ ಇಲಾಖೆಯ ಅಧಿಕಾರಿಗಳಾಗಲಿ ಬರಲಿಲ್ಲ. ಈ ನರ್ಸುಗಳ ಒಂದೇ ಬೇಡಿಕೆ ತಮ್ಮ ಕೆಲಸವನ್ನು ಖಾಯಂ ಮಾಡಬೇಕೆಂಬುದು. ಕಡೆಗೆ ಬಂದವರು ಕಾನೂನು ಸಚಿವ ಸುರೇಶ ಕುಮಾರ್. ಸಚಿವರು ಆಶ್ವಾಸನೆ ಏನೋ ಕೊಟ್ಟರು, ಅದು ಕಾರ್ಯಗತವಾಗುವುದು ಯಾವಾಗಲೋ. ಮಹಿಳಾ ದಿನದ ಭಾಷಣಗಳು ಮಾತ್ರ ಸಿದ್ಧವಾಗುತ್ತಿವೆ! ●




**ಜನವರಿ ವಿಶೇಷ ಸಂಚಿಕೆ**

'ಹೊಸತು'ವಿನ ಹದಿಮೂರನೇ ವರ್ಷದ ವಿಶೇಷ ಸಂಚಿಕೆಯು ಬಹು ಸೊಗಸಾಗಿ ಮೂಡಿಬಂದಿದೆ.

ಸುತ್ತಮುತ್ತಲಿನ ಅವ್ಯವಸ್ಥೆಯ ಇಂದಿನ ದಿನಗಳಲ್ಲಿ ಹುಮ್ಮಸ್ಸೇ ಬರಲಾರದ ಸ್ಥಿತಿಯಲ್ಲಿ, ನಮ್ಮ ಮೌಲ್ಯಗಳು ಕುಸಿದಿದ್ದು ಅದನ್ನು ಎತ್ತಿ ಹಿಡಿದು ಅದರ ಬಗ್ಗೆ ಕಾಳಜಿ, ಸಾಮಾಜಿಕ ಪ್ರಜ್ಞೆ, ಸಾಂಸ್ಕೃತಿಕ ಕಾಳಜಿಗಳ ಬಗ್ಗೆ ಪ್ರೇರೇಪಿಸಿ, ಬೆಳೆಸುವಂತಹ ಮಹಾನ್ ಚೇತನಗಳನ್ನು ವಂದಿಸುತ್ತ, 'ಹೊಸತು' ವಿಶೇಷ ಸಂಚಿಕೆಯ ಸಂಪಾದಕೀಯದ ಪ್ರೋತ್ಸಾಹಕ ನುಡಿಗಳಿಂದ ಹುಮ್ಮಸ್ಸು-ಚೇತನಗಳನ್ನು ನೀಡಿದ್ದೀರಿ. ಅಲ್ಲದೆ ನನ್ನ ಕಂಚಿನ ಶಿಲ್ಪ ''ಹಾರ್ಮನಿ'' ಶೀರ್ಷಿಕೆಯ ಚಿತ್ರವನ್ನು ಮುಖಪುಟದಲ್ಲಿ ಬಿಂಬಿಸಿದ್ದೀರಿ. 'ಹೊಸತು' ನೀಡಿದ ಸಂತೋಷಕ್ಕೆ ಪಾರವಿಲ್ಲ.

*ಬೆಂಗಳೂರು* **ವೆಂಕಟಾಚಲಪತಿ**

೨೦೧೨ರ ಜನವರಿಯ 'ಹೊಸತು' ವಿಶೇಷ ಸಂಚಿಕೆ ಕೈಸೇರಿದೊಡನೆ ತುಂಬ ಸಂತಸವಾಯಿತು. ಸಂಚಿಕೆಯ ಆವರಣವನ್ನು ತೆಗೆದೊಡನೆ, ಅದರ ಮುಖಪುಟದ ಮುಗ್ಧತೆ ಹಾಗೂ ಒಳಪುಟಗಳ ನಿರಾಡಂಬರ ಸರಳತೆ ಎಲ್ಲಕ್ಕೂ ಮೊದಲು ಕಣ್ಣು ಕೋರೈಸುವಂತಿದೆ ! ಒಟ್ಟಾರೆ, ಸಂಚಿಕೆ ತುಂಬ ಸುಂದರವಾಗಿ ಮೈದಾಳಿದೆ ! ನಾನು ಮುಂಬಯಿಯಲ್ಲಿರುವಾಗ ಕಂಡ ನೂರಾರು ಮರಾಠೀ ವಿಶೇಷ ಸಂಚಿಕೆಗಳ ತುಲನೆಯಲ್ಲಿ ಈ ಸಂಚಿಕೆಗೆ ನೀವಿಟ್ಟ ಮುಖಬೆಲೆ ಏನೂ ಅಲ್ಲ! ಮೊದಲ ನೋಟಕ್ಕೆ ಕಾಣುವಂತೆ ಈ 'ಹೊಸತು' ವೈವಿಧ್ಯಪೂರ್ಣ ಲೇಖನಗಳನ್ನು ಹೊತ್ತು ಬಂದಿದೆ. ಸಂಚಿಕೆ ಬಂದೊಡನೆ, ಕುತೂಹಲದಿಂದ ಪ್ರೊ॥ ಎಂ. ಆರ್. ಎನ್. ಮೂರ್ತಿ ಹಾಗೂ ಶ್ರೀ ಕೋ. ಚೆನ್ನಬಸಪ್ಪನವರ ಸಂದರ್ಶನಗಳನ್ನು ಓದಿದಾಗ ಇಬ್ಬರು ವಿಭಿನ್ನ ಸಾಧಕರ ಬದುಕಿನ ಒಳನೋಟಗಳ ಸುಳುಹು ಸಿಕ್ಕಂತಾಯಿತು. ಈ ಸುಂದರ ಸಂಚಿಕೆ ಕಂಡೊಡನೆ ನನಗುಂಟಾದ ಆನಂದವನ್ನು ನಿಮ್ಮೊಡನೆ ಹಂಚಿಕೊಳ್ಳಬೇಕೆನಿಸಿ, ಈ ಅವಸರದ ಕಾಗದ ಬರೆದೆ. ನಿಮಗೆ ಮತ್ತೊಮ್ಮೆ ಹಾರ್ದಿಕ ಅಭಿನಂದನೆಗಳು !

*ಕುಮಟಾ* **ಬಿ. ಎ. ಸನದಿ**

ವಿಶೇಷಾಂಕ ವೈವಿಧ್ಯಮಯ, ವಿಚಾರಪೂರಿತ ಲೇಖನಗಳಿಂದ ಸಮೃದ್ಧವಾಗಿ ಮೂಡಿಬಂದಿದೆ.

ವಿಜ್ಞಾನ, ತಂತ್ರಜ್ಞಾನ, ರೈತಸಂಘ, ಕನ್ನಡಶಾಲೆ, ಭ್ರಷ್ಟಾಚಾರದ ಕುರಿತು ಓದುಗರ ಪತ್ರಗಳು ಅರ್ಥಗರ್ಭಿತವಾಗಿವೆ.

ಲೇಖನ, ಕವಿತೆಗಳು, ಇತರೆ ಎಲ್ಲಾ ಮಾಹಿತಿಗಳು ಸಂಗ್ರಹಯೋಗ್ಯ.

ಪ್ರತಿವರ್ಷದ ಆರಂಭದಲ್ಲಿ 'ಹೊಸತು' - ಹೊಸ ಆಲೋಚನೆಗಳು ಕೆರಳಿಸುವಂತಹ ಮಾಹಿತಿ ಒದಗಿಸುತ್ತದೆ.

'ಹೊಸತು' ಪ್ರಗತಿಪರ ಸದೃಢ ಸಮಾಜ ಕಟ್ಟುವಂತಹ ಗಟ್ಟಿಮನಸ್ಸು, ಶಕ್ತಿಯನ್ನು ರೂಪಿಸುತ್ತದೆ.

*ಹೂವಿನ ಹಡಗಲಿ* **ಸುರೇಶ ಅಂಗಡಿ**

ಜನವರಿಯ ವಿಶೇಷಾಂಕಕ್ಕೆ ಮುಖಪುಟವಾಗಿ ಬರಬೇಕಾದ ಎಲ್ಲ ಅರ್ಹತೆ ಶ್ರೀ ವೆಂಕಟಾಚಲಪತಿ ಅವರ ಚಿತ್ರಕ್ಕಿದೆ. ಇಂತಹ ಉತ್ತಮ ಶಿಲ್ಪ ನೀಡಿದ ಕಲಾವಿದರಿಗೆ ಧನ್ಯವಾದಗಳು. ಚಿತ್ರ ಸಂಗ್ರಹಯೋಗ್ಯವಾಗಿದೆ. ಫೆಬ್ರವರಿ




ಸಂಚಿಕೆಯ ಮುಖಪುಟ ಸಹ ಅತ್ಯಾಕರ್ಷಕವಾಗಿ ಮೂಡಿಬಂದಿದೆ.

ಫೆಬ್ರವರಿ ಸಂಚಿಕೆಯಲ್ಲಿ ಜ. ಹೋ. ನಾರಾಯಣ ಸ್ವಾಮಿ ಅವರ 'ಕನ್ನಡಕ್ಕೆ ಕೈ ತಪ್ಪಿದ ಎರಡು ಮಹತ್ವದ ಕಾದಂಬರಿಗಳು' ಲೇಖನ ಸಾಹಿತ್ಯಾಸಕ್ತರ ಗಮನ ಸೆಳೆಯುವಲ್ಲಿ ಸಫಲವಾಗಿದೆ. ಅದಕ್ಕೇ ಹೇಳುವುದು, ಏನಾದರೂ ಮಾಡುವುದಿದ್ದರೆ ಈಗಲೇ ಮಾಡು, ಎಂದು.

ಗೋಪಿ ಹಿರೇಬೆಟ್ಟು ಅವರ 'ನಿರಂತರ' ಮಾನವ ಸಹಜ ಗುಣದ ಸಮರ್ಥ ನಿರೂಪಣೆ.

*ಮೈಸೂರು* **ಕೊ. ಸು. ನರಸಿಂಹಮೂರ್ತಿ**

ಜನವರಿ ೨೦೧೨ 'ಹೊಸತು' ಪತ್ರಿಕೆಯ ವಿಶೇಷ ಸಂಚಿಕೆಯು ಇಡೀ ಒಂದು ವರ್ಷ ಓದುವಂತಹ ಲೇಖನಗಳಿಂದ ತುಂಬಿದೆ. ವಿಜ್ಞಾನ, ಆರ್ಥಿಕ, ಸಾಮಾಜಿಕ ಹಾಗೂ ಸಾಹಿತ್ಯ ಮುಂತಾದ ವಿಷಯಗಳ ಬಗ್ಗೆ ಇರುವ ಲೇಖನಗಳು ಅತ್ಯಂತ ಪ್ರಬುದ್ಧತೆಯಿಂದ ಕೂಡಿವೆ.

ಹೀಗೆಯೇ 'ಹೊಸತು' ಪತ್ರಿಕೆ ಮುಂದುವರೆಯಲಿ, ಬೆಳೆಯಲಿ, ವೈಚಾರಿಕ ವಿಚಾರ ಕ್ರಾಂತಿಗೆ ದಾರಿದೀಪವಾಗಲಿ ಅಂತ ಹಾರೈಸುತ್ತೇನೆ.

*ಹಾವೇರಿ* **ಜಿ. ಎ. ಹಿರೇಮಠ**

**ಮಡೆಸ್ನಾನ**

ಸಂಚಿಕೆಯ ಮೇಲೆ ಕಣ್ಣಾಡಿಸಿದಾಗ ಸುಂದರ ಮುದ್ರಣ ಹಾಗೂ ವಿಷಯ ವೈವಿಧ್ಯತೆಗಳನ್ನು ಕಂಡು ಸಂತಸವಾಗಿದೆ. ಜೊತೆಗೆ, ೧೦ ವರ್ಷಗಳಿಂದ 'ಹೊಸತು' ಕೊಂಡು ಓದುವ ನನಗೆ ನಾಳೆಯ ನೆಮ್ಮದಿಯ ಬಾಳಿನ ಬಗ್ಗೆ ಭರವಸೆಯಿದೆ.

'ಈ ತಿಂಗಳು' ಭಾಗದಲ್ಲಿ ಕುಕ್ಕೆ ಸುಬ್ರಹ್ಮಣ್ಯ ಸನ್ನಿಧಿಯಲ್ಲಿ ಎಂಜಲೆಲೆಗಳ ಮೇಲೆ ಉರುಳುವ ಪರಂಪರೆಯ ಬಗ್ಗೆ ಟೀಕಿಸಿದ್ದೀರಿ. ಈ ಪರಂಪರೆ ಪೇಜಾವರ ಶ್ರೀಗಳವರಿಗೆ ಪ್ರಿಯವಾದದ್ದು, ಅನುಕೂಲವಾದದ್ದು, ಅದಕ್ಕಾಗಿ ಅವರು ಈ ಹೀನ ಪರಂಪರೆಯನ್ನು ಖಂಡಿಸಿಲ್ಲ ಎನ್ನುವ ವಿಚಾರ ನಿಮ್ಮ ಲೇಖನದಿಂದ ಹೊರಹೊಮ್ಮಿದೆ. ಆದರೆ ಈ ಅಭಿಪ್ರಾಯ ಸತ್ಯಕ್ಕೆ ದೂರ ಎನ್ನುವ ವಿಚಾರ ನನ್ನದು. ಅವರು ಈ ಪರಂಪರೆ ಪದ್ಧತಿಯನ್ನು ಸಮರ್ಥಿಸುವ ಹೇಳಿಕೆ ಕೊಟ್ಟದ್ದು ನನ್ನ ಗಮನಕ್ಕೆ ಬಂದಿಲ್ಲ. ಇದಕ್ಕೆ ವ್ಯತಿರಿಕ್ತವಾಗಿ ಈ ಅಹಿತಕರ ಬೆಳವಣಿಗೆಯನ್ನು ನಿವಾರಿಸುವ ಬಗ್ಗೆ ಎಲ್ಲರೂ ಕೂಡಿ ಚರ್ಚಿಸೋಣ ಎಂದು ಅವರು ವ್ಯಕ್ತಪಡಿಸಿದ್ದಾರೆ. ನೂರಾರು ವರ್ಷಗಳಿಂದ ಬಂದ ಈ ಅನಿಷ್ಟ ಪದ್ಧತಿಯ ಬಗ್ಗೆ ಕೂಲಂಕಷವಾಗಿ ವಿಚಾರಿಸಲು ಹಾಗೂ ಅದರ ನಿರ್ಮೂಲನೆಗಾಗಿ ಪ್ರಯತ್ನಿಸಬೇಕೇ ಹೊರತು, ಅದಕ್ಕೆ ಪೇಜಾವರರೇ ಹೊಣೆ ಎನ್ನುವ ವಿಚಾರ ತಪ್ಪು.

ಸುಮಾರು ೫೦ ವರ್ಷಗಳ ಹಿಂದಿನ ಘಟನೆ. ನಾನಾಗ ಕಾಲೇಜು ಶಿಕ್ಷಣ ಮುಗಿಸಿದ್ದೆ. ವಾಮಪಂಥೀಯ ವಿಚಾರಗಳ ಪ್ರಭಾವಕ್ಕೆ ಒಳಗಾದ ಕಾಲ. ಆಗ ನನಗೆ ಒಬ್ಬ ಹಿರಿಯ, ಮೇಧಾವಿ ಶಿಕ್ಷಕರ ಸಂಬಂಧ ಬಂದಿತು. ಅವರು ಸುಮಾರು ೧೦೦ ವರ್ಷಗಳ ಹಿಂದೆ ಪುಣೆಯ ಪ್ರಸಿದ್ಧ ಕಾಲೇಜೊಂದರಲ್ಲಿ ಅಭ್ಯಾಸ ಮಾಡಿದ್ದು, ಹೊಸ ವಿಚಾರಗಳನ್ನು ಮುಕ್ತವಾಗಿ ಪ್ರಸ್ತಾಪಿಸುತ್ತಿದ್ದರು. ಈ ಹಿರಿಯ ವ್ಯಕ್ತಿ ಹಿರಿಯ ಮಾಧ್ಯಮಿಕ ಶಾಲೆಯ ಮುಖ್ಯ ಅಧ್ಯಾಪಕರಾಗಿ ನಿವೃತ್ತರಾಗಿದ್ದರು. ಅವರ ಜೊತೆಗೆ ಪುರುಷಸೂಕ್ತದ ವಿಚಾರ ಅನೇಕ ಸಲ ಚರ್ಚಿಸಿದ್ದೆ. ಅವರು ನನಗೆ ಈ ಸೂಕ್ತದಲ್ಲಿ ದುಡಿಮೆಯ ವಿಭಜನೆಯ ಬೀಜ ಕಾಣುವುದಿಲ್ಲವೇ ಎಂದು ಪ್ರಶ್ನಿಸಿದ್ದರು. ಋಗ್ವೇದ ಕಾಲದಲ್ಲಿ ಜಾತಿಗಳು ಇರಲಿಲ್ಲ, ವರ್ಣಗಳಿದ್ದವು. ಯಾವುದೇ ವ್ಯಕ್ತಿ ತನ್ನ ಶಕ್ತಿಯನುಸಾರ ಬೇಕಾದ ವರ್ಣಕ್ಕೆ ಸೇರುವ ಅವಕಾಶ ಇತ್ತು. ಜನ್ಮದಿಂದ ವರ್ಣ ನಿರ್ಧಾರವಾಗುತ್ತಿರಲಿಲ್ಲ ಎಂಬುದು ಅವರ ವಿಚಾರವಾಗಿತ್ತು.

ಇನ್ನು ಬ್ರಾಹ್ಮಣರ ಎಂಜಲು ಎಲೆಯಲ್ಲಿ ಉರುಳುವ ವಿಚಾರ. ಕುಕ್ಕೆ ಸುಬ್ರಹ್ಮಣ್ಯ ದೇವಸ್ಥಾನದಲ್ಲಿ ಕೆಳಜಾತಿಯ ಜನ, ಇದರಲ್ಲಿ ಭಾಗವಹಿಸುತ್ತಿದ್ದರೆ, ಧಾರವಾಡ ಜಿಲ್ಲೆಯ ಸವಣೂರ ಮಠದಲ್ಲಿ ಬ್ರಾಹ್ಮಣರೇ ಎಂಜಲು ಎಲೆಯಲ್ಲಿ ಉರುಳಾಡುವ ಪದ್ಧತಿ ಇತ್ತು. ಈ ಎಂಜಲೆಲೆಯಲ್ಲಿ ೨-೩ ಸಲ ಉರುಳಾಡಿ ಮನೆಗೆ ಬಂದು ಸ್ನಾನ ಮಾಡಿದ ನೆನಪಿದೆ. ಇದು ಸುಮಾರು ೬೫ ವರ್ಷಗಳ ಹಿಂದಿನ

ಘಟನೆ. ಈಗ ಸವಣೂರ ಮಠದಲ್ಲಿ ಈ ಪದ್ಧತಿ ಇದೆಯೋ ಇಲ್ಲವೋ ಗೊತ್ತಿಲ್ಲ, ಆ ಸಮಯದಲ್ಲಿ ಮನೆಯ ಹಿರಿಯರು ಈ ವಿಷಯದಲ್ಲಿ ನಿರ್ಣಯ ಕೈಗೊಳ್ಳುತ್ತಿದ್ದರು. ಈ ಉರುಳುವ ಕಾರ್ಯಕ್ರಮದಲ್ಲಿ ಭಾಗವಹಿಸಲು ಯಾರದೇ ಒತ್ತಾಯ ಒತ್ತಡ ಇರುತ್ತಿರಲಿಲ್ಲ.

*ಕಾಂದಿವಿಲಿ (ಪೂರ್ವ), ಮುಂಬಯಿ* **ಹ. ಶ್ರೀ. ಆಡೂರ**

### ಫೆಬ್ರವರಿ ಸಂಚಿಕೆ

'ಕನ್ನಡಕ್ಕೆ ಕೈತಪ್ಪಿದ ಎರಡು ಮಹತ್ವದ ಕಾದಂಬರಿಗಳು' (ಜ. ಹೊ. ನಾರಾಯಣಸ್ವಾಮಿ) ತಾವು ಬರೆಯ ಬೇಕೆಂದಿದ್ದ 'ಕಾಲೋಸ್ಮಿ', 'ಭಯಂಕರ ಆಯಾಮಗಳ ಕಾದಂಬರಿ' ಎಂದೂ ಯಾರ ಪ್ರಭಾವಕ್ಕೂ ಒಳಗಾಗದೆ ಅದನ್ನು ಬರೆಯುವುದಾಗಿಯೂ ಒಮ್ಮೆ ನನ್ನೊಡನೆ ಮಾತನಾಡುತ್ತ ತಿಳಿಸಿದ್ದರು, ಕುವೆಂಪು. ಆದರೆ ''ಹಿಂದೆಯೇ ಬರೆಯಬೇಕಿತ್ತು!'' ಎಂದು ಕಡೆಗಾಲದಲ್ಲಿ ವಿಷಾದಿಸಿದರು.

ಮೈಸೂರು **ಸಿ.ಪಿ.ಕೆ.**

ಫೆಬ್ರವರಿ ಸಂಚಿಕೆ ಅತ್ಯುತ್ತಮವಾಗಿ ಮೂಡಿಬಂದಿದೆ. ಹಲವಾರು ಲೇಖನ, ಕಥೆ, ಕವಿತೆ, ವಿಚಾರಶೀಲ ಲೇಖನಗಳಿಂದ ಶೃಂಗಾರಗೊಂಡು ಮೂಡಿಬಂದಿದೆ. ನನಗಂತೂ ಡಾ|| ಗೌರೀಶ ಕಾಯ್ಕಿಣಿ ಅವರ ಕುರಿತ ಲೇಖನ ಹಾಗೂ ಎಂ. ಡಿ. ಒಕ್ಕುಂದ ಅವರದು, ಹಾಗೂ ಕೆನಡಿ ಅವರ ಕುರಿತು ತಳಮಳದ ಲೇಖನ, ಅಲ್ಲದೆ ನನ್ನ ನೆಚ್ಚಿನ ಕುವೆಂಪು + ತೇಜಸ್ವಿ ಅವರ ಕನ್ನಡ ಸಾರಸ್ವತ ಲೋಕಕ್ಕೆ ಬರಬೇಕಿದ್ದ ಕೈ ತಪ್ಪಿದ ಕಾದಂಬರಿ ಕುರಿತ ಲೇಖನ ಸಕತ್ತು ಇಷ್ಟವಾಯಿತು. ನೋವೂ ಆಯಿತು. ನಾರಾಯಣಸ್ವಾಮಿ ಅವರಿಗೆ ನನ್ನ ವಿಶೇಷ ಧನ್ಯವಾದ.

*ತೇರದಾಳ* **ಡಾ|| ಸಿ. ಮಂಜುನಾಥ**

ಫೆಬ್ರವರಿ ೨೦೧೨ರ ಸಂಚಿಕೆಯಲ್ಲಿ ಪ್ರಕಟವಾದ 'ಜಾಗತೀಕರಣದ ಕಾಲದಲ್ಲೂ ಜಾತಿವ್ಯವಸ್ಥೆ ಕರಗುತ್ತಿಲ್ಲ' ಲೇಖನ ಓದಿದೆ. ಜಾತಿ ವ್ಯವಸ್ಥೆ ಕರಗಬೇಕಾದರೆ ಸಾರ್ವಜನಿಕರ ಆರ್ಥಿಕ ಸ್ಥಿತಿ-ಗತಿಗಳು ಸಮವಾಗುವಂತೆ ಸರಕಾರ ವ್ಯವಸ್ಥೆ ಮಾಡಬೇಕು. ಆಗ ಸಮಾಜದಲ್ಲಿ ಶಾಂತಿ, ಪ್ರೀತಿ, ವಿಶ್ವಾಸ, ಪ್ರಗತಿ,... ಮುಂತಾದ ಧನಾತ್ಮಕ ಅಂಶಗಳನ್ನು ನೋಡಬಹುದು. ಹಲವು ದಶಕಗಳ ನಂತರ ಜಾತಿಯ ಅಂತಸ್ತು ಮುರಿದುಬೀಳುತ್ತದೆ. ಅಂದು ನಾವು ಜಾತ್ಯತೀತ ವ್ಯವಸ್ಥೆ ನೋಡಬಹುದು. ಅಲ್ಲಿಯವರೆಗೂ ಜಾತಿಯ ಸೋಂಕಿನಿಂದ ನರಳುತ್ತ ಸಾಯಬೇಕು ಇಲ್ಲವೇ ನರಳುತ್ತಾ ಬದುಕಬೇಕು.

ತುಮಕೂರು **ವಾಮನರಾವ್**

### ಚುನಾವಣಾ ವ್ಯವಸ್ಥೆ

ರಾಜಕೀಯ ಭ್ರಷ್ಟಾಚಾರದ ಬಗ್ಗೆ ಮಾತಾಡುವಾಗೆಲ್ಲ 'ಚುನಾವಣಾ ವ್ಯವಸ್ಥೆ'ಯಲ್ಲಿ ಸುಧಾರಣೆಯಾಗಬೇಕೆಂಬ ಮಾತು ಕೇಳಿಬರುತ್ತದೆ. ಚುನಾವಣಾ ವ್ಯವಸ್ಥೆಯಲ್ಲಿನ ಸುಧಾರಣೆಯೆಂದರೆ, ಅಭ್ಯರ್ಥಿಗಳು ಖರ್ಚು ಮಾಡುವ ಹಣ ಮತ್ತು ಹಂಚುವ ಹೆಂಡ-ಸೀರೆಗಳನ್ನು ನಿಯಂತ್ರಿಸು ವುದೆಂಬ ಸೀಮಿತ ಅರ್ಥದಲ್ಲಿ ನಾವು ಯೋಚಿಸುತ್ತಿದ್ದೇವೆ. ಆದರೆ ಇದಕ್ಕಿಂತ ತುರ್ತಾಗಿ ಆಗಬೇಕಿರುವುದು (ನಮ್ಮ ರಾಜ್ಯಕ್ಕೆ ಅನ್ವಯಿಸುವಂತೆ) ಅನಗತ್ಯವಾಗಿ ನಡೆಯುತ್ತಿರುವ ಚುನಾವಣೆಗಳ ಸಂಖ್ಯೆಗಳನ್ನು ಕಡಿಮೆ ಮಾಡುವುದು.

ಕರ್ನಾಟಕದಲ್ಲಿ ಕಳೆದ ಮೂರು ವರ್ಷಗಳಲ್ಲಿ ಸುಮಾರು ಇಪ್ಪತ್ತು ಉಪಚುನಾವಣೆಗಳು ನಡೆದಿವೆ. ನನ್ನ ಪ್ರಶ್ನೆಯಿರುವುದು : ಈ ರಾಜ್ಯಕ್ಕೆ ಇಷ್ಟು ಅಲ್ಪಾವಧಿಯಲ್ಲಿ ಇಷ್ಟೊಂದು ಚುನಾವಣೆಗಳು ಅಗತ್ಯವಿದ್ದವೆ? ಒಂದು ಉಪಚುನಾವಣೆ ನಡೆಯುವುದು ಆ ಕ್ಷೇತ್ರದ ಜನಪ್ರತಿನಿಧಿ ಮರಣಹೊಂದಿದರೆ ಅಥವಾ ಅವನು ರಾಜೀನಾಮೆ ನೀಡಿದರೆ ಮಾತ್ರ. ನಮ್ಮಲ್ಲಿ ನಡೆದ ಇಪ್ಪತ್ತು ಚುನಾವಣೆ ಗಳಲ್ಲಿ ಒಂದೆರಡನ್ನು ಹೊರತುಪಡಿಸಿದರೆ ಉಳಿದವು ನಡೆದಿದ್ದು ನಮ್ಮ ಜನಪ್ರತಿನಿಧಿಗಳು ಯಾವುದೇ ಸರಿಯಾದ ಕಾರಣ ನೀಡದೆ ರಾಜೀನಾಮೆ ನೀಡಿದ್ದರಿಂದ. ಹೀಗೆ ತನ್ನ ಸ್ವಹಿತಾಸಕ್ತಿಗಳಿಗಾಗಿ ಜನಪ್ರತಿನಿಧಿಯೊಬ್ಬ ತನಗಿಷ್ಟಬಂದಾಗ ರಾಜೀನಾಮೆ ನೀಡುವುದು, ಮತ್ತೆ ಅದೇ ಕ್ಷೇತ್ರದಲ್ಲಿ ಚುನಾವಣೆಗೆ ನಿಲ್ಲುವುದು ಕಾನೂನಿನ ಪ್ರಕಾರ ಸರಿಯೇ ಆದರೂ ನೈತಿಕವಾಗಿ ಮತ್ತು ಪ್ರಜಾತಂತ್ರದ ಮೌಲ್ಯಗಳಿಗೆ ಮಾರಕವಾದುವಾಗಿವೆ. ಆದ್ದರಿಂದ ಈಗ ತುರ್ತಾಗಿ ಆಗಬೇಕಿರುವುದು ಉಪ ಚುನಾವಣೆಗಳ ಕಾನೂನನ್ನು ತಿದ್ದುಪಡಿ ಮಾಡುವುದು. ಯಾರೇ ಜನಪ್ರತಿನಿಧಿ ರಾಜೀನಾಮೆ ಕೊಟ್ಟರೆ (ಅದಕ್ಕೆ ಕಾರಣಗಳೇನೇ ಇರಲಿ!) ಆ ಕ್ಷೇತ್ರದಲ್ಲಿ ಆತ ಮತ್ತೈದು ವರ್ಷಗಳ ಕಾಲ ಚುನಾವಣೆಗೆ ನಿಲ್ಲಬಾರದೆಂಬ ಕಾನೂನು ಮಾಡಬೇಕು. ಅಷ್ಟೇ ಅಲ್ಲ, ಆತನಿಂದ ಚುನಾವಣೆಗಾಗಿ ಸರಕಾರ ಮಾಡಿದ ಖರ್ಚನ್ನು ವಸೂಲು ಮಾಡಬೇಕು. ಇದರಿಂದ ಯಾರೇ ಜನಪ್ರತಿನಿಧಿ ರಾಜೀನಾಮೆ ನೀಡಲು ಹೆದರುತ್ತಾನೆ. ಇಂತಹದೊಂದು ಕಾನೂನನ್ನು ರೂಪಿಸಿದಾಗ ಮಾತ್ರ ಅಭಿವೃದ್ಧಿಯ ಹೆಸರಿನಲ್ಲಿ, ಜಾತಿಯ ಅಹಮಿನಲ್ಲಿ ರಾಜೀನಾಮೆ ನೀಡಿ ಮತದಾರರ ಭಾವನೆಗಳಿಗೆ ಘಾಸಿ ಉಂಟುಮಾಡುವ ರಾಜಕಾರಣಿಗಳ ಸಂಖ್ಯೆ ಕಡಿಮೆಯಾಗುತ್ತದೆ.

ಜನಪ್ರತಿನಿಧಿಯಾಗಿ ಆಯ್ಕೆಯಾಗದ ವ್ಯಕ್ತಿಯೊಬ್ಬ ಮಂತ್ರಿಯಾದರೆ ಆತ ಆರು ತಿಂಗಳ ಒಳಗೆ ಯಾವುದಾದರೂ ಒಂದು ಕ್ಷೇತ್ರದಿಂದ ಆಯ್ಕೆಯಾಗಲೇಬೇಕು. ಆಗ ಈಗಾಗಲೇ ಗೆದ್ದಿರುವ ಜನಪ್ರತಿನಿಧಿ (ಆತ ಎಂ.ಎಲ್.ಎ., ಎಂ.ಎಲ್.ಸಿ. ಅಥವಾ ಎಂ.ಪಿ. ಆಗಿದ್ದರೂ) ರಾಜೀನಾಮೆ ನೀಡಿ, ಆಯ್ಕೆಯಾಗಬೇಕಿರುವ ವ್ಯಕ್ತಿಗಾಗಿ ತನ್ನ ಕ್ಷೇತ್ರ ವನ್ನಷ್ಟೇ ತೆರವುಗೊಳಿಸಬೇಕು. ಮತ್ತೆ ಅಲ್ಲಿ ಉಪ ಚುನಾವಣೆ ನಡೆದು ಈಗಾಗಲೇ ಅಧಿಕಾರ ಸ್ವೀಕರಿಸಿದ ವ್ಯಕ್ತಿ ಆ ಚುನಾವಣೆಯಲ್ಲಿ ಗೆದ್ದು ತನ್ನ ಅಧಿಕಾರಕ್ಕೆ ಅಧಿಕೃತತೆಯನ್ನು ನೀಡಬೇಕು. ಇಂತಹ ಉಪಚುನಾವಣೆ ಸಹ ಪ್ರಜಾತಂತ್ರದ ಆಶಯಗಳಿಗೆ ವಿರೋಧಿಯಾದದ್ದು ಮತ್ತು ಸರಕಾರದ ಬೊಕ್ಕಸಕ್ಕೆ ಹೊರೆಯಾಗುವಂತಾದ್ದು. ಆದ್ದರಿಂದ ವಿಧಾನಸಭೆಯಲ್ಲಿ ಅಥವಾ ಪಾರ್ಲಿಮೆಂಟಿನಲ್ಲಿ ಬಹುಮತ ಪಡೆದ ಪಕ್ಷವೊಂದು, ತನ್ನ ಚುನಾಯಿತ ಸದಸ್ಯರಲ್ಲೊಬ್ಬರನ್ನೇ ನಾಯಕನನ್ನಾಗಿ, ಮಂತ್ರಿಯನ್ನಾಗಿ ಆಯ್ಕೆ ಮಾಡಿಕೊಳ್ಳುವ ವ್ಯವಸ್ಥೆಯೊಂದನ್ನು ರೂಪಿಸಬೇಕು.

ರಂಗೇನಹಳ್ಳಿ **ಕು. ಸ. ಮಧುಸೂದನ**

---

ಮೈಸೂರಿನ ಯುವಶಕ್ತಿ ಪ್ರಕಾಶನವು ದೇಶ-ವಿದೇಶಗಳಲ್ಲಿ ನೆಲೆಸಿರುವ ಕನ್ನಡ ಲೇಖಕ, ಲೇಖಕಿಯರ ಪರಿಚಯಾತ್ಮಕ ಗ್ರಂಥವನ್ನು ಹೊರತರಲು ಸಿದ್ಧತೆ ನಡೆಸಿದೆ. ಆಸಕ್ತ ಲೇಖಕ, ಲೇಖಕಿಯರು ತಮ್ಮ ಪ್ರಕಟಿತ ಕೃತಿಗಳ ವಿವರ, ಪಡೆದ ಪ್ರಶಸ್ತಿಗಳ ಮಾಹಿತಿಯೊಂದಿಗೆ ಏಪ್ರಿಲ್ 30ರೊಳಗೆ ಪತ್ರ ಬರೆಯಲು ವಿನಂತಿ.

**ಬಿ. ಬಸವರಾಜು**
ಯುವಶಕ್ತಿ ಪ್ರಕಾಶನ
೧೭೪/೧ಸಿ, ೮ನೇ ಕ್ರಾಸ್
ಟರೇಷಿಯನ್ ಕಾಲೇಜು ಹತ್ತಿರ
ಮಹದೇಶ್ವರ ದೇವಸ್ಥಾನದ ಎದುರು
ವಿದ್ಯಾನಗರ, ಮೈಸೂರು - ೫೭೦ ೦೧೧

---



## ಅಭಿನಂದನೆ

*ವಿಜ್ಞಾನ ವಿಷಯಾಂಶಗಳ ಸಮರ್ಥ ಸಂವಹನ ಮತ್ತು ಪ್ರಸಾರ, ಗಣಿತಶಾಸ್ತ್ರ ಬೋಧನೆಯ ವೈಜ್ಞಾನಿಕ ಕ್ರಮದ ಬಗ್ಗೆ ತರಬೇತಿ, ವೈಜ್ಞಾನಿಕ ಮನೋಭಾವಕ್ಕಾಗಿ ಚಳುವಳಿ, ಹತ್ತಾರು ವಿಷಯಗಳಲ್ಲಿ ಪರಿಣತಿ, ಹೀಗೆ ಬಹುಮುಖ ಪ್ರತಿಭೆಯ ಶ್ರೀ. ವಿ. ಎಸ್. ಎಸ್. ಶಾಸ್ತ್ರಿ ಅವರಿಗೆ ವಿಜ್ಞಾನ ಸಂವಹನ ಪ್ರಶಸ್ತಿ ನೀಡಿ ಗೌರವಿಸಲಾಗಿದೆ. 'ಹೊಸತು' ಅವರಿಗೆ ಹಾರ್ದಿಕ ಅಭಿನಂದನೆ ಸಲ್ಲಿಸುತ್ತದೆ ಮತ್ತು ಅವರ ಚಳುವಳಿಯೊಂದಿಗೆ ಸಹಮತ ವ್ಯಕ್ತಪಡಿಸುತ್ತದೆ.*

# ಓದುಗರ ವೇದಿಕೆ

*ಕಳೆದ ಸಂಚಿಕೆಯಿಂದ ಮುಂದುವರೆದುದು.....*

ಭ್ರಷ್ಟಾಚಾರದ ನಿರ್ಮೂಲನ ಕುರಿತು ಓದುಗರು ತಮ್ಮ ಅನಿಸಿಕೆಗಳನ್ನು ಸಂಕ್ಷಿಪ್ತವಾಗಿ ನೀಡಬೇಕೆಂದು ವಿನಂತಿಸಿಕೊಂಡಿದ್ದೆವು. ಅನೇಕ ಓದುಗರು ತಮ್ಮ ಪ್ರತಿಕ್ರಿಯೆಗಳನ್ನು ಕಳಿಸಿದ್ದಾರೆ, ಅವರಿಗೆಲ್ಲಾ ನಮ್ಮ ವಂದನೆಗಳು ಸಲ್ಲುತ್ತವೆ. ನಮಗೆ ತಲುಪಿದ್ದ ಬರಹಗಳ ಪೈಕಿ ಕೆಲವನ್ನು ಆಯ್ದು ಜನವರಿ ಮತ್ತು ಫೆಬ್ರವರಿ ಸಂಚಿಕೆಗಳಲ್ಲಿ ಪ್ರಕಟಿಸಲಾಗಿತ್ತು. ಇನ್ನು ಕೆಲವನ್ನು ಈಗ ಪ್ರಸ್ತುತಪಡಿಸಲಾಗಿದೆ. ಅಭಿಪ್ರಾಯಗಳು ಕ್ರಿಯೆಗಳಿಗೆ ಅಡಿಪಾಯವಾಗಲೆಂದು ಆಶಿಸುತ್ತೇವೆ.

– ಸಂ

# ಭ್ರಷ್ಟಾಚಾರದ ನಿರ್ಮೂಲನಕ್ಕೆ ಸೂಚನೆಗಳು

## ಪ್ರತಿಜ್ಞೆ

''ಭ್ರಷ್ಟಾಚಾರದಲ್ಲಿ ನಿರತರಾದವರ ಕುಟುಂಬಗಳಲ್ಲಿ ನೆಮ್ಮದಿ ನೆಲೆಗೊಳ್ಳದೆ, ಅನಾರೋಗ್ಯ, ಅಜ್ಞಾನ, ಅಂಧಕಾರ, ಅನಿಶ್ಚಿತತೆ, ಅನಿಷ್ಟ ಮುಂತಾದವುಗಳು ಗೆದ್ದಲುಹುಳುವಿನ ರೂಪ ತಾಳಿ, ಹೆಮ್ಮರವಾಗಿ ಬೆಳೆದ/ಬೆಳೆಯುತ್ತಿರುವ ಕುಟುಂಬಗಳಲ್ಲಿ ಸದ್ದುಮಾಡದೆ ಒಳಗೊಳಗೆ ಗುದ್ದು ತೋಡಿಕೊಂಡು ಎಲ್ಲವನ್ನ ತಿಂದುಂಡು ಭ್ರಷ್ಟರ ಮನೆಯನ್ನು ಮತ್ತು ಮನಸ್ಸನ್ನು ಸದ್ದಡಗಿಸಿಬಿಡುತ್ತವೆ ಅನ್ನೋ ವಾಸ್ತವವನ್ನ ನಾವು ಈಗಾಗಲೇ ಸಂಪೂರ್ಣವಾಗಿ ಅರ್ಥೈಸಿಕೊಂಡಿದ್ದೇವೆ.

''ರೈತರ, ದೀನ ದಲಿತರ, ದುರ್ಬಲರ ಹಣ, ಆಸ್ತಿಯನ್ನ ಕೊಳ್ಳೆ ಹೊಡೆದರೆ ಪರೋಕ್ಷವಾಗಿ ನಾವು ನಮ್ಮ ಬದುಕಿಗೇ ಕೊಳ್ಳಿ ಇರಿಸಿ ಕೊಂಡಂತೆ, ಅನ್ನೋ ಕಟುಸತ್ಯವನ್ನು ಅರಿತಿದ್ದೇವೆ. ತನ್ನಿಮಿತ್ತ ನಾವೆಲ್ಲರೂ ಆಡಂಬರದ ಬದುಕಿಗೆ ವಿದಾಯ ಹೇಳಿ, ನಿರಾಡಂಬರ ವಾದ ಬದುಕನ್ನ ರೂಪಿಸಿಕೊಂಡು, ನಿರ್ಮಲವಾದ ಮತ್ತು ನಿರಾಳವಾದ ಒಂದು ಸರಳ ಸುಂದರ ಜೀವನವನ್ನು ಕಟ್ಟಿಕೊಂಡು ನಮ್ಮೀ ನಾಡಿಗೆ ನಾವು ಮಾದರಿಯಾಗುವುದರ ಜೊತೆಗೆ ಬೃಹದಾಕಾರವಾಗಿ ಬೆಳೆಯು ತ್ತಿರುವ ಭ್ರಷ್ಟಾಚಾರವನ್ನ ಬೇರು ಸಮೇತ ಕಿತ್ತೆಸೆಯಬೇಕೆಂಬ ಸಂಕಲ್ಪವನ್ನು ಮಾಡಿದ್ದೇವೆ.''

ಹೀಗೆ ಒಂದು ಸರಕಾರಿ, ಅರೆಸರಕಾರಿ, ಖಾಸಗಿ ಹಾಗೂ ಸರಕಾರದ ಅನುದಾನ ಪಡೆಯುತ್ತಿರುವ ಎಲ್ಲ ಕಚೇರಿಗಳ ನೌಕರರು ಕರ್ತವ್ಯಕ್ಕೆ ಹಾಜರಾಗುವ ಮೊದಲು ಸಾಮೂಹಿಕವಾಗಿ ಪ್ರತಿಜ್ಞೆ ಮಾಡಿ ನಂತರ ಕೆಲಸ ಮಾಡಬೇಕು. ಇಂತಹದ್ದೊಂದು ಪ್ರತಿಜ್ಞೆ ಪ್ರತಿಯೊಬ್ಬ ನೌಕರನನ್ನು ಕ್ರಮೇಣ ಜಾಗ್ರತನನ್ನಾಗಿ ಮಾಡುವುದರ ಜೊತೆಗೆ ಭ್ರಷ್ಟಾಚಾರವನ್ನು ನಿರ್ಮೂಲನೆ ಮಾಡಬಲ್ಲದು ಎಂಬ ನಂಬಿಕೆ ನನಗಿದೆ.

**ಕೆ. ಬಿ. ವೀರಲಿಂಗನಗೌಡ್ರ**, ನಂದಿಕೇಶ್ವರ - ೫೮೭ ೨೦೧, ಬಾದಾಮಿ, ಬಾಗಲಕೋಟೆ ಜಿಲ್ಲೆ

* * *

ಶ್ರೀಮತಿ ಇಂದಿರಾ ಗಾಂಧಿಯವರು, ಭ್ರಷ್ಟಾಚಾರ ಭಾರತದಲ್ಲಿ ಮಾತ್ರವಲ್ಲ, ಇಡೀ ಪ್ರಪಂಚದಲ್ಲಿದೆ; ಅದಕ್ಕಾಗಿ ನಾವು ತಲೆಕೆಡಿಸಿಕೊಳ್ಳಬೇಕಾಗಿಲ್ಲವೆಂದು ಹೇಳಿದ್ದರು. ಅವರ ಕಾಲದಲ್ಲಿದ್ದ ಭ್ರಷ್ಟಾಚಾರಕ್ಕೂ ಇಂದಿನದಕ್ಕೂ ಅಜಗಜಾಂತರವಿದೆ. ಇಂದಿನವರೆಗೆ ಯಾರೂ ಸಾಯದೇ ಇರುವ ಮನೆಯಿಂದ ಸಾಸಿವೆ ತರಲು ಸಾಧ್ಯವಾಗದಂತೆ ಭ್ರಷ್ಟರಿಲ್ಲದ ಮಂತ್ರಿಮಂಡಲ, ಲಂಚ ತೆಗೆದುಕೊಳ್ಳದ ಸರ್ಕಾರಿ ಕಾರ್ಯಾಲಯ ಕಣ್ಣಿಗೆ ಎಣ್ಣೆ ಹಾಕಿ ಹುಡುಕಿದರೂ ಸಿಗದು. ಹತ್ತು ತಲೆಮಾರಿಗೆ ಬರುವಷ್ಟು ಹಿರಿಯರು ಮಾಡಿಟ್ಟ ಸಂಪತ್ತು, ಆಸ್ತಿಪಾಸ್ತಿ ಇದ್ದರೂ ಮತ್ತಷ್ಟು ಗಂಟು ಕಟ್ಟಿ ಇಡಬೇಕೆಂಬ ದುರಾಸೆ. ದುಡಿಯದೆ ಭೋಗ ಜೀವನ ನಡೆಸಬೇಕೆಂಬ ದುರಹಂಕಾರ. ಕೈಗೆ ಕಾಲಿಗೆ ಕೆಲಸದವರನ್ನು ಇಟ್ಟುಕೊಂಡು ಮೆರೆಯಬೇಕೆಂಬ ಪ್ರದರ್ಶನಪ್ರಿಯತೆ. ಜನತೆಯ ತೆರಿಗೆಯ ಹಣವನ್ನು ನುಂಗಿ ನೀರು ಕುಡಿದು ತೇಗುವ ಇಂತಹ ನರರಾಕ್ಷಸರನ್ನು, ಭ್ರಷ್ಟಾತಿಭ್ರಷ್ಟರನ್ನು ಸದೆಬಡೆಯಬೇಕು.

ಭ್ರಷ್ಟಾಚಾರದ ತಾಯಿಬೇರು ಇರುವುದು ಚುನಾವಣೆಯಲ್ಲಿ. ಹೆಸರಿಗೆ ನಮ್ಮದು ಪ್ರಜಾಪ್ರಭುತ್ವ ರಾಷ್ಟ್ರ. ಜನಮತದ ಹೆಸರಿನಲ್ಲಿ ಕೇಂದ್ರ ಹಾಗೂ ರಾಜ್ಯಗಳಲ್ಲಿ ಧನಮತದ, ಅಂದರೆ ಹಣದ ಬಲದಿಂದ ಗೆದ್ದುಬಂದ ಶಾಸಕರಿರುವ ಸರ್ಕಾರ. ಜಾತಿಬಲವೂ ತನ್ನ ಪ್ರಭಾವವನ್ನು ಬೀರುತ್ತಿದೆ. ಒಟ್ಟು ಪರಿಣಾಮ ಇಂದು ನಮ್ಮ ಸಂಸತ್ತಿನಲ್ಲಿ, ಶಾಸನ ಸಭೆಗಳಲ್ಲಿ ಶೇಕಡ ೬೦ಕ್ಕೂ ಮಿಕ್ಕಿ ಕ್ರಿಮಿನಲ್‌ಗಳು ಸೇರಿಕೊಂಡಿದ್ದಾರೆ. ಇದನ್ನು ಮಾಜಿ ಲೋಕಸಭಾ ಸ್ಪೀಕರ್ ಸೋಮನಾಥ ಚಟರ್ಜಿಯವರೇ ಹೇಳಿದ್ದಾರೆ.

ಭ್ರಷ್ಟಾಚಾರದಿಂದ ಸಂಪಾದಿಸಿದ ಕೋಟಿ ಕೋಟಿ ಹಣದಲ್ಲಿ ಮೇಲಧಿಕಾರಿಗಳಿಗೆ, ಇಲಾಖೆಯ ಪ್ರಮುಖರಿಗೆ, ಶಾಸಕರಿಗೆ, ಮಂತ್ರಿಗಳಿಗೆ ಪಾಲು ಸಲ್ಲಬೇಕು. ದುಡ್ಡು ಹೊಡೆಯದಿರಲು ಅವರೇನೂ ವಿರಕ್ತರಲ್ಲ, ಸಂನ್ಯಾಸಿಗಳಲ್ಲ. ಇನ್ನು ನಿರುದ್ಯೋಗ ಭತ್ಯೆ, ಸರ್ವಶಿಕ್ಷ ಅಭಿಯಾನ, ವಿಧವಾ ವೇತನ, ವೃದ್ಧಾಪ್ಯ ವೇತನ, ರಸ್ತೆ ಮತ್ತು ಮೋರಿ ದುರಸ್ತಿ, ರೇಶನ್, ಗ್ಯಾಸ್ ವಿತರಣೆ, ಬಡವರಿಗೆ ಮನೆ ಇತ್ಯಾದಿ ಇತ್ಯಾದಿಗಳಲ್ಲಿ ಖಜಾನೆಯ ಹಣ ಸೋರಿಹೋಗುವುದಕ್ಕೆ ಮಿತಿಯೇ ಇಲ್ಲದಾಗಿದೆ. ಎಲ್ಲದಕ್ಕೂ ಮುಖ್ಯ ಕಾರಣ ಬಡತನ ಮತ್ತು ನಿರಕ್ಷರತೆ. ಆದುದರಿಂದ ಜನರು ಜಾಗೃತರಾಗಿ ಅನ್ಯಾಯ, ಭ್ರಷ್ಟಾಚಾರಗಳ ವಿರುದ್ಧ ಹೋರಾಡಲು ಸಮರ್ಥರಾಗಿರುವುದಿಲ್ಲ. ಸದಾ ಅವರ ಮುಂದೆ ಹೊಟ್ಟೆಪಾಡಿನ ಸಮಸ್ಯೆಯೇ ಬೃಹದಾಕಾರವಾಗಿರುತ್ತದೆ. ದುಡ್ಡು ತೆಗೆದುಕೊಂಡು ಓಟು ಹಾಕುತ್ತಾರೆ. ನಮ್ಮದೇ ಶಾಸನ ಬಂದು ಇಷ್ಟು ವರ್ಷಗಳು ಸಂದರೂ, ಬಡತನ ಮತ್ತು ನಿರಕ್ಷರತೆ ತೊಲಗಿಹೋಗಲೇ ಇಲ್ಲ. ಯಾಕೆಂದರೆ ಅಧಿಕಾರಕ್ಕೆ ಬರಲು ಅವರಿಗೆ ಅದೇ ಸಾಧನ. ಭರವಸೆಯ ಮಹಾಪೂರವೇ ಹರಿದುಬರುತ್ತದೆಯಲ್ಲದೆ ಕಾರ್ಯ ರೂಪದಲ್ಲಿ ಬರೇ ಸೊನ್ನೆ. ಪ್ರಧಾನಿ ಮನಮೋಹನ ಸಿಂಗರು ಇನ್ನು ೨೦ ವರ್ಷಗಳಲ್ಲಿ ಬಡತನ ಇರದು ಅಂದರೆ, ರಾಹುಲ್ ಗಾಂಧಿ ಮೊನ್ನೆ ಉತ್ತರ ಪ್ರದೇಶದಲ್ಲಿ ಕಾಂಗ್ರೆಸ್ ಅಧಿಕಾರಕ್ಕೆ ಬಂದರೆ ಹತ್ತು ವರ್ಷಗಳಲ್ಲಿ ಒಬ್ಬನೇ ಒಬ್ಬ ಬಡವ ಈ ದೇಶದಲ್ಲಿ ಇಲ್ಲದಂತೆ ಮಾಡಲಾಗುವುದು ಅಂದಿದ್ದ. ಇನ್ನು ನೂರು ವರ್ಷ ಸಂದರೂ ನಮ್ಮ ಜನರು ಸುಧಾರಿಸಿಯಾರೆಂಬ ವಿಶ್ವಾಸ ನನಗೆ ಇಲ್ಲ. ಜನರು ಸುಧಾರಿಸದಿದ್ದರೆ, ಎಚ್ಚೆತ್ತುಕೊಳ್ಳ ದಿದ್ದರೆ ಭ್ರಷ್ಟಾಚಾರ ನಿರ್ಮೂಲನ ಅಸಂಭವ. ಯಾಕೆಂದರೆ ಕೋಟಿ ಕೋಟಿ ತೆರಿಗೆಯ ಹಣವನ್ನು ನುಂಗಿ ಜೈಲಿಗೆ ಹೋದ ಮಂತ್ರಿಯೊಬ್ಬ, ಜಾಮೀನಿನ ಮೇಲೆ ಜೈಲಿನಿಂದ ಹೊರಬರುತ್ತಿರುವಾಗ ಅವನ ಭಾವಚಿತ್ರಕ್ಕೆ ೧೦೦ ಕೊಡ ಕ್ಷೀರಾಭಿಷೇಕ ಮಾಡುತ್ತೇವೆ ಎಂದಾದರೆ, ಭಾವಚಿತ್ರದ ಬಾಯಿಗೆ ಸಿಹಿ ತಿಂಡಿಯನ್ನು ತುಂಡು ತುಂಡು ಮಾಡಿ ತುರುಕಿಸುತ್ತೇವೆ ಎಂದಾದರೆ ! ಅಪರಾಧಿಗಳಿಗೆ ಶಿಕ್ಷೆಯಂತೂ ಇಲ್ಲವೇ ಇಲ್ಲ. ವಿಚಾರಿಸು ವವನೇ ಭ್ರಷ್ಟನಾಗಿರುವಾಗ ಶಿಕ್ಷೆ ಎಲ್ಲಿಂದ ? ಇತ್ತೀಚೆಗೆ ಕೆಲವು ವರ್ಷಗಳಿಂದ




ಕೇಂದ್ರದಲ್ಲೂ ರಾಜ್ಯಗಳಲ್ಲೂ ನಡೆದ ಭ್ರಷ್ಟಾಚಾರದಿಂದ ದೇಶ ಕಳೆದು ಕೊಂಡ ತೆರಿಗೆಯ ಹಣದ ಲೆಕ್ಕ ಹಾಕಲು ಮನುಷ್ಯರಿಂದ ಸಾಧ್ಯ ವಾಗದು. ಜನರು ಕೂಲಾಗಿ ಇದ್ದಾರೆ. ಎಲ್ಲಿಯೂ ಕ್ರಾಂತಿಯ ಕಿಡಿ ಹಾರಲಿಲ್ಲ.

ಭ್ರಷ್ಟಾಚಾರ ನಿರ್ಮೂಲನಕ್ಕೆ ಮೊತ್ತ ಮೊದಲು ಚುನಾವಣೆ ಪದ್ಧತಿಯಲ್ಲಿ ಆಮೂಲಾಗ್ರ ಪರಿವರ್ತನೆಯಾಗಬೇಕು. ಒಂದು ಪಕ್ಷದಿಂದ ಆರಿಸಿ ಹೋದಮೇಲೆ ಮತ್ತೆ ಮನಬಂದಂತೆ ಪಕ್ಷ ಬದಲಿಸುವುದು, ರಾಜೀನಾಮೆ ಇತ್ತು ಜಾಗ ಖಾಲಿ ಮಾಡುವುದು ಸಾಧ್ಯವಾಗಬಾರದು. ಹೀಗೆ ಇನ್ನೂ ಹಲವಾರು ಬದಲಾವಣೆಗಳಾಗಬೇಕು. ಮುಖ್ಯವಾಗಿ ಭ್ರಷ್ಟಾಚಾರಿಗಳಿಗೆ ಮೂರು ತಿಂಗಳೊಳಗೆ ವಿಚಾರಣೆ ನಡೆದು ಕಠಿಣ ಶಿಕ್ಷೆಯಾಗಬೇಕು. ಲಂಚ ತೆಗೆದುಕೊಂಡ ಬಗ್ಗೆ, ಲಂಚದಿಂದ ಅಪಾರ ಸಂಪತ್ತು ಕೂಡಿಟ್ಟ ಬಗ್ಗೆ, ಪ್ರತ್ಯಕ್ಷ ಪ್ರಮಾಣ ಇರುವಾಗ ವಿಚಾರಣೆಗೆ ವಿಳಂಬ ಯಾಕೆ? ತಡೆ ಯಾಕೆ, ಅಪೀಲಿಗೆ ಅವಕಾಶ ಯಾಕೆ? ಇನ್ನು, ಭ್ರಷ್ಟಾಚಾರಿಗಳ ಕುರಿತು ದೂರಿತ್ತವರಿಗೆ ರಕ್ಷಣೆ ಬೇಕು.

**ಎಂ. ವಿ. ಭಟ್**, 'ಶ್ರೀಮಿತ್ತೂರು', ಮೇದರಹಳ್ಳಿ, ಚಿಕ್ಕಬಾಣಾವರ, ಬೆಂಗಳೂರು - ೫೬೦ ೦೯೦

* * *

೧. **ಸರಳ ಜೀವನದ ಪರಿಕಲ್ಪನೆ ಮತ್ತು ಅನುಸರಣೆ:** ಇದನ್ನು ಎರಡು ರೀತಿಯಲ್ಲಿ ಸಾಧಿಸುವ ಪ್ರಯತ್ನ ಮಾಡಬಹುದಾಗಿದೆ. ಶಾಲೆ ಮತ್ತು ಕಾಲೇಜು ಶಿಕ್ಷಣದಿಂದ; ಅದಕ್ಕಾಗಿಯೇ ತರಬೇತಿ ಪಡೆದು ಅಳವಡಿಸಿಕೊಂಡ ಶಿಕ್ಷಕ ಸಮುದಾಯದಿಂದ. ಅಗತ್ಯಾಧಾರಿತ ಸರಳ ಜೀವನ ಜೀವನಕ್ರಮವಾದಾಗ; ವ್ಯಕ್ತಿಯಲ್ಲಿ, ಕ್ರಮೇಣ ಸಮುದಾಯದಲ್ಲಿ ಅದಕ್ಕನುಗುಣವಾದ ಒಂದು 'ವಿಲ್' ರೂಪುಗೊಂಡಿತೆಂದರೆ, ಲೋಕಪಾಲ್ 'ಬಿಲ್' ಆಗ ಅತಿ ಮುಖ್ಯವೆನಿಸುವುದಿಲ್ಲ.

೨. **ಸ್ಥಿರ-ಚರ-ಮಾಸಿಕ ಆದಾಯಗಳಿಗೊಂದು ''ಲಕ್ಷ್ಮಣ ರೇಖೆ'':** ವ್ಯಕ್ತಿ ಹಾಗೂ ಕುಟುಂಬ ಹೊಂದಿರಬಹುದಾದ, ಸ್ಥಿರ-ಚರ-ಮಾಸಿಕ ಆದಾಯಗಳು 'ಲಕ್ಷ್ಮಣ ರೇಖೆ' (ಸಮ್ಮತಾರ್ಹ ಮಿತಿಗೆ) ಒಳಪಟ್ಟಿರಬೇಕು. ಅದನ್ನು ದಾಟಿದ ಅಥವಾ ಅಕ್ರಮ, ಅನಧಿಕೃತ ಎಂದು ಕಂಡುಬರುವ ಯಾವುದನ್ನೇ ಆಗಲಿ ಸರಕಾರ, ನಿರ್ದಾಕ್ಷಿಣ್ಯವಾಗಿ ಮುಟ್ಟುಗೋಲು ಹಾಕಿಕೊಳ್ಳಬೇಕು.

೩. ವೃತ್ತಿಶಿಕ್ಷಣಕ್ಕೆ ಮತ್ತು ಉದ್ಯೋಗಗಳಿಗೆ ಆಯ್ಕೆಮಾಡುವ ಘಟಕಗಳು ಎಷ್ಟು ಪಾರದರ್ಶಕವಾಗಿದ್ದರೆ, ಫಲಾನುಭವಿಗಳು ಅಷ್ಟು ಶ್ರದ್ಧೆ-ಪರಿಶುದ್ಧತೆಗಳಿಂದ ಕರ್ತವ್ಯ ನಿರ್ವಹಿಸುತ್ತಾರೆ. ಆದ್ದರಿಂದ ಈ ಆಯ್ಕೆಮಾಡುವ ಘಟಕಗಳು ಒಳವಿದ್ಯಮಾನಗಳಿಂದ ಮುಕ್ತವಾಗಿರಬೇಕು.

೪. ಇತ್ತೀಚಿನ ದಶಕಗಳ ಎಲ್ಲ ಚುನಾವಣೆಗಳಲ್ಲಿ ಭ್ರಷ್ಟಾಚಾರದ ಬಹುರೂಪ ಯಥೇಚ್ಛವಾಗಿ ಕಂಡುಬರುತ್ತಿರುವ ಕಾರಣ,

ಮತದಾನ ಮಾಡದಿದ್ದರೆ, ನಾಗರಿಕ ಸೌಲಭ್ಯಗಳ ರದ್ದತಿ ಆಗಬೇಕು; ಮನೆ ಮನೆಗೆ ಹೋಗಿ ಮತ ಹಾಕಿ ಎಂದು ಕೇಳುವುದನ್ನು ತಪ್ಪಿಸಬೇಕು; ಸಾರ್ವಜನಿಕವಾಗಿ ವೇದಿಕೆಗಳ ಮೂಲಕ ಮನವಿ ಮಾಡಿಕೊಳ್ಳಲು ಮಾತ್ರ ಅವಕಾಶವಿರಬೇಕು; ಅಧಿಕಾರದಲ್ಲಿದ್ದು ಚುನಾವಣೆಗೆ ಇಳಿಯುವವರು ಪ್ರಚಾರದಿಂದ ದೂರ ಉಳಿಯಬೇಕು. ಅವರು ಮಾಡಿರುವ ಕೆಲಸಗಳೇ ಪ್ರಚಾರ ಸಾಧನಗಳಾಗಬೇಕು.

೫. ಲಂಚ ನೀಡುವವನೂ ಅಪರಾಧಿ ಎಂದಾಗಬೇಕು; ಆಪಾದಿತರನ್ನು ಯಾವ ಪಕ್ಷವೂ ಕಣಕ್ಕಿಳಿಸಬಾರದು; ಕಳಂಕಿತರಾದವರನ್ನು ಪಕ್ಷದಿಂದ ವಜಾ ಮಾಡಬೇಕು; ಅಧಿಕಾರದಲ್ಲಿದ್ದವರು ಕಳಂಕಿತರಾದರೆಂದರೆ ಅಂತಹವರನ್ನು ಆಯ್ಕೆಮಾಡಿದ ಕ್ಷೇತ್ರ, ಒಂದು ಅವಧಿಯವರೆಗೆ ಆ ಪಕ್ಷದವರನ್ನು ದೂರವಿರಿಸತಕ್ಕದ್ದು;

ಬ್ಯಾಂಕುಗಳಿಂದ, ನೋಂದಣಿ ಕಾರ್ಯಾಲಯಗಳಿಂದ ರಹಸ್ಯವಾಗಿ ಅಗತ್ಯ ಮಾಹಿತಿ ಪಡೆದುಕೊಳ್ಳಲು ಸರಕಾರಗಳಿಗೆ ಅವಕಾಶವಿರಬೇಕು; ಎಲ್ಲರನ್ನೂ ಮಾತ್ರವಲ್ಲ ಎಲ್ಲವನ್ನೂ – ಮಠ, ಮಂದಿರ, ಚರ್ಚು, ಮಸೀದಿಗಳನ್ನು ಪರಿಶೀಲನೆಯ ವ್ಯಾಪ್ತಿಗೆ ಒಳಪಡಿಸಬೇಕು.

**ಎಲ್. ನರಸಿಂಹಯ್ಯ ತೊಂಡೋಟಿ**, 'ವಿಜಯ ಗೋಕುಲ', ತುಮಕೂರು - ೫೭೨ ೧೦೨

* * *

## ನಿರ್ಮೂಲನಾ ಕಾರ್ಯ

ಭ್ರಷ್ಟಾಚಾರ ನಿರ್ಮೂಲನಾ ಕಾರ್ಯದಲ್ಲಿ ಆಶಾಭಾವ ಮೂಡಿಸಿರುವ ಜನ ಲೋಕಪಾಲ್ ಮಸೂದೆ ಮತ್ತು ನಾಗರಿಕ ಸಂಹಿತೆಗಳು ಯಾವುದೇ ಲೋಪದೋಷಗಳಿಲ್ಲದೆ ಕಾರ್ಯಾಚರಣೆಯಾಗಬೇಕು. ಜನಲೋಕಪಾಲ್, ಲೋಕಾಯುಕ್ತದಂಥ ಸಂಸ್ಥೆಗಳಿಂದ ಉನ್ನತ ಹುದ್ದೆಗಳಲ್ಲಿರುವಂಥವರನ್ನು ಮಟ್ಟಹಾಕುವುದು ಮೊದಲ ಆದ್ಯತೆಯಾಗಬೇಕು. ನಂತರದಲ್ಲಿ ಸಣ್ಣಪುಟ್ಟ ಸರಕಾರಿ ಕರ್ಮಚಾರಿಗಳು ಈ ಪ್ರಕ್ರಿಯೆಗಳಿಗೆ ಒಳಗಾಗಬೇಕು. ಈ ಮಸೂದೆ ವ್ಯಾಪ್ತಿಗೆ ಕಾರ್ಪೊರೇಟ್ ವಲಯದ ಎಲ್ಲ ವ್ಯವಹಾರಗಳು, ಆಮದು, ರಫ್ತು, ಹೊರಗುತ್ತಿಗೆ, ನೇಮಕ, ಅಮಾನತ್ತು, ಮುಂತಾದುವುಗಳು ಸೇರಬೇಕು. ಧಾರ್ಮಿಕ ಸಂಸ್ಥೆಗಳಾದ ಮಠ, ಮಸೀದಿ, ಬಸದಿ, ವಿಹಾರ ಎನ್ನದೆ ಎಲ್ಲ ಧರ್ಮಗಳ ಧಾರ್ಮಿಕ ದತ್ತಿ ಸಂಸ್ಥೆಗಳು ಕೂಡ ಜನಲೋಕಪಾಲ್ ಕಾಯಿದೆ ವ್ಯಾಪ್ತಿಗೆ ಸೇರಬೇಕು. ಮಾಹಿತಿ ಹಕ್ಕು ಕಾಯಿದೆ ಬ್ಲ್ಯಾಕ್‌ಮೇಲ್‌ಗೆ ಬಳಕೆಯಾಗುತ್ತಿರುವ ಸಂದರ್ಭಗಳು ಇತ್ತೀಚೆಗೆ ಕಂಡುಬರುತ್ತಿವೆ. ಜನ ಲೋಕಪಾಲ್ ಮಸೂದೆಯನ್ನು ಈ ರೀತಿ ದುರ್ಬಳಕೆಯಾಗದಂತೆ ರೂಪಿಸುವುದು ಅತ್ಯಂತ ಮುಖ್ಯ ವಿಷಯವಾಗಿದೆ. ಭ್ರಷ್ಟಾಚಾರ ನಿರ್ಮೂಲನಾ ಕಾರ್ಯದಲ್ಲಿ ಯುವಕರು ಆಸ್ಥೆ ವಹಿಸುತ್ತಿರುವುದು ಸಾಬೀತಾಗಿದೆ. ಇದು ಆಶಾದಾಯಕ ಬೆಳವಣಿಗೆ. ಆದರೆ ಅದೇ ಯುವಕರು ಇಂದು ಕಾರ್ಪೊರೇಟ್ ವಲಯದ ಬಹುರಾಷ್ಟ್ರೀಯ ಕಂಪನಿಗಳ ಉನ್ನತ ಹುದ್ದೆಗೆ ಹಾತೊರೆಯುತ್ತಿದ್ದಾರೆ. ಇಂಥ ಕಂಪನಿಗಳು ರಾಷ್ಟ್ರದ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ದಿವಾಳಿಗೆ ಕಾರಣವಾಗುತ್ತಿವೆ ಎಂಬ ಅಂಶ ಯುವಕರಿಗೆ ಮುಖ್ಯವೆನಿಸುತ್ತಿಲ್ಲ. ಯುವಕರಲ್ಲಿರುವ ಈ ಮನೋಭಾವವನ್ನು ಬದಲಾಯಿಸಲು ಶಿಕ್ಷಣದ ಪಠ್ಯಗಳು ಬದಲಾಗಬೇಕು. ಇಂದಿನ ಕರಿಯರ್ ಗೈಡೆನ್ಸ್‌ನಂಥ ತರಬೇತಿಗಳಲ್ಲಿ ಹಿಂದೆ ಇದ್ದ ಸಾಮಾಜಿಕ ಚಿಂತನೆಗಳು ಮರೆಯಾಗಿಬಿಟ್ಟಿವೆ. ಸ್ವಾಮಿ ವಿವೇಕಾನಂದರು, ಐನ್‌ಸ್ಟೈನ್ ಮುಂತಾದವರ ಹೆಸರಿನಲ್ಲಿ ತೆರೆಯಲ್ಪಡುವ ಈ ಸಂಸ್ಥೆಗಳು ಅವರ ಸಾಮಾಜಿಕ ಸೇವೆಯ ಮಹತ್ವವನ್ನು ಹೇಳಿಕೊಡುವುದರಲ್ಲಿ, ಸೇವಾ ಮನೋಭಾವ ಮೂಡಿಸುವಲ್ಲಿ, ಸೋಲುತ್ತಿವೆ. ಉನ್ನತ ಹುದ್ದೆಯೊಂದರ ಪ್ರವೇಶ ಪಡೆಯುವುದು ಮಾತ್ರ ಇವುಗಳ ಗುರಿಯಾಗಿದೆ. ಇದು ವಿಷಾದನೀಯ ಸಂಗತಿ. ಇಂದು ಸಮಷ್ಟಿ ಪ್ರಜ್ಞೆ, ಸಾಮಾಜಿಕ ಜವಾಬ್ದಾರಿ, ಜನೋಪಯೋಗಿ ವೈಜ್ಞಾನಿಕ ಪ್ರವೃತ್ತಿ ಮಾಯವಾಗಿರುವುದು ಕಂಡುಬರುತ್ತಿದೆ. ಈ ಮೌಲ್ಯಗಳ ಪುನರ್‌ಸ್ಥಾಪನೆಯ ಪ್ರಯತ್ನಗಳು ಭ್ರಷ್ಟಾಚಾರದ ಪ್ರವೃತ್ತಿಯನ್ನು ನಿಯಂತ್ರಿಸಲು ಸಹಾಯಕವಾಗುತ್ತವೆ.

**ಡಿ. ಎಮ್. ನದಾಫ್**, ಅಫಜಲಪುರ

* * *

'ಭ್ರಷ್ಟಾಚಾರ' ಎಂಬ ಪದಕ್ಕೆ ಅನೀತಿ ಅರ್ಥಾತ್ ನೀತಿಗೆ ವಿರುದ್ಧವಾದ, ದಾರಿ ತಪ್ಪಿದ ಅಥವಾ ಹೊರಕ್ಕೆ ಹಾಕಲ್ಪಟ್ಟ ಇತ್ಯಾದಿ ಅರ್ಥಗಳಿವೆ. ಇದು ಗುಣವಾಚಕ ಮತ್ತು ಕ್ರಿಯಾಪದವಾಗಿದ್ದು ಈ ಕೆಟ್ಟ ಗುಣದ ಕ್ರಿಯೆ ಸರ್ವವ್ಯಾಪಿಯಾಗಿ ನಮ್ಮ ಒಟ್ಟು ವ್ಯವಸ್ಥೆಯನ್ನು ಬಹಳಷ್ಟು ಜರ್ಜರಿತಗೊಳಿಸಿದೆ. ಅಂದು ಗೌತಮ ಬುದ್ಧ 'ಸಾವಿಲ್ಲದ ಮನೆಯ ಸಾಸಿವೆ ತಾ' ಎಂದಿದ್ದ. ಹಾಗೇನೇ ಇಂದು 'ಭ್ರಷ್ಟನಲ್ಲದ ವ್ಯಕ್ತಿಯನ್ನು ಆರಿಸಿ ತಾ' ಎನ್ನುವುದೂ ಅಷ್ಟೇ ಸವಾಲಿನ ಕೆಲಸವಾಗಿದೆ!

ನಾವು ಮಾಡಬೇಕಾದ ಮೊದಲ ಕೆಲಸವೆಂದರೆ ಪ್ರತಿಯೊಬ್ಬ ಪ್ರಜೆಯೂ, ''ನಾನು ಭ್ರಷ್ಟ ಕೆಲಸ ಮಾಡುವುದಿಲ್ಲ ಮತ್ತು ಲಂಚ ಪಡೆಯುವುದೂ ಇಲ್ಲ'' ಎಂಬ ದೃಢನಿರ್ಧಾರ ಹೊಂದಬೇಕು. ಮತ್ತು ಅದು ನೈತಿಕ ಬದ್ಧತೆಗಳಲ್ಲೊಂದಾಗಿರಬೇಕು. ವ್ಯಕ್ತಿಗತವಾದ ಈ ಆದರ್ಶದ ಮೂಲಕ ಭ್ರಷ್ಟಾಚಾರ ನಿರ್ಮೂಲನೆಗೆ ನಾಂದಿ ಹಾಕಬಹುದೆನ್ನಿಸುತ್ತದೆ.

ಅಂದರೆ ನಮ್ಮ ಬದುಕಿನಲ್ಲಿ/ಸೇವೆಯಲ್ಲಿ ಯಾವುದು ನ್ಯಾಯಸಮ್ಮತವಾದ್ದು, ಯಾವುದು ನೀತಿಯುತವಾದ್ದು, ಯಾವುದು ಅನೀತಿಯುತವಾದ್ದು, ಎನ್ನುವ ಪರಿಜ್ಞಾನ

# ಭ್ರಷ್ಟಾಚಾರದ ನಿರ್ಮೂಲನಕ್ಕೆ ನಿರ್ದಿಷ್ಟ ಸೂಚನೆಗಳು

ಇರಬೇಕಾಗುತ್ತದೆ. ಮಾತ್ರವಲ್ಲ, ನಮ್ಮ ದೇಶದ ಸಂವಿಧಾನಾತ್ಮಕ ಕಾನೂನು, ನಿಯಮಗಳ ಬಗ್ಗೆ, ಮಾನವೀಯ ಮೌಲ್ಯಗಳ ಬಗ್ಗೆ ಗೌರವ, ಕಾಳಜಿ ಇರಬೇಕು. ಏಕೆಂದರೆ ಇತ್ತೀಚೆಗಂತೂ ಸಂವಿಧಾನದ ಕಟ್ಟುಪಾಡುಗಳು ಒಟ್ಟು ವ್ಯವಸ್ಥೆಯ ಬಹುತೇಕ ಸಂದರ್ಭಗಳಲ್ಲಿ ಅವಜ್ಞೆಗೆ ಗುರಿಯಾಗಿವೆ. ಶ್ರೀಮಂತರಿಗೊಂದು ನ್ಯಾಯ, ಬಡವರಿಗೊಂದು ನ್ಯಾಯ ಎಂಬ ತಾರತಮ್ಯ ಸಾಮಾನ್ಯವಾಗಿದೆ. ಈ ಬಗ್ಗೆ ನಾಗರಿಕರು, ಸಂಘ-ಸಂಸ್ಥೆಗಳು, ಮಾಧ್ಯಮಗಳು ಮತ್ತು ಸರ್ಕಾರ ಎಲ್ಲವೂ ಸೇರಿದಂತೆ ಜನಜಾಗೃತಿ ಮೂಡಿಸುವಲ್ಲಿ ಕಾರ್ಯಪ್ರವೃತ್ತರಾಗಬೇಕಾಗಿದೆ.

**ಚನ್ನಬಸವ ಪುರ್ತುರ್ಕರ,** ಆಫೀಸ್ ಆಫ್ ದಿ ಅಸಿಸ್ಟೆಂಟ್ ಕಮಿಷನರ್ ಆಫ್ ಕಮರ್ಷಿಯಲ್ ಟ್ಯಾಕ್ಸ್, ಎಲ್‌ವಿಓ-೪೮೦, ಕಾನೂನು ಕಾಲೇಜು ಹತ್ತಿರ, ಆಕಾಶವಾಣಿ ಹಿಂಭಾಗ, ಕೆಳಗೋಟೆ, ಚಿತ್ರದುರ್ಗ - ೫೭೭ ೫೦೧

* * *

ವಿಶಾಲವಾದ ಅರ್ಥದಲ್ಲಿ ಭ್ರಷ್ಟಾಚಾರವು ದುರ್ಮಾರ್ಗದ ಎಲ್ಲ ಆಚಾರಗಳನ್ನೂ ಒಳಗೊಳ್ಳುವುದು. ಪ್ರಸ್ತುತ ಅದು ಅಗಾಧ ಪ್ರಮಾಣದಲ್ಲಿ ಬೆಳೆಯುವುದಕ್ಕೆ ಮುಖ್ಯ ಕಾರಣ ಅದು ತಪ್ಪೇ ಅಲ್ಲ ಎಂಬ ಭಾವನೆ. ಕಾರಣ ಅದನ್ನು ಭಾರತೀಯ ಸಮಾಜ ಸಹಜವೆನ್ನುವ ಹಾಗೆ ಒಪ್ಪಿಕೊಂಡಿದೆ. ಅಷ್ಟೇ ಅಲ್ಲ, ಅನ್ಯಾಯ ಮಾರ್ಗವನ್ನು ಅನುಸರಿಸಿಯೂ ಶ್ರೀಮಂತನಾದ ವ್ಯಕ್ತಿಯನ್ನು ಕೇವಲ ಅವನಲ್ಲಿ ಹಣವಿದೆ ಎಂಬ ಕಾರಣಕ್ಕಾಗಿ ಗೌರವಿಸುತ್ತಿದ್ದೇವೆ. ಹಣ ಮಾಡುವುದು ಮುಖ್ಯವಾಗುತ್ತಿದೆಯೇ ಹೊರತು, ಅದನ್ನು ಪಡೆಯಲು ಅನುಸರಿಸುವ ದಾರಿಯಲ್ಲ. ಈ ಆಲೋಚನಾ ಕ್ರಮ ಸಮಾಜದ ಎಲ್ಲರನ್ನೂ ತಪ್ಪು ದಾರಿಗೆ ಎಳೆಯುತ್ತಿದೆಯೇನೊ ಎನಿಸುತ್ತಿದೆ. ಇತ್ತೀಚಿನ ಅಣ್ಣಾ ಹಜಾರೆಯವರ ಭ್ರಷ್ಟಾಚಾರ ವಿರೋಧಿ ಹೋರಾಟಕ್ಕೆ ದೊರೆತ ಸ್ಪಂದನ ಅಭೂತಪೂರ್ವವಾದದ್ದು. ಇದು ಜನರು, ಅದರಲ್ಲೂ ಯುವಜನರು ವ್ಯಾಪಕವಾಗಿರುವ ಭ್ರಷ್ಟಾಚಾರದ ಬಗ್ಗೆ ಎಷ್ಟು ರೋಸಿಹೋಗಿದ್ದಾರೆಂಬುದರ ಸ್ಪಷ್ಟ ಸೂಚನೆಯನ್ನು ನೀಡಿತು. ಇಂಥ ಯುವಜನ ಹೊಸ ಸಮಾಜವನ್ನು ಕಟ್ಟಬಹುದೆಂಬ ಕಾಣ್ಕೆಯನ್ನು ಮೂಡಿಸಿತು. ಈಗ ಬೇಕಾಗಿರುವುದು ಇಂಥವರನ್ನೆಲ್ಲ ಸಂಘಟಿಸಬಲ್ಲ ವ್ಯಕ್ತಿ, ಸಂಸ್ಥೆ. ಭ್ರಷ್ಟಾಚಾರವನ್ನು ಭಿನ್ನ ನೆಲೆಗಳಲ್ಲಿ ಮಟ್ಟಹಾಕುವ ಸಂಘಟನೆಗಳು, ವ್ಯಕ್ತಿಗಳು ಬೇಕು. ಭ್ರಷ್ಟಾಚಾರವನ್ನು ಹೋಗಲಾಡಿಸಲು ಸ್ವಂತ ಇಚ್ಛೆಯಿಂದ ಮುಂದೆಬರುವ ವ್ಯಕ್ತಿಗಳನ್ನು ಸಂಘಟಿಸಿ, ಅವರಿಗೆ ಬೇಕಾದ ತರಬೇತಿ ಹಾಗೂ ಮಾಹಿತಿ ನೀಡಬೇಕು. ಜನಸಂಖ್ಯೆಯ ಶೇಕಡ ಹತ್ತರಷ್ಟು ಜನರನ್ನು ಹೀಗೆ ತಯಾರು ಮಾಡಿದರೂ ಸಾಕು, ವಿಶಾಲವಾದ ಅರ್ಥದಲ್ಲಿರುವ ಭ್ರಷ್ಟಾಚಾರವೂ ಹಿಮ್ಮೆಟ್ಟೀತು. ಹಣವೇ 'ಎಲ್ಲ'ವಾಗುತ್ತಿರುವ ಸಮಾಜದಲ್ಲಿ ಜೀವನ ಮೌಲ್ಯಗಳಿಗೆ ಮತ್ತೆ ಬೆಲೆ ಬಂದೀತು. ಒಬ್ಬ ನಿಷ್ಠಾವಂತ, ಪ್ರಾಮಾಣಿಕ ವ್ಯಕ್ತಿಗೆ ಹಣವಂತನಿಗಿಂತ ಹೆಚ್ಚು ಗೌರವ ಸಿಗುವ ಸನ್ನಿವೇಶ ನಿರ್ಮಾಣವಾದೀತು. ಆಗ ಸಮಾಜದಲ್ಲೂ ಭ್ರಷ್ಟಾಚಾರ ತಾನೇ ತಾನಾಗಿ ಮಾಯವಾಗುವುದು.

**ರಮಾ ಎಸ್. ಹಿರೇಮಠ,** ನಂ. ೨೮೫, ೪ನೇ ಅಡ್ಡರಸ್ತೆ, ಬಿ.ಸಿ.ಸಿ. ಲೇಔಟ್, ವಿಜಯನಗರ, ಬೆಂಗಳೂರು - ೫೬೦ ೦೪೦

* *

(ಅ) ಭ್ರಷ್ಟಾಚಾರ ಮಾನವನ ಇತಿಹಾಸದಷ್ಟೇ ಹಳೆಯದಾದ್ದರಿಂದ ಅದರ ನಿರ್ಮೂಲನ ಸಾಧ್ಯವಿಲ್ಲ, ನಿಯಂತ್ರಣ ಸಾಧ್ಯ ಎಂಬ ಸತ್ಯವನ್ನು ತಾತ್ವಿಕವಾಗಿ ಒಪ್ಪಿಕೊಂಡು ನಿಯಂತ್ರಣಕ್ಕೆ ಮುಂದಾಗುವುದು;

(ಆ) 'ಆನೆ ಕದ್ದರೂ ಕಳ್ಳ, ಅಡಿಕೆ ಕದ್ದರೂ ಕಳ್ಳ', ಎಂಬ ನೀತಿನಿಷ್ಠ ನಿಲುವನ್ನು ಅನುಸರಿಸದೆ ಅತಿ ಭ್ರಷ್ಟರನ್ನು ಹಿಡಿದು ಶಿಕ್ಷಿಸುವಲ್ಲಿ ಹೆಚ್ಚಿನ ಆಸ್ಥೆ ತೋರುವುದು, ಇತರರಿಗೆ ಮಾದರಿಯಾಗುವಂತೆ;

(ಇ) ಭ್ರಷ್ಟಾಚಾರದ ನಿಯಂತ್ರಣದಲ್ಲಿ ಸಿ.ಬಿ.ಐ., ಪೊಲೀಸ್ ಇಲಾಖೆ, ನ್ಯಾಯಾಂಗ ಮತ್ತು ಲೋಕಾಯುಕ್ತ/ಲೋಕಪಾಲ ಮೊದಲಾದ ಸಂಸ್ಥೆಗಳ ಪಾತ್ರ ಹಿರಿದು. ಈ ಸಂಸ್ಥೆಗಳು ಇಂದು ಸಾಕಷ್ಟು ಬಲವಿಲ್ಲದೆ (ಜನ/ಧನ ಇತ್ಯಾದಿ) ಸೊರಗುತ್ತಿದ್ದು ಅವುಗಳನ್ನು ಮೊದಲು ಸಜ್ಜುಗೊಳಿಸುವುದು;

(ಈ) ಮೇಲೆ ಹೇಳಿದ ಸಂಸ್ಥೆಗಳಲ್ಲೇ ಇರುವ ಭ್ರಷ್ಟಾಚಾರವನ್ನು ಮೊದಲು ತೊಲಗಿಸಿ ಅಲ್ಲಿ ದಕ್ಷ/ಪ್ರಾಮಾಣಿಕ ಮತ್ತು ಭ್ರಷ್ಟರಲ್ಲವೆಂದು ಸಾಬೀತಾದವರನ್ನು ನೇಮಿಸುವಂತಾಗಬೇಕು. ಇದಕ್ಕೆ ಸೂಕ್ತ ನೇಮಕಾತಿ ಮತ್ತು ನಿಯತ್ತಿನ ವ್ಯವಸ್ಥೆಯನ್ನು ಮೊದಲು ರೂಪಿಸುವುದು;

(ಉ) ಅಧಿಕಾರದ ಕೇಂದ್ರಗಳಾದ ವಿಧಾನಸೌಧ, ವಿಕಾಸ ಸೌಧ, ಜಿಲ್ಲಾಧಿಕಾರಿ ಕಛೇರಿ, ಕಂದಾಯ ಇಲಾಖೆಯ ಕಛೇರಿಗಳು, ವಿವಿಧ ಕರ ವಸೂಲಾತಿ ಅಧಿಕಾರಿಗಳ ಕಛೇರಿಗಳು, ನೋಂದಣಿ ಇಲಾಖೆ, ಕಂದಾಯ ಇಲಾಖೆ ಮೊದಲಾದ ಇಲಾಖೆಗಳಲ್ಲಿ ಭ್ರಷ್ಟಾಚಾರವನ್ನು ತಪ್ಪಿಸಲು ಸೂಕ್ತ ದೂರು ನಿವಾರಣಾ ವ್ಯವಸ್ಥೆಯನ್ನು ರೂಪಿಸುವುದಲ್ಲದೆ ಇಲ್ಲಿ ಕೆಲಸ ಮಾಡುವ ಸಿಬ್ಬಂದಿ/ಅಧಿಕಾರಿಗಳ ಮೇಲೆ ಹೆಚ್ಚಿನ ನಿಗಾ ಇರಿಸುವುದು;

(ಊ) ಭ್ರಷ್ಟ ಅಧಿಕಾರಿ/ರಾಜಕಾರಣಿ/ಉದ್ಯೋಗಪತಿಗಳ ಆಸ್ತಿ-ಪಾಸ್ತಿಗಳನ್ನು ಮುಟ್ಟುಗೋಲು ಹಾಕಿ ಏಲಂ ಮಾಡಿ ಸರಕಾರದ ಬೊಕ್ಕಸಕ್ಕೆ ಸೇರಿಸಲು ಸೂಕ್ತ ಕಾನೂನು ವ್ಯವಸ್ಥೆಯನ್ನು ರೂಪಿಸಿ ತ್ವರಿತವಾಗಿ ಅನುಷ್ಠಾನಕ್ಕೆ ತರುವುದು.

(ಋ) ಭ್ರಷ್ಟಾಚಾರದ ಹಣವು ಹೆಚ್ಚಾಗಿ ಚುನಾವಣೆಗಳಲ್ಲಿ ಬಳಕೆಯಾಗುತ್ತಿದ್ದು, ಇದನ್ನು ತಪ್ಪಿಸಲು ಚುನಾವಣಾ ಕಾಯಿದೆಯಲ್ಲಿ ಸೂಕ್ತ ಬದಲಾವಣೆಗಳನ್ನು ತರುವುದು.

**ಕೆ. ಶಶಿಧರ ಶೆಟ್ಟಿ,** ಸುಗಮ ರೆಸಿಡೆನ್ಸಿ, ಬ್ರಹ್ಮಾವರ - ೫೭೬ ೨೧೩

* * *

* ಪ್ರಜೆಗಳಿಗೆ ರಾಜಕೀಯ, ಆರ್ಥಿಕ ಮತ್ತು ನೈತಿಕ ಶಿಕ್ಷಣ ಆಧಾರಸ್ತಂಭವಾಗಬೇಕು.

* ಚುನಾವಣೆಗೆ ಅಭ್ಯರ್ಥಿಯಾಗಿ ನಿಲ್ಲುವವರು ತಮ್ಮ ಸ್ಥಿರ-ಚರ ಆಸ್ತಿಯನ್ನು ಚುನಾವಣೆಗೆ ಮೊದಲೇ ಘೋಷಿಸಬೇಕು. ನಂತರ ತನಿಖಾ ದಳದ ಮೂಲಕ ಪರಾಮರ್ಶಿಸಬೇಕು. ತಪ್ಪು ಮಾಹಿತಿ ಕೊಟ್ಟಿದ್ದರೆ ಚುನಾವಣೆಗೆ ನಿಲ್ಲಲು ಅವಕಾಶ ಕೊಡಬಾರದು.

* ಗ್ರಾಮ ಪಂಚಾಯಿತಿ ಮಟ್ಟದಿಂದ ರಾಷ್ಟ್ರಮಟ್ಟದ ಎಲ್ಲಾ ರೀತಿಯ ಪ್ರಜಾ ಸೇವಕರು, ಅಂದರೆ, ಗ್ರಾಮ ಪಂಚಾಯಿತಿ, ಜಿಲ್ಲಾ ಪಂಚಾಯಿತಿ, ತಾಲ್ಲೂಕು ಪಂಚಾಯಿತಿ ಸದಸ್ಯರುಗಳು ಹಾಗೂ ಎಂ.ಎಲ್.ಎ., ಎಂ.ಎಲ್.ಸಿ, ಎಂ.ಪಿ.ಗಳು, ರಾಜ್ಯದ ಮತ್ತು ರಾಷ್ಟ್ರದ ಮಂತ್ರಿಗಳು ಕಡ್ಡಾಯವಾಗಿ ತಮ್ಮಲ್ಲಿರುವ ಸಂಪತ್ತನ್ನು ಘೋಷಿಸಬೇಕು. ಇವು ಮಾಧ್ಯಮಗಳ ಮೂಲಕ ಪ್ರಜೆಗಳಿಗೆ ಗೊತ್ತಾಗಬೇಕು.

* ಪ್ರತಿಯೊಂದು ರಾಜ್ಯದಲ್ಲೂ ಕಡ್ಡಾಯವಾಗಿ ಸ್ವತಂತ್ರ ಲೋಕಾಯುಕ್ತ ಇರಬೇಕು. ಲೋಕಾಯುಕ್ತರೂ ಸಹ ಆಸ್ತಿ ಘೋಷಣೆ ಮಾಡಬೇಕು.

* ಸರ್ಕಾರಿ ಸೇವೆಗೆ ಸೇರುವವರೆಲ್ಲರೂ ಕಡ್ಡಾಯವಾಗಿ ಆಸ್ತಿ-ವಿವರ ಕೊಡಬೇಕು. ಸೇವೆಗೆ ಬರುವ ಮೊದಲೇ ತನಿಖೆ ಮಾಡಿ, ಸರಿಯಾಗಿದ್ದರೆ ಮಾತ್ರ ಸೇವೆಗೆ ಅವಕಾಶ ಕೊಡಬೇಕು. ಇಲ್ಲದಿದ್ದರೆ ''ಸುಳ್ಳು ಮಾಹಿತಿ'' ನೀಡಿದ ಆಪಾದನೆಯ ಮೇಲೆ ಆತನ ಮೇಲೆ ಕ್ರಮ ತೆಗೆದುಕೊಳ್ಳಬೇಕು. ದಂಡ ಹಾಕುವುದು, ಜೈಲಿನಲ್ಲಿಡುವುದು, ಅವನ ಜೀವಮಾನವಿಡೀ ಸರ್ಕಾರದ ಸೇವೆ ನಿರಾಕರಿಸುವುದು.

* ಪ್ರತಿ ವರ್ಷ ನೌಕರರ ಆಸ್ತಿ-ಮಾಹಿತಿಯನ್ನು ತನಿಖೆ ಮಾಡುವುದು. ತಪ್ಪು ಮಾಹಿತಿ ಇದ್ದರೆ ಕೆಲಸದಿಂದ ತೆಗೆಯುವುದು.

* ವ್ಯಾಪಾರಿಗಳು ರಾಮನ ಲೆಕ್ಕ-ಕೃಷ್ಣನ ಲೆಕ್ಕ ಇಡುತ್ತಾರೆ. ಇದಕ್ಕೆ ಅವಕಾಶ ಕೊಡಬಾರದು. ನಿಷ್ಪಕ್ಷಪಾತ ತನಿಖೆಯಿಂದ ಸರಿಪಡಿಸಬೇಕು. ಕೃಷ್ಣನ ಲೆಕ್ಕದವರಿಗೆ ಉಗ್ರ ಶಿಕ್ಷೆಯಾಗಬೇಕು.

* ಭ್ರಷ್ಟಾಚಾರ ಪ್ರಾರಂಭವಾಗುವುದೇ ಸಾರ್ವಜನಿಕ ಚುನಾವಣೆಯಲ್ಲಿ, ಪ್ರಚಾರದ ಖರ್ಚನ್ನು ಸರ್ಕಾರ ವಹಿಸಿಕೊಳ್ಳಬೇಕು. ಮಾಧ್ಯಮಗಳ ಮೂಲಕ ಮಾತ್ರ ಪ್ರಚಾರ ಮಾಡಬೇಕು. ಮನೆಮನೆಗೆ ಭೇಟಿ ನೀಡುವುದನ್ನು ನಿಷೇಧಿಸಬೇಕು.

**ಎಸ್. ಸಿ. ರಂಗನಾಥ್,** 'ಮಾತೃಶ್ರೀ ನಿಲಯ', ೯/೭, ೩ನೇ 'ಡಿ' ಮುಖ್ಯರಸ್ತೆ, ೯ನೇ ಕ್ರಾಸ್, ಸಾರಕ್ಕಿ, ೧ನೇ ಹಂತ, ಜೆ. ಪಿ. ನಗರ, ಬೆಂಗಳೂರು - ೫೬೦ ೦೭೮

ಡಾ|| ಬಸವರಾಜ ಸಾದರ

# ಪ್ರಗತಿಶೀಲ ಸಾಹಿತ್ಯ ಚಳುವಳಿ – ೭೫ ವರ್ಷ

ಪ್ರಸಿದ್ಧ ಇಂಗ್ಲಿಷ್ ಬರಹಗಾರ ಈ. ಎಂ. ಫಾರ್‌ಸ್ಟರ್ ಅವರ ಅಧ್ಯಕ್ಷತೆಯಲ್ಲಿ ಸ್ಥಾಪನೆಯಾದ 'ಪ್ರಗತಿಶೀಲ ಲೇಖಕರ ಸಂಘ' ೧೯೩೫ರಲ್ಲಿ ಪ್ಯಾರಿಸ್‌ನಲ್ಲಿ ಅಸ್ತಿತ್ವ ಪಡೆಯಿತು. ಸಜ್ಜಾದ್ ಜಾಹೀರ್, ಮುಲ್ಕರಾಜ್ ಆನಂದ್, ಕೆ. ಎ. ಅಬ್ಬಾಸ್ ಮೊದಲಾದವರು ಅದನ್ನು ಭಾರತಕ್ಕೂ ತಂದರು. ೧೯೩೬ರಲ್ಲಿ ಪ್ರೇಮಚಂದರ ಅಧ್ಯಕ್ಷತೆಯಲ್ಲಿ ಭಾರತೀಯ ಪ್ರಗತಿಶೀಲ ಲೇಖಕರ ಪ್ರಥಮ ಅಧಿವೇಶನ ಲಕ್ನೋದಲ್ಲಿ ಜರುಗಿತು. ಅನಂತರ ಪ್ರೇಮಚಂದ್, ರವೀಂದ್ರನಾಥ ಟ್ಯಾಗೋರರಂಥ ಪ್ರಸಿದ್ಧ ಬರಹಗಾರರ ಅಧ್ಯಕ್ಷತೆಯಲ್ಲಿ ಮೂರು ಮಹಾಸಮ್ಮೇಳನಗಳು ನಡೆದವಾದರೂ ಅವು ನಿರೀಕ್ಷಿತ ಯಶಸ್ಸನ್ನು ಕಾಣಲಿಲ್ಲ. ಬಹಳಷ್ಟು ಜನರು ಆ ಸಮ್ಮೇಳನಗಳನ್ನು ಕಮ್ಯುನಿಸ್ಟ್ ಸಮ್ಮೇಳನಗಳೆಂದೂ, ಪ್ರಗತಿಶೀಲ ಲೇಖಕರನ್ನು ಕಮ್ಯುನಿಸ್ಟ್ ತತ್ವದ ಪ್ರಚಾರಕರೆಂದೂ ಭಾವಿಸಿದ್ದರು. ಅವರಿಗೆ ಭಾರತೀಯತೆಯ ಪರಿಚಯವಿಲ್ಲವೆಂದೂ ಟೀಕಿಸಿದ್ದರು. ೧೯೩೯ರ ಹೊತ್ತಿಗೆ ಪರಿಸ್ಥಿತಿ ತುಸು ಬದಲಾಯಿತು. ಇದಕ್ಕೆ ಬಹುಮುಖ್ಯ ಕಾರಣವೆಂದರೆ ೧೯೩೯ರಲ್ಲಿ ಆರಂಭವಾದ ಎರಡನೆಯ ಮಹಾಯುದ್ಧ ಹಾಗೂ ಗಾಂಧೀಜಿಯವರ ನೇತೃತ್ವದಲ್ಲಿ ಬ್ರಿಟಿಷರ ವಿರುದ್ಧ ನಡೆಯುತ್ತಿದ್ದ ರಾಷ್ಟ್ರೀಯ ಚಳುವಳಿಗಳು. ಬ್ರಿಟಿಷರ ದಬ್ಬಾಳಿಕೆ ಹಾಗೂ ಯುದ್ಧದಿಂದ ಸಂತ್ರಸ್ತರಾದ ಜನರ ಹಾಹಾಕಾರ, ಕೂಳಿನ ಕೂಗು, ಬಂಡವಾಳಶಾಹಿಗಳ ಶೋಷಣೆ, ಬೆಲೆಯೇರಿಕೆ – ಎಲ್ಲ ಒಂದಾಗಿ ಜನತೆಯಲ್ಲಿ ಕ್ರಾಂತಿಗಾಗಿ ಹವಣಿಸುವ ಮನೋಭಾವ ಸಹಜವಾಗಿಯೇ ಮೂಡಿತ್ತು. ಇಂಥ ಸಮಯದಲ್ಲಿ ಜನತೆಯನ್ನು ಸಾಂಘಿಕವಾಗಿ ಜಾಗೃತಗೊಳಿಸುವ ಅಗತ್ಯವಿತ್ತು. ಪರಿಸ್ಥಿತಿಯನ್ನು ಅರಿತ ಪ್ರಗತಿಶೀಲರು ೧೯೪೫ರ ಮೇ ತಿಂಗಳ ೨೨, ೨೩, ೨೪ರಂದು ಮುಂಬಯಿಯಲ್ಲಿ ಅಖಿಲಭಾರತ ಪ್ರಗತಿಶೀಲ ಲೇಖಕರ ನಾಲ್ಕನೆಯ ಸಮ್ಮೇಳನವನ್ನು ಕರೆದರು. ಈ ಸಮ್ಮೇಳನ ಬೃಹತ್ಪ್ರಮಾಣದಲ್ಲಿ ನಡೆಯಿತಲ್ಲದೆ ಅಖಿಲಭಾರತ ಮಟ್ಟದಲ್ಲಿ ಪ್ರಗತಿಶೀಲ ಲೇಖಕರು ಒಂದು ನಿರ್ದಿಷ್ಟ ಸಾಂಘಿಕ ಅಸ್ತಿತ್ವ ಪಡೆಯುವಲ್ಲಿ ಸಹಕಾರಿಯೂ ಆಯಿತು.



ಅ.ನ.ಕೃ.



ನಿರಂಜನ

ಮುಂಬಯಿಯ ಈ ಸಮ್ಮೇಳನ ಭಾರತದ ಪ್ರತಿಯೊಂದು ಪ್ರಾಂತದ ಸಾಹಿತಿಗಳ, ವಿಚಾರವಾದಿಗಳ, ಚಿಂತಕರ ಹಾಗೂ ಜನತೆಯ ಮೇಲೆ ವಿಶೇಷವಾದ ಪರಿಣಾಮ ಬೀರಿತು. ದೇಶವು ಅಂದು ಎದುರಿಸುತ್ತಿದ್ದ ಸಮಸ್ಯೆಗಳನ್ನು ಎತ್ತಿತೋರಿಸಿದ ಈ ಸಮ್ಮೇಳನ, ಆ ಸಮಸ್ಯೆಗಳೆದುರು ಸಾಹಿತಿಯಾದವನು ಮಾಡಬೇಕಾದ ಕರ್ತವ್ಯಗಳೇನೆಂಬುದನ್ನು ಅರುಹಿಕೊಟ್ಟಿತು. ಅದೂ ಅಲ್ಲದೆ 'ಪ್ರಗತಿಶೀಲ ಲೇಖಕರ ಸಂಘ' ಒಂದು ವ್ಯವಸ್ಥಿತ ರೀತಿಯಲ್ಲಿ ಕಾರ್ಯ ನಿರ್ವಹಿಸಲು ಅಲ್ಲೇ ಒಂದು ಕಾರ್ಯಕಾರಿ ಸಮಿತಿಯನ್ನೂ ರಚಿಸಿಕೊಂಡಿತು. ಸಜ್ಜಾದ್ ಜಾಹೀರ್ ಅವರ ಕಾರ್ಯದರ್ಶಿತ್ವದಲ್ಲಿ ರಚಿತವಾದ ಈ ಕಾರ್ಯಕಾರಿ ಸಮಿತಿಗೆ ಭಾರತದ ಪ್ರತಿಯೊಂದು ಪ್ರಾಂತಗಳಿಂದಲೂ ಸದಸ್ಯರು ನೇಮಕವಾದರು. ಕರ್ನಾಟಕದಿಂದ ವಿ. ಎಂ. ಇನಾಂದಾರ್ ಹಾಗೂ ಕೃಷ್ಣಕುಮಾರ ಕಲ್ಲೂರ ಅವರು ಕಾರ್ಯದರ್ಶಿಗಳಾಗಿ, ಪ್ರೊ|| ಜಾಗಿರದಾರ್ ಅವರು ಸದಸ್ಯರಾಗಿ ಆಯ್ಕೆಯಾದರು.

**ಕರ್ನಾಟಕದಲ್ಲಿ**

ಮುಂಬಯಿ ಸಮ್ಮೇಳನದ ನಂತರ, ಭಾರತದಲ್ಲಿ ಪ್ರಾಂತೀಯ ಮಟ್ಟದ ಪ್ರಗತಿಶೀಲ ಬರಹಗಾರರ ಸಂಘಗಳು ಅಸ್ತಿತ್ವಕ್ಕೆ ಬರತೊಡಗಿದವು. ೧೯೪೫ರ ಡಿಸೆಂಬರ್‌ನಲ್ಲಿ 'ಕರ್ನಾಟಕ ಪ್ರಗತಿಶೀಲ ಲೇಖಕರ ಸಂಘ' ಸ್ಥಾಪನೆಯಾಯಿತು. ವಿ. ಬಿ. ಬಳ್ಳಾರಿ ಎನ್ನುವವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯೊಂದರಲ್ಲಿ ಅ. ನ. ಕೃಷ್ಣರಾಯರು 'ಕರ್ನಾಟಕ ಪ್ರಗತಿಶೀಲ ಲೇಖಕರ ಸಂಘ'ದ ಅಧ್ಯಕ್ಷರಾಗಿ ಚುನಾಯಿತರಾದರು. ನಾಡಿಗೇರ ಕೃಷ್ಣರಾಯ ಮತ್ತು ಅನಂತ ಪದ್ಮನಾಭ ಸೋಗಾಲ್ ಅವರು ಕಾರ್ಯದರ್ಶಿಗಳಾಗಿ ಆಯ್ಕೆಯಾದರು. ಹೀಗೆ ಸಾಂಘಿಕ ಅಸ್ತಿತ್ವ ಪಡೆದ 'ಕರ್ನಾಟಕ ಪ್ರಗತಿಶೀಲ ಲೇಖಕರ ಸಂಘ'ವು ಅ.ನ.ಕೃ. ಅವರ ನೇತೃತ್ವದಲ್ಲಿ ತಂಡ ಕಟ್ಟಿಕೊಂಡು ಕನ್ನಡ ನಾಡಿನಲ್ಲೆಲ್ಲ ಸಂಚರಿಸಿ, ಸಭೆ, ಸಮಾರಂಭ, ವಿಚಾರಗೋಷ್ಠಿಗಳ ಮುಖಾಂತರ ಪ್ರಗತಿಶೀಲ ವಿಚಾರಗಳ ಪ್ರಚಾರ ಮಾಡತೊಡಗಿತು. ಸಾಹಿತ್ಯ ಕ್ಷೇತ್ರದಲ್ಲಿ ಹೊಸದಾಗಿ ಬೀಸಿದ ಹಾಗೂ ತುಂಬ ಆಕರ್ಷಕವಾಗಿ ಕಂಡ ಪ್ರಗತಿಶೀಲ ಗಾಳಿಯನ್ನು ಕುತೂಹಲದಿಂದ ಸ್ವಾಗತಿಸಿದ ಹಲವಾರು ಲೇಖಕರು 'ಪ್ರಗತಿಶೀಲ ಲೇಖಕರ ಸಂಘ'ದ ಸದಸ್ಯರಾದರು. ತುಸು ರಭಸದಿಂದಲೇ ಬೀಸಿದ ಈ ಗಾಳಿ ಕನ್ನಡದ

೧೯೩೬ರಲ್ಲಿ ಆರಂಭವಾದ ಪ್ರಗತಿಶೀಲ ಚಳುವಳಿಗೀಗ ೭೫ ವರ್ಷ. ಪ್ರಗತಿಶೀಲವಷ್ಟೇ ಅಲ್ಲ; ಯಾವುದೇ ಚಳವಳಿಗಳ ಕುರುಹೇ ಇಲ್ಲದ ಪ್ರಸ್ತುತ ಸಾಹಿತ್ಯಕ ಸಂದರ್ಭದಲ್ಲಿ ಪ್ರಗತಿಶೀಲತೆಯ ಆಯಾಮಗಳು, ಗೊತ್ತು-ಗುರಿಗಳು ಮತ್ತೆ ಚಾಲ್ತಿಯಲ್ಲಿ ಬರಲು ಸಾಧ್ಯವೇ, ಎಂಬ ಕುತೂಹಲಕರ ಪ್ರಶ್ನೆಗೆ ಉತ್ತರ ಕಂಡುಕೊಳ್ಳಬೇಕಿದೆ.

ಹಲವಾರು ಲೇಖಕರ ಮೇಲೆ ವಿಶೇಷ ಪ್ರಭಾವ ಬೀರಿತು. ಸಂಘದ ಸದಸ್ಯರಾಗ ದಿದ್ದವರೂ ಪ್ರಗತಿಶೀಲ ಧೋರಣೆಯಲ್ಲಿ ಬರೆಯತೊಡಗಿದರು. ಇಂಥವರಲ್ಲಿ ಗಮನಾರ್ಹರಾದವರೆಂದರೆ ಬಸವರಾಜ ಕಟ್ಟೀಮನಿ, ನಿರಂಜನ, ಅರ್ಚಿಕ ವೆಂಕಟೇಶ, ಚದುರಂಗ, ಶ್ರೀರಂಗ.

ಪ್ರಬಲ ರಾಷ್ಟ್ರಗಳ ತೀಟೆಯಿಂದಾಗಿ ೧೯೩೯ರಲ್ಲಿ ಆರಂಭವಾದ ಎರಡನೆಯ ಜಾಗತಿಕ ಮಹಾಯುದ್ಧ ಭಾರತೀಯರ ಎದೆಯನ್ನೇ ನಡುಗಿಸಿತು. ೧೯೧೪-೧೯೧೮ರಲ್ಲಿ ನಡೆದ ಮೊದಲ ಮಹಾಯುದ್ಧ ಭಾರತಕ್ಕೆ ಅಷ್ಟೇನೂ ಬಿಸಿ ತಟ್ಟಿಸಿರಲಿಲ್ಲ. ಆದರೆ ಎರಡನೆಯ ಮಹಾಯುದ್ಧ ಮಾತ್ರ ತನ್ನ ಕ್ರೂರ ಹಸ್ತವನ್ನು ಭಾರತದ ಮೇಲೆಯೂ ಚಾಚಿತು. ''ಯುದ್ಧದ ಸೆಕೆ ಬಂಗಾಳ, ವಿಜಾಪುರ, ಕೇರಳಗಳ ಮೇಲೆ ಪಸರಿಸಿ ಲಕ್ಷಾಂತರ ಜನ ಸಾವು-ನೋವಿಗೆ ತುತ್ತಾಗಿದ್ದಾರೆ. ದೇಶಾದ್ಯಂತವೂ ಅರೆಹೊಟ್ಟೆ, ಕೂಳಿನ ಕೂಗಾಟ, ಹಣದ ಬೆಲೆ ಇಳಿದುಹೋದುದರ ಅನಾಹುತಗಳಿಂದ ಸಾಮಾನ್ಯ ಜನತೆ ಕಂಗೆಟ್ಟು ಕುಗ್ಗಿಹೋಗಿದೆ, ಜನಾಂಗವೇ ಅಳಿದು ಹೋಗುವ ಪರಿಸ್ಥಿತಿ ಬಂದಿದೆ. ಎಲ್ಲಿ ನೋಡಿದರೂ ನಿಸ್ತೇಜ ಮುಖಗಳು, ಈ ರಕ್ತಶೋಷಣೆಯಿಂದ ಬಲಿತು ಬೆಳೆದ ಹಲವು ಮದಾಂಧ ವ್ಯಾಪಾರಸ್ಥರ, ಬಂಡವಾಳಿಗರ ಸುಲಿಗೆಯ ನ್ಯಾಯವೇ ಇಂದಿನ ವೇದ.'' ಇದು ಯುದ್ಧದ ಪರಿಣಾಮದಿಂದುಂಟಾದ ಅಂದಿನ ಸ್ಥಿತಿಗತಿ. ಇಂಥ ಭಾರತದ ಜರ್ಜರಿತ ಸ್ಥಿತಿ ಪ್ರಗತಿಶೀಲರನ್ನು ಕೆಣಕದೇ ಇರಲಿಲ್ಲ. ಈ ಎಲ್ಲ ವಿಷಮತೆಗಳಿಗೂ ಸ್ವಾತಂತ್ರ್ಯ ಸಂಪಾದನೆಯೊಂದೇ ಯೋಗ್ಯ ಮದ್ದು ಎಂಬ ಭಾವನೆ ಆಗ ಅವರಲ್ಲಿ ಮೂಡಿದ್ದು ಸಹಜ.

**Statement about ownership and other particulars about newspaper**

FORM IV

| | | |
|---|---|---|
| 1. | Place of publication | : Bangalore |
| 2. | Periodicity of its publication | : Monthly |
| 3. | Printer's Name | : R. S. Rajaram |
| | Nationality | : Indian |
| | Address | : Navakarnataka Publications (P) Ltd. Embassy Centre, Crescent Road P. B. No. 5159, Bangalore - 560 001 |
| 4. | Publisher's Name | : R. S. Rajaram |
| | Nationality | : Indian |
| | Address | : Navakarnataka Publications (P) Ltd. Embassy Centre, Crescent Road P. B. No. 5159, Bangalore - 560 001 |
| 5. | Editor's Name | : G. Ramakrishna |
| | Nationality | : Indian |
| | Address | : Navakarnataka Publications (P) Ltd. Embassy Centre, Crescent Road P. B. No. 5159, Bangalore - 560 001 |
| 6. | Name and address of individuals who own the newspaper and partners and shareholders holding more than one percent of the total capital | : Navakarnataka Publications (P) Ltd., Embassy Centre, Crescent Road P. B. No. 5159 Bangalore - 560 001 (Sole Proprietors) |

I, R. S. Rajaram, hereby declare that the particulars given above are true to the best of my knowledge and belief.

**Sd/-**
**R. S. Rajaram**
**Publisher**

**Date : 28-2-2012**

೧೯೪೭ರಲ್ಲಿ ದೇಶ ಸ್ವತಂತ್ರವಾಯಿತು. ಭಾರತದ ಬಹುಮುಖ್ಯವಾದ ಒಂದು ಸಮಸ್ಯೆ ಬಗೆಹರಿಯಿತು. ಆದರೆ ಪರದಾಸ್ಯದಿಂದ ಮುಕ್ತವಾದ ಮಾತ್ರಕ್ಕೆ ಇಲ್ಲಿಯ ಸಮಸ್ಯೆಗಳೆಲ್ಲ ಬಗೆಹರಿಯಲಿಲ್ಲ. ಮುಖ್ಯವಾಗಿ ಸ್ವಾತಂತ್ರ್ಯ ಬಂದನಂತರ, ಮೊದಲಿದ್ದ ರಾಷ್ಟ್ರೀಯತೆಯ ಕಲ್ಪನೆ ಕ್ರಮೇಣ ಮರೆತುಹೋಗಿ ಆದರ ಜಾಗದಲ್ಲಿ ಅಧಿಕಾರಕ್ಕಾಗಿ ಪೈಪೋಟಿ ನಡೆಸುವ ರಾಜಕೀಯ ಕಿತ್ತಾಟ ಹೆಚ್ಚಾಗತೊಡಗಿತು. ಇಂಥ ಕಿತ್ತಾಟದಲ್ಲಿ ಅಧಿಕಾರಕ್ಕೆ ಹಪಹಪಿಸಿದವರು ದೇಶದ ಹಾಗೂ ದೇಶದ ಜನತೆಯ ಬಹುಮುಖ್ಯ ಸಮಸ್ಯೆಗಳತ್ತ ಗಮನ ಹರಿಸಲಿಲ್ಲ, ಇದರ ಸದುಪಯೋಗ ಪಡೆದುಕೊಂಡು ಇಲ್ಲಿಯ ಶ್ರೀಮಂತರು, ಜಮೀನುದಾರರು ರೈತ-ಕಾರ್ಮಿಕ-ಕೂಲಿಕಾರರನ್ನು ಶೋಷಿಸ ತೊಡಗಿದರು. ಅರಾಜಕತೆಯ ಪರಿಣಾಮವಾಗಿ ಉಂಟಾದ ಈ ಸ್ಥಿತಿಯನ್ನು ಪ್ರಗತಿಶೀಲರು ಗಂಭೀರವಾಗಿಯೇ ತೆಗೆದುಕೊಂಡರು. ಸಾಹಿತಿಗಳು ರಾಜಕೀಯದಲ್ಲಿ ಭಾಗವಹಿಸ ಬಾರದೆಂಬ ಅತಾರ್ಕಿಕ ನೀತಿಯನ್ನು ಮುರಿದುಹಾಕಿದ ಅವರು ಪ್ರತ್ಯಕ್ಷವಲ್ಲದಿದ್ದರೂ ಪರೋಕ್ಷವಾಗಿ ರಾಜಕೀಯ ಕ್ಷೇತ್ರವನ್ನು ತಮ್ಮ ಅಳವಿಗೆ ತೆಗೆದುಕೊಂಡರು. ಸಹಜ ವಾಗಿಯೇ ಕೆಲವು ಪ್ರಗತಿಶೀಲರ ಇಂಥ ರಾಜಕೀಯ ಪ್ರಜ್ಞೆ ಕಮ್ಯುನಿಸಂನಿಂದ ಪ್ರೇರಿತವಾಗಿತ್ತು. ಕನ್ನಡದಲ್ಲಿ ನಿರಂಜನ ಹಾಗೂ ಕಟ್ಟೀಮನಿಯವರಲ್ಲಿ ಇದನ್ನು ಕಾಣಬಹುದಾಗಿದೆ.

ಇದೆಲ್ಲದರ ಪರಿಣಾಮವಾಗಿ ಹಾಗೂ ಭಾರತವನ್ನು ಗಟ್ಟಿಯಾಗಿ ಅಂಟಿಕೊಂಡು ಬಂದ ಮೂಲಭೂತವಾದಿತ್ವದ ಕಟ್ಟಳೆಗಳಿಂದಾಗಿ ವರ್ಗಭೇದ, ವರ್ಣಭೇದ ಹಾಗೂ ಹೆಣ್ಣು- ಗಂಡೆಂಬ ತರ-ತಮದ ಲಿಂಗಭೇದಗಳು ಎಲ್ಲೆಲ್ಲೂ ಮೆರೆಯುತ್ತಿದ್ದವು. ಈ ಭೇದತ್ರಯಗಳಲ್ಲಿ ಸಬಲರು ಅಬಲರನ್ನು ಶೋಷಿಸುತ್ತ ಸಾಗಿದ್ದರು. ಭಾರತೀಯ ಸಮಾಜಕ್ಕಂಟಿದ್ದ ಈ ಬಗೆಯ ರೋಗಗಳು ಪ್ರಗತಿಶೀಲರ ಸಾಮಾಜಿಕ ಕಾಳಜಿಯನ್ನು ಹೆಚ್ಚು ಜಾಗೃತಗೊಳಿಸಿದವು. ಇವುಗಳಲ್ಲಿ ಎದ್ದು ಕಂಡುಬಂದ ಸಾಮಾಜಿಕ ಸಮಸ್ಯೆಗಳು ಹಲವಾರು. ಮುಖ್ಯವಾದವುಗಳೆಂದರೆ, ಜಾತಿ ವ್ಯವಸ್ಥೆ ಹಾಗೂ ಅದರ ಪರಿಣಾಮವಾಗಿ ಹುಟ್ಟಿದ ಅಸ್ಪೃಶ್ಯತೆ. ಸಮಾಜದ ಜನತೆಯ ನೈತಿಕ ಮುನ್ನಡೆಗಾಗಿ ಪ್ರಯತ್ನಿಸಬೇಕಾದ ಧರ್ಮಗಳು ಹಾಗೂ ಧರ್ಮಾವಲಂಬಿ ಮಠ-ಮಾನ್ಯಗಳು ಸ್ಥಾಪಿತ ವ್ಯವಸ್ಥೆಯ ಪ್ರತೀಕಗಳಾಗುತ್ತ ಸಾಗಿ ಅವೂ ಮತೀಯ ಹೊಂಡಗಳಾದದ್ದು ಇಲ್ಲಿನ ಮತ್ತೊಂದು ದುರಂತ. ಹೀಗಾಗಿಯೇ ಜಾತಿ-ಜಾತಿಗಳ ನಡುವೆ ಕಟ್ಟಲ್ಪಟ್ಟ ಗೋಡೆಗಳು ಮಾನವೀಯತೆಯನ್ನು ಮರೆಸುವಷ್ಟು ಇಲ್ಲಿ ಎತ್ತರವಾಗಿ ಬೆಳೆದುಬಿಟ್ಟವು. ಸಾಮಾಜಿಕವಾಗಿ ದೂರವಿಡಲ್ಪಟ್ಟ ಹಾಗೂ ಆರ್ಥಿಕವಾಗಿ ತೀರ ದುರ್ಬಲವಾದ ಜನಾಂಗಗಳು ಮೂಲ ವಾಹಿನಿಯಿಂದ ದೂರದೂರವಾಗುತ್ತಲೇ ಹೊರಟದ್ದು, ಒಂದು ಜನಾಂಗಕ್ಕೆ ಅಸ್ಪೃಶ್ಯತೆಯ ಹಣೆಪಟ್ಟಿ ಹಚ್ಚಿದ ಕಾರಣ ಅದು ಪಶುಸದೃಶ ಜೀವನ ಕಳೆಯಬೇಕಾದದ್ದು ಇವೆಲ್ಲ ಇಲ್ಲಿಯ ಜಾತಿವ್ಯವಸ್ಥೆಯ ಕೆಟ್ಟ ಪರಿಣಾಮಗಳು. ಪ್ರಗತಿಶೀಲ ಲೇಖಕ ಈ ವಿಕೃತ ಸ್ಥಿತಿಯನ್ನು ಪ್ರತಿಭಟಿಸುತ್ತಲೇ ತನ್ನ ಪ್ರತಿಕ್ರಿಯೆ ತೋರಿದ. ''ಹರಿಜನರ ಮೇಲೆ ನಾವು ತೋರುತ್ತಿರುವ ದಬ್ಬಾಳಿಕೆಯನ್ನು ಸಮೂಲವಾಗಿ ತೊಡೆದು ಹಾಕುವ ತನಕ ನಾವು ಮನುಷ್ಯರೆಂದು, ವೇದೋಪನಿಷತ್ಕಾರರ ಸಂತತಿಯವರೆಂದು ಕರೆದುಕೊಳ್ಳುವುದು ನಾಚಿಗೆಗೇಡುತನ. ಇದು ಸಾಮಾಜಿಕ ಸಮಸ್ಯೆಯಾದರೂ ನಮ್ಮ ರಾಷ್ಟ್ರ ಜೀವನವನ್ನೇ ಅಲುಗಾಡಿಸುತ್ತಿರುವ ಮಹಾಪ್ರಶ್ನೆಯಾಗಿದೆ'' ಎಂದು ಅ.ನ.ಕೃ. ಘೋಷಿಸಿದರು. ಅವರ ಕಟುವಾದ ಹಾಗೂ ಕಳಕಳಿಯ ಈ ಮಾತುಗಳು ಪ್ರಗತಿಶೀಲರ ಅಂದಿನ ಆಶಯಗಳ ಪ್ರತೀಕದಂತಿವೆ.

ಮಹಿಳೆಯರನ್ನು ಕುರಿತಾದ ಹಲವಾರು ಸಮಸ್ಯೆಗಳೂ ಇದ್ದವು. ಸಾಮಾಜಿಕ ಮತ್ತು ಆರ್ಥಿಕ ಕಾರಣಗಳಿಗಾಗಿ ಮಹಿಳೆ ವೇಶ್ಯೆಯಾಗುವ ಸ್ಥಿತಿಯನ್ನು ಪ್ರಗತಿಶೀಲರು ಮುಖ್ಯವಾಗಿ ಗಮನಿಸಿದರು. ಬಾಲ್ಯವಿವಾಹ, ವರದಕ್ಷಿಣೆ, ವಿಷಮ ವಿವಾಹ, ವೈಧವ್ಯವೇ ಮೊದಲಾದ ಕ್ರೌರ್ಯಗಳಿಗೆ ತುತ್ತಾಗುತ್ತಿದ್ದ ಮಹಿಳೆ ಸಮಾಜದಲ್ಲಿ ಕೇವಲ ಒಂದು ಭೋಗದ ವಸ್ತುವಾಗಿ ಹಾಗೂ ಗಂಡಿನ ಶೋಷಣೆಯ ವಸ್ತುವಾಗಿ ಕೊಳೆಯಬೇಕಾದ ದಾರುಣತೆ ಅವರ ಚಿತ್ತವನ್ನು ಕಲಕಿತು. ಒಂದೆಡೆ ದೇವತ್ವದ ಪಟ್ಟ ಕಟ್ಟಿ, ಮತ್ತೊಂದೆಡೆ ಅವಳನ್ನು ಪರಿಪರಿಯಾಗಿ ಶೋಷಣೆಗೀಡುಮಾಡುತ್ತಿದ್ದ ಸಮಾಜವನ್ನೇ ಅವರು

ತರಾಟೆಗೆ ತೆಗೆದುಕೊಂಡರು. ''ಸ್ತ್ರೀಯರ ಪರಿಸ್ಥಿತಿ ಭಾರತದಲ್ಲಿ ಸುಧಾರಿಸಬೇಕಾದರೆ ಮೊದಲು ಪುರುಷರ ಮನೋಭಾವನೆ ಬದಲಾಗಬೇಕು. ಸ್ತ್ರೀಯರಲ್ಲಿ ದಾವಾನಲದಂತೆ ವ್ಯಾಪಿಸಿರುವ ನಿರಕ್ಷರತೆ ನಿರ್ಮೂಲವಾಗಬೇಕು. ಸ್ತ್ರೀಯನ್ನು ಮನುಷ್ಯಳಂತೆ ನೋಡುವ ಪರಿಪಾಠ ನಮ್ಮಲ್ಲಿ ಬರಬೇಕು. ಸುಳ್ಳು ವೇದಿಕೆಯ ಮೇಲೆ ದೇವತ್ವದ ಪಟ್ಟ ಕಟ್ಟಿ ಆಕೆಯನ್ನು ಮೃತಶಿಲೆಯಂತೆ ಕೂಡಿಸುವುದೂ ಬೇಡ; ಹೀನ ಜಂತುವೆಂದು ಭಾವಿಸುವುದೂ ಬೇಡ. ಅದೂ ನಮ್ಮ ಹಾಗೆ ಮನುಷ್ಯ ಜೀವ. ನಮಗಿದ್ದ ಹಾಗೆಯೇ ಹೆಣ್ಣಿಗೂ ಸುಖ-ದುಃಖ, ಕೋಪ-ತಾಪ, ಕಾಮ-ಕ್ರೋಧಗಳಿರುತ್ತವೆ. ನಮ್ಮ ಹಾಗೆಯೇ ಅವಳೂ ಸುಶೀಲ, ಸದ್ವರ್ತನೆ, ಸತ್-ಜೀವನಗಳಿಂದ ಆದರ್ಶ ವ್ಯಕ್ತಿಯಾಗುತ್ತಾಳೆ; ನಮ್ಮ ಹಾಗೆ ಅವಳೂ ಅರಿಷಡ್ವರ್ಗಗಳಿಗೆ ತುತ್ತಾಗಿ ಪ್ರಪಾತಕ್ಕಿಳಿಯುತ್ತಾಳೆ'' ಎನ್ನುತ್ತ ಸಮಾನತೆಯ ಆಶಯಗಳನ್ನು ಪ್ರಗತಿಶೀಲರು ಬಿಂಬಿಸಿದರು.




ಈ ಎಲ್ಲ ಸಮಸ್ಯೆಗಳೊಂದಿಗೆ ಬಡತನ, ಅನಕ್ಷರತೆ, ಜನಸಂಖ್ಯಾ ಸಮಸ್ಯೆ, ಧರ್ಮದ ಹೆಸರಿನಲ್ಲಿ ನಡೆಯುವ ಶೋಷಣೆಗಳು, ನಮ್ಮ ಜನರಲ್ಲಿ ಮನೆಮಾಡಿರುವ ಅವೈಜ್ಞಾನಿಕವಾದ ಮೂಢನಂಬಿಕೆ-ಅಂಧಶ್ರದ್ಧೆಗಳು, ನಮ್ಮ ಗ್ರಾಮೀಣ ಪ್ರದೇಶದ ಸಂಕೀರ್ಣ ಸಮಸ್ಯೆಗಳು – ಹೀಗೆ ಒಟ್ಟಾರೆ ಅಂದಿನ ಸಾಮಾಜಿಕ ಜೀವನವೇ ಸಮಸ್ಯೆಗಳ ಸಂಕೀರ್ಣತೆಯಲ್ಲಿ ಒದ್ದಾಡುತ್ತಿತ್ತು. ಇವೆಲ್ಲ ಸೇರಿಯೇ, ಸಮಾಜದತ್ತ ಪ್ರಗತಿಪರ ನೋಟಬೀರುತ್ತಿದ್ದ ಪ್ರಗತಿಶೀಲ ಲೇಖಕರನ್ನು ಹೊಸ ರೀತಿಯ ಅಭಿವ್ಯಕ್ತಿಗೆ ಪ್ರೇರೇಪಿಸಿದವು. ಈ ಹಿನ್ನೆಲೆಯಲ್ಲಿ ಗಮನಿಸಿದಾಗ ಭಾರತೀಯ ಪ್ರಗತಿಶೀಲ ಚಳುವಳಿ ಇಲ್ಲಿನ ಸಮಸ್ಯೆ-ಸಂಕೀರ್ಣತೆಯಲ್ಲಿ ಪ್ರತಿಕ್ರಿಯೆ ತೋರುವ ಹಿನ್ನೆಲೆಯಲ್ಲಿಯೇ ಮುಖ್ಯವಾಗಿ ರೂಪ ತಳೆಯಿತೆಂಬುದು ಸ್ಪಷ್ಟವಾಗುತ್ತದೆ. ಈ ಕಾರಣಕ್ಕಾಗಿಯೇ ಭಾರತೀಯ ಪ್ರಗತಿಶೀಲ ಚಳುವಳಿಯನ್ನು 'ಸಮಾಜವಾದಿ ಪ್ರಗತಿಶೀಲ ಚಳುವಳಿ'ಯೆಂದು ಕರೆದರೆ ತಪ್ಪಾಗಲಾರದು. ಏಕೆಂದರೆ ಪಾಶ್ಚಾತ್ಯ ಸಾಮ್ಯವಾದದಿಂದ ಪ್ರೇರಿತವಾಗುವುದರ ಜೊತೆಗೆ ಇದು ಭಾರತೀಯ ಸಮಾಜವಾದಿ-ಸಮತಾವಾದಿ ಆಶಯಗಳಿಂದಲೂ ಮುಖ್ಯವಾಗಿ ಪ್ರೇರಿತವಾಗಿದೆ.

ಹೀಗೆ ರೂಪು ತಳೆದ ಭಾರತೀಯ ಪ್ರಗತಿಶೀಲ ಚಳುವಳಿ ಮುಖ್ಯವಾಗಿ ಬರಹಗಾರರಿಂದಲೇ ಸಂಘಟಿತವಾದದ್ದು. ಸ್ಥಗಿತ ಸ್ಥಿತಿಗೆ ಪ್ರತಿಕ್ರಿಯೆಯೊಡ್ಡಿ ಅದನ್ನು ಚಲನಶೀಲಗೊಳಿಸುವ ಆಶಯದ ಈ ಲೇಖಕರೆಲ್ಲ ತಮ್ಮ ಬರಹದ ಮೂಲಕ ಆ ಆಶಯಗಳನ್ನು ಅಭಿವ್ಯಕ್ತಿಸಿದರು. ಈ ಕಾರಣಕ್ಕಾಗಿಯೇ ಪ್ರಗತಿಶೀಲ ಚಳುವಳಿ ಮತ್ತು ಪ್ರಗತಿಶೀಲ ಸಾಹಿತ್ಯ ಬೇರೆ ಬೇರೆ ಎಂದು ಹೇಳಲಾಗದಷ್ಟು ಅಂತರ್‌ಸಂಬಂಧ ಹೊಂದಿವೆ ಎಂದದ್ದು. ಚಳುವಳಿಯ ಆಶಯ ಮತ್ತು ಧೋರಣೆಗಳ ಸಂಘಟನೆಯಾದರೆ, ಸಾಹಿತ್ಯ ಅವುಗಳನ್ನು ಜನತೆ ಮತ್ತು ಸಮಾಜಕ್ಕೆ ಬಿಂಬಿಸುವ ಮಾಧ್ಯಮವಾಯಿತು. ಪ್ರತಿಕ್ರಿಯಾತ್ಮಕ ಸಾಮಾಜಿಕ ಪ್ರಜ್ಞೆಯ ಈ ಮಾದರಿಯ ಸಾಹಿತ್ಯ ಅದುವರೆಗೂ ಪ್ರಚಲಿತವಿದ್ದ ಸಾಹಿತ್ಯ ಪರಂಪರೆಗೆ ಸವಾಲು ಹಾಕುವ ಹಾಗೆ ಬೆಳೆಯಿತು. ಸಾಹಿತ್ಯದ ಉದ್ದೇಶ-ಆಶಯಗಳನ್ನು ಕಾಲದ ಕರೆಗೆ ತಕ್ಕ ಹಾಗೆ ಬದಲಿಸಿಕೊಂಡ ಪ್ರಗತಿಶೀಲತೆ ಇಡೀ ಭಾರತೀಯ ಸಾಹಿತ್ಯದ ಇತಿಹಾಸದಲ್ಲಿ ಒಂದು ಹೊಸ ಆಯಾಮವನ್ನೇ ನಿರ್ಮಿಸಿತು. ಕನ್ನಡದಲ್ಲಿಯೂ, ಅದುವರೆಗೆ ಪ್ರಚಲಿತವಿದ್ದ ನವೋದಯಕ್ಕೆ ಇಂಥ ಪ್ರಗತಿಶೀಲ ಸಾಹಿತ್ಯ, ಸವಾಲೆಸೆಯುವಂತೆ ನಿರ್ಮಾಣವಾಗತೊಡಗಿತು.

**ಕನ್ನಡ ಸಾಹಿತ್ಯ ಪರಂಪರೆ–ಪ್ರಗತಿಶೀಲರ ಪ್ರತಿಕ್ರಿಯೆ**

ಹಿಂದೆ ಪ್ರಸ್ತಾಪಿಸಿದಂತೆ ಕನ್ನಡದಲ್ಲಿ ನವೋದಯ ಸಾಹಿತ್ಯ ತನ್ನ ಉತ್ತುಂಗ ಮುಟ್ಟಿದ ಸಮಯದಲ್ಲಿ ಪ್ರಗತಿಶೀಲ ಚಳುವಳಿ ಇಲ್ಲಿ ಕಾಲಿಟ್ಟಿತು. ಇದರರ್ಥ ಪ್ರಗತಿಶೀಲ ಧೋರಣೆಗಳು ಹಿಂದಿನ ಸಾಹಿತ್ಯದಲ್ಲಿ ಇರಲೇ ಇಲ್ಲವೆಂದಲ್ಲ. ಹಾಗೆ ನೋಡಿದರೆ ಕನ್ನಡದ ಆದಿಕಾವ್ಯದಿಂದ ಹಿಡಿದು ಇಲ್ಲಿಯವರೆಗಿನ ಎಲ್ಲಾ ಸಾಹಿತ್ಯದ ಘಟ್ಟಗಳಲ್ಲಿ ಇಂಥ ಧೋರಣೆಗಳು ಬೇಕಾದಷ್ಟು ಬಿಂಬಿತವಾಗಿವೆ. ''ಅಂದಂದಿನ ಸಾಹಿತ್ಯವು ಎಷ್ಟೆಷ್ಟರ ಮಟ್ಟಿಗೆ ತನ್ನ ಸುತ್ತಣ ಸಮಾಜದೊಂದಿಗೆ ಸಂಬಂಧವನ್ನು ಸ್ಥಾಪಿಸಿಕೊಳ್ಳತೊಡಗಿದೆಯೋ, ಅಷ್ಟಷ್ಟರ ಮಟ್ಟಿಗೆ ಅಂದಂದಿನ ಸಾಹಿತ್ಯದಲ್ಲಿ ಅದರ ಸಾಮಾಜಿಕ ಕಾಳಜಿಗಳನ್ನು ನಾವು ಗುರುತಿಸಬಹುದು. ಈ ದೃಷ್ಟಿಯಿಂದ ಇಡೀ ಕನ್ನಡ ಸಾಹಿತ್ಯ ಚರಿತ್ರೆಯೇ ಸಾಮಾಜಿಕ ಪ್ರಜ್ಞೆ ಜಾಗೃತವಾಗುತ್ತ ಬಂದಿದ್ದರ ಚರಿತ್ರೆಯಾಗಿದೆ'', ಎಂಬ ಜಿ. ಎಸ್. ಶಿವರುದ್ರಪ್ಪ ಅವರ ಮಾತು ಇಲ್ಲಿ ತುಂಬ ಗಮನಾರ್ಹವಾಗುತ್ತದೆ. ಆದರೆ ಇಂಥ ಸಾಮಾಜಿಕ ಪ್ರಜ್ಞೆ ಚಳುವಳಿ ಮತ್ತು ಸಂಘಟನೆಯ ಮೂಲಕ ಪ್ರತ್ಯೇಕವಾಗಿ ಧ್ವನಿತಗೊಂಡು ಸಾಮಾಜಿಕ ಪ್ರಗತಿಯ ಉದ್ದೇಶಮಾತ್ರದಿಂದಲೇ ಸಾಹಿತ್ಯ ರೂಪದಲ್ಲಿ ಅಭಿವ್ಯಕ್ತಿ ಪಡೆದದ್ದು ಪ್ರಗತಿಶೀಲ ಘಟ್ಟದಲ್ಲಿ. ಈ ಕಾರಣಕ್ಕಾಗಿ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಪ್ರಗತಿಶೀಲ ಸಾಹಿತ್ಯ ಘಟ್ಟಕ್ಕೆ ಮಹತ್ವದ ಸ್ಥಾನವಿದೆ. ಹಾಗೆಯೇ ಅದು ನವೋದಯ ಘಟ್ಟಕ್ಕೆ ಹಾಕಿದ ಸವಾಲುಗಳೂ ಗಮನಾರ್ಹವಾಗುತ್ತವೆ.

ಮುಖ್ಯವಾಗಿ ನವೋದಯ ಸಾಹಿತ್ಯ ಜೀವನ ಲಾಲಿತ್ಯ, ನಿಸರ್ಗಪ್ರಿಯತೆ, ಪ್ರೀತಿ - ಪ್ರೇಮ, ಭಾವನಾತ್ಮಕತೆ, ಅಂತರಂಗಿಕ ನೋವು - ನಲಿವು, ಆಧ್ಯಾತ್ಮಿಕ ಅನುಭೂತಿ – ಇವೇ ಮೊದಲಾದ ಆದರ್ಶಪರ ಧ್ಯೇಯಗಳಿಗೆ ಅಭಿವ್ಯಕ್ತಿ ಮಾಧ್ಯಮವಾಗಿತ್ತು. ಅದರ ರಸಪರ ಧೋರಣೆ ಕಾವ್ಯಾನಂದ ಪಡೆಯುವತ್ತಲೇ ಮುಖ್ಯ ಗಮನವುಳ್ಳದ್ದಾಗಿತ್ತು. ಇಂಥ ಆದರ್ಶಪರತೆಯನ್ನು ನೇರವಾದ ಹಾಗೂ ಕಟುವಾದ ಮಾತುಗಳಲ್ಲಿ ಖಂಡಿಸಿದ ಪ್ರಗತಿಶೀಲರು ಅವರ ಮುಖ್ಯ ಉದ್ದೇಶಗಳನ್ನೇ ಪ್ರಶ್ನಿಸಿದರು. ''ಸಾಹಿತಿಗಳೆ ! ನಿಮ್ಮ ಆತ್ಮಾನಂದಕ್ಕಾಗಿ ಕಾವ್ಯ, ಕಥೆಗಳನ್ನು ಬರೆದುಕೊಂಡು ತೃಪ್ತರಾಗುವಿರೋ – ಇಲ್ಲ – ಜಗತ್ತಿಗೆ ಆನಂದಾನುಭವವನ್ನುಂಟುಮಾಡಲು ನಿಮ್ಮ ಸಾಹಿತ್ಯವನ್ನು ನಿವೇದಿಸುವಿರೋ, ಚಿತ್ತದಾಸ್ಯದ ಶೃಂಖಲೆಯೇ ಸ್ವರ್ಗವೆಂದು ಭಾವಿಸುವಿರೋ, ವಿಚಾರದ ಹಾದಿಯಲ್ಲಿ ಹೋಗಿ ಸ್ವಾತಂತ್ರ್ಯ ಜೀವನದ ಅನುಭವ ಪಡೆಯುವಿರೋ, ರೂಢಿಯ ಮೌಢ್ಯವನ್ನು ಕಡಿದು ಜನರ ಬಾಳುವೆಯು ಪ್ರಗತಿಪಥದಲ್ಲಿ ಮುನ್ನುಗ್ಗಲು ಸಹಾಯಕರಾಗುವಿರೋ, ಇಲ್ಲ ಅವರನ್ನೂ ಈ ಅಂಧಕೂಪದಲ್ಲಿ ಹಾಕಿ ಕೊಳೆಸುವಿರೋ?'' ಎಂದು ಅ.ನ.ಕೃ. ಅಂದಿನ ಸಾಹಿತಿಗಳಿಗೆ ನೇರ ಸವಾಲನ್ನೆಸೆದರೆ, ಮತ್ತೊಬ್ಬ ಪ್ರಗತಿಶೀಲ ಲೇಖಕ ಕುಮಾರ ವೆಂಕಣ್ಣ ಅವರು, ''ಜನತೆಯ ಸುಖ ದುಃಖಗಳಲ್ಲಿ ಸಹಭಾಗಿಗಳಾಗಿ, ಅವರ ನಿತ್ಯಜೀವನದ ಹೋರಾಟದಲ್ಲಿ ಭಾಗಿಯಾಗಿ, ಜನತೆಯಿಂದ ಸ್ಫೂರ್ತಿಯನ್ನು ಪಡೆದು ಅವರಿಗಾಗಿ ಬರೆದು ಹಾಡುವ ಬದಲು ನಮ್ಮ ಸಾಹಿತಿಗಳು ಹೃದಯವಿಲ್ಲದವರಾಗಿದ್ದಾರೆ. ಮನೆ ಹೊತ್ತಿ ಉರಿಯುತ್ತಿರುವಾಗ, ಆ ಮನೆಯಲ್ಲಿನ ನಮ್ಮ ಜನ ಸಾಯುವ ಸ್ಥಿತಿಯಲ್ಲಿ ಇರುವಾಗ, ಮನೆ ಯಾರಿಗೆ ಸೇರಬೇಕೆಂಬ ವಾಗ್ವಾದಕ್ಕಿಳಿದಿದ್ದಾರೆ'' ಎಂದು ವ್ಯಂಗ್ಯಮಾಡಿದರು. ಇಲ್ಲೆಲ್ಲ ಪರಂಪರಾಗತ ಸಾಹಿತ್ಯ ಮತ್ತು ಸಾಹಿತಿಗಳನ್ನು ಪ್ರಗತಿಶೀಲರು ಪ್ರತಿಭಟಿಸಿದ್ದು ಸ್ಪಷ್ಟವಾಗುತ್ತದೆ.

ಇಂಥ ಪ್ರತಿಭಟನೆಯೊಂದೇ ಅವರ ಉದ್ದೇಶವಾಗಿರಲಿಲ್ಲ. ಸಾಹಿತಿಯಾದವ ಮಾಡಬೇಕಾದ ಕೆಲಸ ಏನೆಂಬುದನ್ನೂ ಅವರು ಸ್ಪಷ್ಟಪಡಿಸಿದರು. ನಾಡಿನಲ್ಲೆಲ್ಲ ಸಂಚರಿಸಿ ಪ್ರಗತಿಶೀಲ ಧೋರಣೆಗಳನ್ನು ಪ್ರಚುರಪಡಿಸಿದ ಅ. ನ. ಕೃಷ್ಣರಾಯರು ೧೯೪೬ರ ಅಕ್ಟೋಬರ್, ೨೭ರಂದು ಧಾರವಾಡದಲ್ಲಿ ಭಾಷಣ ಮಾಡುತ್ತ ಹೇಳಿದ ವಿಚಾರ ಈ ಹಿನ್ನೆಲೆಯಲ್ಲಿ ಗಮನಾರ್ಹವಾಗಿದೆ : ''ಸಾಹಿತ್ಯ ವಿಲಾಸದ ಸಾಧನವಲ್ಲ, ದೇಶೋದ್ಧಾರಕ್ಕೆ, ಆತ್ಮೋದ್ಧಾರಕ್ಕೆ ಸಾಧನವಾಗುವ ಗಾಯತ್ರಿಯದು. ಸಾಹಿತಿ ತನ್ನ ಸುಪ್ತಚೇತನದ ಅರಿವನ್ನುಂಟುಮಾಡಿಕೊಂಡು, ಅದರ ಸಂಪೂರ್ಣ ಪ್ರಯೋಜನವನ್ನು ತನ್ನ ನಾಡವರಿಗೆ ಮಾಡಿಕೊಡಬೇಕು. ಅವನ ಕ್ರಾಂತಿ ಖಡ್ಗಕ್ಕೆ ಲೋಕದ ತಾಮಸ ಕಳೆಗಳು ನಡುಗಬೇಕು. ಅದು ದುರ್ಬಲರ, ದಲಿತರ, ಬಡವರ ರಕ್ಷಾಕವಚವಾಗಬೇಕು. ಆಗಲೇ ಸಾಹಿತ್ಯದ ಸಾರ್ಥಕ್ಯ-ಸಾಹಿತಿಯ ಜನ್ಮ ಸಾಫಲ್ಯ.'' ಪ್ರಗತಿಶೀಲ ಬರಹಗಾರರು ಇಂಥ ಸಾಹಿತ್ಯ ನಿರ್ಮಾಣಕ್ಕೆ ತೊಡಗಿದರು. ಅಭಿವ್ಯಕ್ತಿಯ ರೀತಿಯಲ್ಲೂ ಹೊಸತನ ತೋರಿದ ಅವರು ಭಾಷೆಯ ಶೀಲಾಶ್ಲೀಲ, ಮಡಿ-ಮೈಲಿಗೆಗಳತ್ತ ಅಷ್ಟಾಗಿ ಗಮನ ಕೊಡಲಿಲ್ಲ. ವಾಸ್ತವ ಸ್ಥಿತಿಯನ್ನು ಇದ್ದಂತೇ ಹೇಳುವ ಅವರ ಶೈಲಿ ನೇರವಾಯಿತು, ಸರಳವಾಯಿತು. ಅದುವರೆಗೂ ಸಾಹಿತ್ಯದಲ್ಲಿ ಮಹತ್ವದ ಸ್ಥಾನ ಪಡೆದಿದ್ದ ಕಲಾತ್ಮಕತೆ ಕೂಡ ಪ್ರಗತಿಶೀಲರಲ್ಲಿ ಗೌಣವಾಯ್ತು. ತಂತ್ರದ ಹೊಸತನ, ಸೌಂದರ್ಯ ಪ್ರಜ್ಞೆ, ಇದಾವುದಕ್ಕೂ ಅಷ್ಟಾಗಿ ಗಮನ ಕೊಡದ ಅವರು ಹೇಳಬೇಕಾದುದನ್ನು ಜನತೆಗೆ ನೇರವಾಗಿ ತಲುಪುವಂತೆ ಹೇಳುವುದಕ್ಕೆ ಆದ್ಯತೆ ಕೊಟ್ಟರು. ''ಲೇಖಕ ಹೇಗೆ ಬರೆಯುತ್ತಾನೆ ಎಂಬ

ದೃಷ್ಟಿಕೋನದಿಂದ ನಾವು ಅವನ ಕೃತಿಯನ್ನು ವಿಮರ್ಶಿಸುವುದಿಲ್ಲ; ಯಾವುದರ ಕುರಿತಾಗಿ ಬರೆಯುತ್ತಾನೆ; ಅದು ಸಮಾಜಕ್ಕೆ ಎಷ್ಟರಮಟ್ಟಿಗೆ ಹಿತಕಾರಿಯಾಗಿದೆ ಎಂಬುದರ ಮೇಲೆ'' ಎಂಬ ಮಾತು ಪ್ರಗತಿಶೀಲರು ಸಾಹಿತ್ಯದ ವಸ್ತುವಿಗೇ ಮಹತ್ವದ ಸ್ಥಾನ ಕೊಟ್ಟಿದ್ದರೆಂಬುದನ್ನು ಸ್ಪಷ್ಟಪಡಿಸುತ್ತದೆ. ಇದಕ್ಕೆಲ್ಲ ಅತ್ಯಂತ ಸೂಕ್ತ ಸಾಹಿತ್ಯರೂಪ ಕಾದಂಬರಿಯಾದುದರಿಂದ ಅದೇ ಪ್ರಗತಿಶೀಲರ ಮುಖ್ಯ ಅಭಿವ್ಯಕ್ತಿರೂಪವಾಯ್ತು. ಹೀಗೆ ಪರಂಪರಾಗತ ಸಾಹಿತ್ಯದ ವಸ್ತು, ಅಭಿವ್ಯಕ್ತಿ ಮೊದಲಾದವುಗಳನ್ನು ಖಂಡಿಸಿದ ಪ್ರಗತಿಶೀಲರು ಹೊಸದಾದ ವಸ್ತು, ಅಭಿವ್ಯಕ್ತಿಯೊಂದಿಗೆ ಸಾಹಿತ್ಯ ನಿರ್ಮಿಸ ತೊಡಗಿದರು. ಪ್ರಗತಿಶೀಲರ ಚಳುವಳಿಯ ಆಶಯ - ಗುರಿಗಳನ್ನೇ ಒಳಗೊಂಡ ಇದು 'ಪ್ರಗತಿಶೀಲ ಸಾಹಿತ್ಯ'ವೆಂದು ಹೆಸರು ಪಡೆಯಿತು.

**ಪ್ರಗತಿಶೀಲ ಸಾಹಿತ್ಯದ ವ್ಯಾಖ್ಯೆ**

'ಪ್ರಗತಿ' ಶಬ್ದದ ಅರ್ಥ ಮುನ್ನಡೆ, ಮುಂದುವರಿಯುವಿಕೆ ಎಂದಾಗುತ್ತದೆ. 'ಪ್ರಗತಿ' ಬರಿ ಮುನ್ನಡೆಯುವುದಷ್ಟೇ ಅಲ್ಲ, 'ಗತಿ'ಯಲ್ಲಿ ಇನ್ನೂ ಉನ್ನತಿ, ಒಳಿತನ್ನು ಸಾಧಿಸುತ್ತ ಮುನ್ನಡೆಯುವುದು. ಅಂದರೆ ಗತಿಗಿಂತಲೂ ಭಿನ್ನ ಪ್ರಗತಿ. ವ್ಯಕ್ತಿ, ಸಮಾಜ ಹಾಗೂ ರಾಷ್ಟ್ರದ ಪ್ರಗತಿಗೆ ಪೂರಕವಾಗುವ ಸಾಹಿತ್ಯವೇ ಪ್ರಗತಿಶೀಲ ಸಾಹಿತ್ಯವೆಂಬ ಅರ್ಥ ಸ್ಫುರಿಸುತ್ತದೆ. ಪರಂಪರಾಗತವಾಗಿ ಬಂದ ಗೊಡ್ಡು ಸಂಪ್ರಾದಾಯಗಳನ್ನು ವೈಚಾರಿಕ ದೃಷ್ಟಿಯಿಂದ ಪ್ರಶ್ನಿಸುವುದು, ಧರ್ಮ-ದೇವರುಗಳ ಹೆಸರಿನಲ್ಲಿ ನಡೆಯುವ ಶೋಷಣೆಗಳನ್ನು ಪ್ರತಿಭಟಿಸುವುದು, ಅಸಂಖ್ಯ ಸಾಮಾಜಿಕ ಪೀಡೆಗಳ ವಿರುದ್ಧ, ಶೋಷಕರ ಹಾಗೂ ಬಂಡವಾಳಶಾಹಿಗಳ ವಿರುದ್ಧ ಸಮರ ಸಾರುವುದು, ನೊಂದವರ ಶೋಷಣೆಗೆ ಒಳಗಾದವರ ಪರವಾಗಿ ಸಹಾನುಭೂತಿ ತೋರುವುದು, ಪ್ರಗತಿವಿರೋಧಿ ದುಷ್ಟ ಶಕ್ತಿಗಳನ್ನು ಖಂಡಿಸುವುದು, ಆರ್ಥಿಕ ಹಿನ್ನೆಲೆಯಲ್ಲಿ ನಡೆಯುವ ಶೋಷಣೆಗಳಿಗೆ ತಡೆಯೊಡ್ಡುವುದು, ಸಾಹಿತ್ಯದ ವಿಷಯದಲ್ಲಿ 'ಕಲೆಗಾಗಿ ಕಲೆ' ಎಂಬುದನ್ನು ಬಿಟ್ಟು ಕೊಟ್ಟು 'ಮಾನವನಿಗಾಗಿ ಕಲೆ' ಎಂಬ ಹಿನ್ನೆಲೆಯಲ್ಲಿ ಮನರಂಜನೆಯನ್ನು ಹಿಂದಿಕ್ಕಿ ವಾಸ್ತವ ಪರಿಸ್ಥಿತಿಯನ್ನು ಚಿತ್ರಿಸುವುದು, ಅದಕ್ಕಾಗಿ ಜನಸಾಮಾನ್ಯರಿಗೆ ತಲುಪುವ ಭಾಷೆ-ತಂತ್ರಗಳನ್ನು ಬಳಸುವುದು – ಇವೆಲ್ಲದರ ಮೂಲಕ ಸಮಾನತೆಯುಳ್ಳ ಸಮಾಜವಾದಿ ಸಮಾಜ ರಚನೆಗೆ ಪ್ರಯತ್ನಿಸುವುದು - ಇವು ಪ್ರಗತಿಶೀಲ ಸಾಹಿತಿಗಳ ನಿಲುವುಗಳಾಗಿದ್ದವು.

ಪ್ರಗತಿಶೀಲ ಲೇಖಕರೆಂದು ಗುರುತಿಸಲ್ಪಟ್ಟ ಅ.ನ.ಕೃ., ತ.ರಾ.ಸು., ನಿರಂಜನ, ಕಟ್ಟೀಮನಿ, ಅರ್ಚಿಕ ವೆಂಕಟೇಶ್, ಕುಮಾರ ವೆಂಕಣ್ಣ, ನಾಡಿಗೇರ ಕೃಷ್ಣರಾಯ, ಪಾಟೀಲ ಪುಟ್ಟಪ್ಪ, ಕೋ. ಚೆನ್ನಬಸಪ್ಪ, ಎಸ್. ಅನಂತನಾರಾಯಣ – ಇವರೇ ಮೊದಲಾದ ಪ್ರಾತಿನಿಧಿಕ ಬರಹಗಾರರ ಬ್ಯಾನರ್ ಆಗ ಪ್ರಗತಿಶೀಲವಾಗಿದ್ದರೂ ಅವರವರ ಪ್ರಗತಿಶೀಲತೆಯ ದಾರಿ ಬೇರೆ ಬೇರೆಯೇ ಆಗಿದ್ದವು. ''...ಇವರಲ್ಲಿ ಕಟ್ಟೀಮನಿಯವರಂತೆ ಕೆಲವರು ಚಳುವಳಿಯಿಂದ ಸ್ವಲ್ಪ ದೂರ ನಿಂತು ಬರೆದರೂ ಪ್ರಗತಿಶೀಲ ಧ್ಯೇಯಗಳಿಗನುಗುಣವಾಗಿ ಬರೆದವರು'' ಎನ್ನುವ ಮಾತನ್ನೂ ಇಲ್ಲಿ ಸೇರಿಸಬಹುದಾಗಿದೆ. ಅವರು ಬರೀ ಪ್ರಗತಿಶೀಲರು ಮಾತ್ರ ಆಗಿರಲಿಲ್ಲವೆಂಬುದನ್ನೂ ಇಲ್ಲಿ ಗಮನಿಸಬೇಕು.

**ಪ್ರಗತಿಶೀಲ ಚಳುವಳಿ ಜೀವಂತವಿದ್ದ ಕಾಲ**

೧೯೪೦ರ ಸರಿಸುಮಾರಿಗೆ ಕರ್ನಾಟಕಕ್ಕೆ ಬಂದ ಪ್ರಗತಿಶೀಲ ಚಳುವಳಿ ರಭಸವಾಗಿ ಬೀಸಿಹೋಗುವ ಗಾಳಿಯಂತೆ ಬಹುಬೇಗನೆ ಕಾಣದಾಯಿತು. ೧೯೪೩ರಿಂದ ಅದರ ಸೃಜನಾತ್ಮಕ ಅಸ್ತಿತ್ವವನ್ನು ಗುರುತಿಸುವ ಎಲ್. ಎಸ್. ಶೇಷಗಿರಿರಾವ್ ಅವರು ''ಸುಮಾರು ಎಂಟು ವರ್ಷಗಳ ಕಾಲ ಪ್ರಗತಿಶೀಲ ಚಳುವಳಿ ಕನ್ನಡ ಸಾಹಿತ್ಯದಲ್ಲಿ ಒಂದು ಜೀವಂತ ಶಕ್ತಿ ಎಂದು ಬೋಧವಾಗುತ್ತಿತ್ತು'' ಎಂದಿದ್ದಾರೆ. ಅಂದರೆ ಅವರ ಪ್ರಕಾರ ಅದು ಜೀವಂತ ಶಕ್ತಿಯಾಗಿದ್ದ ಕಾಲ ೧೯೪೨-೪೩ರಿಂದ ೧೯೫೦ರವರೆಗೆ. ಆದರೆ ಪ್ರಗತಿಶೀಲ ಸಾಹಿತಿಗಳಾದವರೇ ಇದರ ಜೀವಿತಕಾಲವನ್ನು ಅಷ್ಟು ದೂರ ಒಯ್ಯುವುದಿಲ್ಲ. ''೧೯೪೩ರಲ್ಲಿ ಆರಂಭವಾದ ಪ್ರಗತಿಶೀಲ ಚಳುವಳಿ ೧೯೪೭ ರಲ್ಲಿಯೇ ಒಡೆದು ಶಕ್ತಿಹೀನವಾಯಿತೆಂಬುದು ಮಾತ್ರ ಐತಿಹಾಸಿಕ ಸತ್ಯ'' ಎಂಬ ಬಸವರಾಜ ಕಟ್ಟೀಮನಿಯವರ, ಹಾಗೂ ''ಪ್ರಗತಿಶೀಲ ಚಳುವಳಿ ಜೀವಂತವಾಗಿದ್ದ ನಾಲ್ಕು ವರ್ಷಗಳು (೧೯೪೩-೧೯೪೭) ಮಹೋನ್ನತವಾದ ಸಾಹಿತ್ಯ ಸೃಷ್ಟಿಯಾಗದಿದ್ದರೂ, ಸಾಹಿತ್ಯದ ಕ್ಷೇತ್ರ ವಿಶಾಲವಾಯಿತು'' ಎಂಬ ಅ. ನ. ಕೃಷ್ಣರಾಯರ ಮಾತುಗಳನ್ನು ಗಮನಿಸಿದರೆ ಈ ಚಳುವಳಿ ನಿಜವಾಗಿಯೂ ಜೀವಂತವಿದ್ದದ್ದು ೧೯೪೭ರ ವರೆಗೆ ಮಾತ್ರ ಎಂದು ಖಚಿತವಾಗುತ್ತದೆ. ಅಂದರೆ ಅದರ ಜೀವಿತಾವಧಿ ಹೆಚ್ಚೂ ಕಡಿಮೆ ನಾಲ್ಕು ವರ್ಷ ಮಾತ್ರ ಎಂದಾಯಿತು. ಆಶ್ಚರ್ಯದ ವಿಚಾರವೆಂದರೆ ಚಳುವಳಿ ಪ್ರಚಾರದಲ್ಲಿದ್ದ ಈ ನಾಲ್ಕು ವರ್ಷಗಳ ಕಾಲದಲ್ಲಿ ಪ್ರಗತಿಶೀಲ ಸಾಹಿತ್ಯವೆಂಬುದೇನೂ ವಿಪುಲವಾಗಿ ನಿರ್ಮಾಣವಾಗಲಿಲ್ಲ. ಚಳುವಳಿ ತನ್ನ ಅಬ್ಬರವನ್ನು ಕಳೆದುಕೊಂಡ ಮೇಲೆ, ಅಂದರೆ ಸುಮಾರು ೧೯೫೦ರ ನಂತರವೇ ಈ ಧೋರಣೆಯ ಸಾಹಿತ್ಯ ಹೆಚ್ಚು ಪ್ರಮಾಣದಲ್ಲಿ ರಚನೆಯಾದದ್ದು.

ಅತ್ಯಂತ ಸಣ್ಣ ಅವಧಿಯಲ್ಲಿ ಜೀವಂತವಾಗಿದ್ದ ಪ್ರಗತಿಶೀಲ ಚಳುವಳಿ ಹಾಗೂ ಅದರ ನಿರ್ಮಿತಿಯಾಗಿ ಬಂದ ಪ್ರಗತಿಶೀಲ ಸಾಹಿತ್ಯ ಬಹುಬೇಗನೇ ತಮ್ಮ ಅರ್ಥ ಕಳೆದುಕೊಂಡು ಅವನತಿಯ ಹಾದಿ ಹಿಡಿದುದಕ್ಕೆ ಅನೇಕ ಕಾರಣಗಳಿವೆ. ಪ್ರಗತಿಶೀಲರು ನಾಸ್ತಿಕರು, ಕಮ್ಯುನಿಸ್ಟರು ಹಾಗೂ ಅಶ್ಲೀಲೋಪಾಸಕರು ಎಂಬ ಆಕ್ಷೇಪಣೆ ಅವರಿಗೆ ಎಲ್ಲ ಕಡೆಯಿಂದಲೂ ಬರ ತೊಡಗಿದ್ದನ್ನು ಬಿಟ್ಟರೂ ಅವರ ಸಾಹಿತ್ಯದಲ್ಲಿ ಕಂಡುಬಂದ ಲೋಪ-ದೋಷ, ಅರೆ-ಕೊರೆಗಳೇ ಅವರ ಸೃಜನಶೀಲತೆಯ ಮೌಲಿಕತೆಯನ್ನು ಗೌಣಗೊಳಿಸಿದವೆನ್ನಬೇಕು. ಇವೆಲ್ಲಕ್ಕೂ ಮುಖ್ಯವಾಗಿ ಅವರ ಅವನತಿಗೆ ಕಾರಣವಾದದ್ದು ಆಂತರಿಕ ಕಚ್ಚಾಟ-ಕಿತ್ತಾಟ.

ಪ್ರತಿಭಟನೆಯೇ ಮೂಲೋದ್ದೇಶವೆಂದು ನಂಬಿದ್ದ ಪ್ರಗತಿಶೀಲರು ಸಾಹಿತ್ಯವನ್ನು ತಮ್ಮ ರೊಚ್ಚನ್ನು ಕಾರಿಕೊಳ್ಳುವ ಮಾಧ್ಯಮವನ್ನಾಗಿ ಮಾಡಿಕೊಂಡದ್ದು ದೊಡ್ಡ ಅನಾಹುತವಾಯಿತು. ಸಾಹಿತಿಗೆ ಮುಖ್ಯವಾಗಿ ಇರಬೇಕಾದ ಸಾವಧಾನ ಗುಣ, ಸಮಷ್ಟಿ ಸಂವೇದನೆಗಳೇ ಪ್ರಗತಿಶೀಲರಿಗೆ ಆಗ ಇರಲಿಲ್ಲವೆಂದರೆ ತಪ್ಪಾಗಲಾರದು. ಇವತ್ತು ಹೀಗೆ ತಮ್ಮ ರೊಚ್ಚನ್ನು ಹೊರ ಹಾಕಿಬಿಟ್ಟರೆ ನಾಳೆ ಕ್ರಾಂತಿಯೇ ನಡೆದು, ನಾಡಿದ್ದೇ ಸಾಮಾಜಿಕ ಪ್ರಗತಿ

ನಡೆದುಹೋಗುತ್ತದೆಯೆಂಬ ಭ್ರಮೆ ಅವರಲ್ಲಿ ಕೆಲವರಿಗಾದರೂ ಇತ್ತು. ಹೀಗಾಗಿ ಅವರು ಆವೇಶಭರಿತರಾಗಿ ಬರೆಯತೊಡಗಿದರು. ಈ ಆವೇಶವಾದರೂ ಸಮಾಜದ ಅಂತರಂಗವನ್ನು ಹೊಕ್ಕನಂತರ ಬಂದದ್ದಲ್ಲ; ಬದಲಾಗಿ ಅದರ ಮೇಲ್ಪದರದ ಸಮಸ್ಯೆಗಳಿಗೆ ಮಾತ್ರ ತೋರಿಸಿದ ಪ್ರತಿಕ್ರಿಯೆಯಾಗಿತ್ತು. ಈ ಕಾರಣದಿಂದ ಅವರ ಸಾಮಾಜಿಕ ಪ್ರಜ್ಞೆಯೇ ಸಂಶಯಕ್ಕೀಡಾಯಿತು. ಪ್ರಗತಿಶೀಲ ಚಳುವಳಿ ಕ್ರಮೇಣ ಕ್ಷೀಣವಾಗುತ್ತ ಸಾಗಿತು, ಅವರ ಸಾಹಿತ್ಯ ಗೌಣವಾಯಿತು. ಅವರ ಸಂಘದ ಅಸ್ತಿತ್ವವಂತೂ ಇಲ್ಲದಾಯಿತು. ಅದು ಕನ್ನಡ ಪ್ರಗತಿಶೀಲ ಘಟ್ಟದ ಇತಿಹಾಸ.

**ಪ್ರಗತಿ ಪಂಥ**

೧೯೫೦ರ ಸುಮಾರಿಗೆ ಹೀಗೆ ಮುಳುಗಿಹೋಗಿದ್ದ ಪ್ರಗತಿಶೀಲ ಚಳುವಳಿಯನ್ನು ಪುನಃ ಚಾಲ್ತಿಗೆ ತರುವ ಪ್ರಯತ್ನವೊಂದನ್ನು ಅ.ನ.ಕೃ. ಮತ್ತು ಅವರ ಬೆಂಬಲಿಗರು ೧೯೫೨ರಲ್ಲಿ ನಡೆಸಿದರು. ೧೯೫೨ರ ಜೂನ್ ೪, ೫, ೬ ಮತ್ತು ೭ರಂದು ಹಿರಿಯೂರಿನಲ್ಲಿ ಅವರು ನಡೆಸಿದ ಸಮ್ಮೇಳನ ಪ್ರಗತಿಶೀಲ ಚಳುವಳಿಯ ಪುನರುಜ್ಜೀವನಕ್ಕಿಂತ ಹೆಚ್ಚಾಗಿ ಅವರು ಹಿಂದೆ ಮಾಡಿದ್ದ ತಪ್ಪುಗಳನ್ನು ಮುಚ್ಚಿಕೊಳ್ಳಲು ಮಾಡಿದ ಪ್ರಯತ್ನವಾಗಿತ್ತು. ಇಷ್ಟೊತ್ತಿಗಾಗಲೇ ಅ.ನ.ಕೃ. ಬಣವೆಂದು ಗುರುತಿಸುವ ಪ್ರಗತಿಶೀಲರ ಗುಂಪು ಸ್ಪಷ್ಟವಾಗಿ ಗೋಚರಿಸಿತ್ತು. ಅದು ನಿರಂಜನರಿಂದ ಇನ್ನೂ ತೀಕ್ಷ್ಣವಾದ ಆಕ್ಷೇಪಣೆಗಳಿಗೆ ಗುರಿಯಾಯಿತು. ಹೀಗೆ ಪ್ರಸ್ತಾಪ ಮಾಡಲು ಮಾತ್ರ ಇತಿಹಾಸದಲ್ಲಿ ದಾಖಲಾಗಿ ಉಳಿದ ಹಿರಿಯೂರ ಸಮ್ಮೇಳನ ಅದಕ್ಕಿಂತ ಹೆಚ್ಚಿನದೇನನ್ನೂ ಸಾಧಿಸಲಾಗಲಿಲ್ಲ.

ಇದಾದ ಸುಮಾರು ೨೪-೨೫ ವರ್ಷಗಳ ತರುವಾಯ ೧೯೭೬ರಲ್ಲಿ ಪ್ರಗತಿಶೀಲ ಚಳುವಳಿಯನ್ನು ಮತ್ತೊಮ್ಮೆ ಸಂಘಟಿಸಿ ಅದಕ್ಕೆ ಒಂದು ಸಾಂಘಿಕ ಸ್ವರೂಪ ನೀಡುವ ಇನ್ನೊಂದು ಪ್ರಯತ್ನ ನಡೆಯಿತು. ಕನ್ನಡದಲ್ಲಿ ನವ್ಯ ತನ್ನ ಪ್ರಭಾವಲಯವನ್ನು ಚಾಚಿಕೊಂಡ ಕಾಲ ಅದು. ದೇಶದ ರಾಜಕೀಯ ರಂಗದಲ್ಲಿ ಉಂಟಾದ ತೀವ್ರತರ ಏರು-ಪೇರಾಟಗಳು ಮತ್ತು ಅಂದಿನ ಸಾಮಾಜಿಕ-ಸಾಂಸ್ಕೃತಿಕ ಸ್ಥಿತ್ಯಂತರಗಳ ಹಿನ್ನೆಲೆಯಲ್ಲಿ ನಡೆದ ಈ ಪ್ರಯತ್ನದ ವೈಶಿಷ್ಟ್ಯವೆಂದರೆ ನಿರಂಜನರು ಹಾಗೂ ಕಟ್ಟೀಮನಿಯವರು ಇದರ ಮುಂಚೂಣಿಯಲ್ಲಿದ್ದದ್ದು. 'ಕರ್ನಾಟಕ ಪ್ರಗತಿ ಪಂಥ' ಎಂಬ ನಾಮಕರಣ ಹೊಂದಿದ್ದ ಈ ಸಂಘಟನೆ ದಾವಣಗೆರೆಯಲ್ಲಿ ೧೯೭೬ರ ಜನವರಿ ೧೧,೧೨ರಂದು ತನ್ನ ಪ್ರಥಮ ಸಮ್ಮೇಳನವನ್ನು ನಡೆಸಿತು. ಈ ಸಮ್ಮೇಳನಕ್ಕೆ ನಿರಂಜನರು ಅಧ್ಯಕ್ಷರೂ, ಕಟ್ಟೀಮನಿಯವರು ಉದ್ಘಾಟಕರೂ ಆಗಿದ್ದರು. ಭಾರತೀಯ ಪ್ರಗತಿಶೀಲ ಲೇಖಕರ ಮಹಾಸಂಘದ ಪ್ರಧಾನ ಕಾರ್ಯದರ್ಶಿಗಳಾಗಿದ್ದ ಶ್ರೀ ಭೀಷಮ್ ಸಾಹ್ನಿ ಮತ್ತು ಸೋವಿಯತ್ ಒಕ್ಕೂಟದ ಕನ್ನಡ ಪರಿಣತ ಎಂ. ಎ. ದಶ್ಕೋ ಅವರು ಮುಖ್ಯ ಅತಿಥಿಗಳಾಗಿದ್ದರು. ಕನ್ನಡ ನಾಡಿನ ಪ್ರಮುಖ ಪ್ರಗತಿಪರ ವಿಚಾರವಾದಿಗಳು ಈ ಸಮ್ಮೇಳನದ ವಿವಿಧ ಗೋಷ್ಠಿಗಳಲ್ಲಿ ತಮ್ಮ ಭಾಷಣಗಳನ್ನು ಮಂಡಿಸಿದರು. ಎರಡು ದಿನ ನಡೆದ ಈ ಸಮ್ಮೇಳನದ ಕೊನೆಗೆ - ''ವಿಮುಕ್ತ ಮಾನವ, ಶೋಷಣೆರಹಿತ ಸಮಾಜ ಮತ್ತು ಸುವ್ಯವಸ್ಥಿತ ಸಮೃದ್ಧ ಸಾಮಾಜಿಕ ಜೀವನ ಇವನ್ನು ಪ್ರಗತಿಪಂಥ ಬಯಸುತ್ತದೆ. ...ನಮ್ಮ ಕಲೆಯೂ, ಸಾಹಿತ್ಯವೂ ಒಳ್ಳೆಯ ಬದುಕಿಗಾಗಿ ಜನತೆ ನಡೆಸುವ ಹೋರಾಟದೊಡನೆ ಸಂಬಂಧಿತವಾಗಿದೆ. ಅಸಹಾಯಕತೆಯ, ನಿರಾಶೆಯ ಸಾಹಿತ್ಯ ಪ್ರಗತಿಪಂಥೀಯರಿಗೆ. ಸದಾ ಪರಕೀಯ... ನಾವು ಮಾನವನ ಆರಾಧಕರು, ನಾವು ಎಲ್ಲ ಮಾನವ ಕೋಟಿಯ ಸಂಸ್ಕೃತಿ - ಸಂಸ್ಕಾರಗಳ ವಾರಸುದಾರರು; ...ನಾಳೆಯ ಒಳಿತಿನತ್ತ ಮುನ್ನಡೆಯುವ ಜನಕೋಟಿಗೆ ಆಸರೆಯಾಗಬೇಕೆಂದು ಲೇಖಕರು ಕಲಾವಿದರಿಗೆಲ್ಲ ನಾವು ಕರೆ ನೀಡುತ್ತೇವೆ'' ಎಂಬ ಘೋಷಣೆ ಅಂಗೀಕರಿಸಲ್ಪಟ್ಟಿತು. ಆದರೆ ಅದು ಕೇವಲ ಘೋಷಣೆಯಾಗಿಯೇ ಉಳಿಯಿತು. ಪ್ರಗತಿಪಂಥ ಮುಂದೆ ಯಾವುದೇ ಬಗೆಯ ಕ್ರಿಯಾತ್ಮಕ ಪ್ರಯತ್ನ ಮಾಡಲಿಲ್ಲ. ೧೯೭೬ರ ಫೆಬ್ರವರಿ, ೧೫ರಂದು ಪ್ರಗತಿ ಪಂಥೀಯರು ವಿಜಾಪುರದಲ್ಲಿ ಮತ್ತೊಂದು ಸಮ್ಮೇಳನ ಮಾಡಿದರು. ಆ ವರ್ಷ ಅಲ್ಲಲ್ಲಿ ಹಲವಾರು ಕಾರ್ಯಕ್ರಮಗಳೂ ನಡೆದವು. ಆದರೆ ಯಾವುದರಿಂದಲೂ ಪ್ರಯೋಜನವಾಗಲಿಲ್ಲ. ಕಟ್ಟೀಮನಿ ಹಾಗೂ ನಿರಂಜನರಲ್ಲಿ ಉಂಟಾದ ಭಿನ್ನಾಭಿಪ್ರಾಯ ಗಳಿಂದಾಗಿ ಪ್ರಗತಿ ಪಂಥ ಕೂಡ ಮಂಕಾಯಿತು. ಕಟ್ಟೀಮನಿಯವರು ಇದನ್ನು, '' 'ಪ್ರಗತಿ ಪಂಥ' ಕಟ್ಟಿ ಬೆಳೆಸಲು ನಿರಂಜನರು ಒಂದು ವರ್ಷ ಪರಿಶ್ರಮ ವಹಿಸಿದರು. ಪುತ್ತೂರಿನಲ್ಲೂ, ಮಹಾಲಿಂಗಪುರದಲ್ಲೂ ಸಮ್ಮೇಳನಗಳು ನಡೆದವು. ಆದರೆ ಅಷ್ಟರೊಳಗಾಗಿ ನಮ್ಮ ನಮ್ಮಲ್ಲಿಯೇ ಭಿನ್ನಾಭಿಪ್ರಾಯಗಳು ತಲೆದೋರಿದುದರಿಂದ ಪಂಥದ ಚಟುವಟಿಕೆಗಳು ನಿಂತುಹೋದವು. ಪ್ರಗತಿಶೀಲ ಲೇಖಕರ ಸಂಘಕ್ಕೆ ೧೯೪೪ರಲ್ಲಿ ಒದಗಿದ್ದ ಗತಿಯೇ ಪ್ರಗತಿಪಂಥಕ್ಕೂ ಬಂತು. ಯುವಕ ಲೇಖಕರು ಈ ಚಳುವಳಿಯನ್ನು ಮುಂದುವರಿಸಿಕೊಂಡು ಹೋಗಬಹುದಾಗಿತ್ತು. ಅವರಿಗೂ ಆಸಕ್ತಿ ಉಳಿಯಲಿಲ್ಲ'' – ಎಂದು ಪ್ರಾಮಾಣಿಕವಾಗಿ ಒಪ್ಪಿಕೊಂಡಿದ್ದಾರೆ. ಇದು ಪ್ರಗತಿಪಂಥದ ವಿಫಲ ಪ್ರಯತ್ನದ ಇತಿಹಾಸ.

ಹೀಗೆ ಗಟ್ಟಿಯಾಗಿ ನೆಲೆಯೂರದ ಕನ್ನಡ ಪ್ರಗತಿಶೀಲ ಚಳುವಳಿ ಸಂಘಟನೆಗಾಗಿ ನಿರಂತರ ಮುರುಕು ಮನೆಯ ಹಾಗೆಯೇ ಕಂಡುಬಂತು. ಆದರೆ ಅದರ ಸಂಘಟನೆಯ ಬಗ್ಗೆ ತಲೆಕೆಡಿಸಿಕೊಳ್ಳದಿದ್ದರೂ, ಅದು ಇಟ್ಟುಕೊಂಡಿದ್ದ ಧ್ಯೇಯೋದ್ದೇಶಗಳನ್ನು ತಮ್ಮ ಸೃಜನಶೀಲತೆಯ ಮುಖ್ಯ ನೆಲೆಯನ್ನಾಗಿ ಸ್ವೀಕರಿಸಿದ ಕೆಲವಾದರೂ ಲೇಖಕರು ಕನ್ನಡದಲ್ಲಿ ಪ್ರಗತಿಶೀಲ ಸಾಹಿತ್ಯ ನಿರ್ಮಿಸಿ, ಅದಕ್ಕೆ ಸಾಹಿತ್ಯ ಚರಿತ್ರೆಯಲ್ಲಿ ಒಂದು ಮಹತ್ವದ ಸ್ಥಾನ ದೊರೆಯುವಂತೆ ಮಾಡಿದರು. ಈ ಕೆಲವರಾದರೂ ಲೇಖಕರು ಕೊನೆಯವರೆಗೂ ಪ್ರಗತಿಶೀಲ ಧೋರಣೆಯನ್ನು ಬೆಚ್ಚಗಿಟ್ಟುಕೊಂಡೇ ಬರೆಯುತ್ತ ಬಂದದ್ದು ಸ್ವಾಗತಾರ್ಹ. ಇದಕ್ಕೆ ಬಹುಮುಖ್ಯ ಕಾರಣವೆಂದರೆ ಪ್ರಗತಿಶೀಲ ಚಳುವಳಿಯ ಪ್ರಭಾವಕ್ಕಿಂತಲೂ ಮೊದಲು ಅವರು ಸಾಮಾಜಿಕ ಪ್ರಗತಿಯ ಕಳಕಳಿಯನ್ನು ಹೊಂದಿದವರಾದದ್ದು. ಇಂಥವರ ಮೂಲಕವೇ ಬಹುಶಃ ಗುಪ್ತಗಾಮಿನಿಯಾಗಿ ಹರಿಯುತ್ತ ಬಂದ ಪ್ರಗತಿಶೀಲತೆ ಕನ್ನಡ ಸಾಹಿತ್ಯದಲ್ಲಿ ಮುಂದೆ ದಲಿತ, ಬಂಡಾಯ ಸಾಹಿತ್ಯಘಟ್ಟಗಳಿಗೆ ಪ್ರೇರಣೆ ನೀಡಿದೆಯೆನಿಸುತ್ತದೆ. ''ಶೋಷಣೆ ಮತ್ತು ದಬ್ಬಾಳಿಕೆಯನ್ನು ಖಂಡಿಸುವ ಸಾಹಿತ್ಯ ದಲಿತ ಸಾಹಿತ್ಯ. ...ಕಳೆದ ಕೆಲವು ವರ್ಷಗಳಿಂದ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಕೇಳಿಬರುತ್ತಿರುವ ದಲಿತ ಸಾಹಿತ್ಯದ ಧ್ವನಿ, ಮೂವತ್ತು ವರ್ಷಗಳ ಹಿಂದಿನ 'ಪ್ರಗತಿಶೀಲ ಸಾಹಿತ್ಯ'ದ ಪ್ರತಿಧ್ವನಿ'' ಎಂಬ ಬಸವರಾಜ ಕಟ್ಟೀಮನಿಯವರ ಮಾತುಗಳು ಹಾಗೂ ''ಅಂದಿನ ಪ್ರಗತಿಶೀಲ ಸಾಹಿತ್ಯದ ಲಕ್ಷಣಗಳು ಇಂದಿನ ಬಂಡಾಯ ಸಾಹಿತ್ಯದಲ್ಲಿ ಬಹುಮಟ್ಟಿಗೆ ಕಂಡು ಬರುತ್ತವೆ'' ಎಂಬ ಹಾ. ಮಾ. ನಾಯಕರ ಮಾತುಗಳು ಅದೇ ವಾಸ್ತವವನ್ನು ಎತ್ತಿ ಹೇಳುವಂತಿವೆ. ಇದು ಪ್ರಗತಿಶೀಲ ಚಳುವಳಿಯ ಅವಸ್ಥಾಂತರಿತ ಮತ್ತು ರೂಪಾಂತರಿತ ಇತಿಹಾಸ ಮತ್ತು ವರ್ತಮಾನ.

**ಪ್ರಗತಿಶೀಲರ ಕೊಡುಗೆಗಳು**

ಏನೆಲ್ಲ ಲೋಪ-ದೋಷ, ಕೊರತೆ, ವಿರೋಧಾಭಾಸ, ಕಿತ್ತಾಟ, ಭಿನ್ನಾಭಿಪ್ರಾಯ ಗಳಿದ್ದರೂ ಕನ್ನಡ ಪ್ರಗತಿಶೀಲ ಚಳುವಳಿ ತನ್ನದೇ ಆದ ಕೊಡುಗೆ ಕೊಟ್ಟಿರುವುದನ್ನು ಅಲ್ಲಗಳೆಯಲಾಗದು. ಪ್ರಗತಿಶೀಲ ಲೇಖಕರು ತಮ್ಮ ಬರವಣಿಗೆಯ ಮೂಲಕ ಕೊಟ್ಟ ಈ ಕೊಡುಗೆಗಳನ್ನು ಇತರ ಸಾಹಿತ್ಯ ಘಟ್ಟಗಳ ಲೇಖಕರ ಕೊಡುಗೆಗಳಿಗೆ ಹೋಲಿಸಿದಾಗ ಅವು ಅಷ್ಟು ದೊಡ್ಡವೆನಿಸಲಿಕ್ಕಿಲ್ಲ. ಆದರೆ ಪ್ರಗತಿಶೀಲರ ಈ ಕೊಡುಗೆಗಳಿಗೆ ಅವುಗಳದೇ ಆದ ಮಹತ್ವವಿರುವುದು ವಾಸ್ತವ. ಅಂಥ ಕೆಲವು ಕೊಡುಗೆಗಳನ್ನು ಈ ಕೆಳಗಿನಂತೆ ಕ್ರೋಡೀಕರಿಸಬಹುದು.

೧) ಪ್ರಗತಿಶೀಲರು ಸಾಹಿತ್ಯದಲ್ಲಿ ಮೊಟ್ಟಮೊದಲನೆಯದಾಗಿ ಸಾಮಾಜಿಕತೆ ಮತ್ತು ಸಮಕಾಲೀನತೆಗಳಿಗೆ ಅಗ್ರಸ್ಥಾನ ಕೊಟ್ಟರು.

೨) ವಸ್ತು ಮತ್ತು ಪ್ರಯೋಜನದ ದೃಷ್ಟಿಯಿಂದ ಮಧ್ಯಮ ವರ್ಗದವರಿಗೆ ಸೀಮಿತವಾಗಿದ್ದ ಸಾಹಿತ್ಯವನ್ನು ಸಾಮಾಜದ ಕೆಳವರ್ಗದವರ, ಶೋಷಿತರ, ದಲಿತ, ರೈತ-ಕಾರ್ಮಿಕರ ಹಂತಕ್ಕೆ ಅವರು ಒಯ್ದರು.

೩) ಸಮಾಜದಲ್ಲಿರುವ ಹಲವಾರು ಸಮಸ್ಯೆಗಳನ್ನು, ಕೊಳಕನ್ನು, ದುಷ್ಟಶಕ್ತಿಗಳನ್ನು, ಭ್ರಷ್ಟರನ್ನು, ಧರ್ಮಲಂಡರನ್ನು, ಶೋಷಣೆಯನ್ನು ಸಾಹಿತ್ಯದ ಮೂಲಕ ಎತ್ತಿ ತೋರಿಸಿದ ಹಾಗೂ ವಿಡಂಬಿಸಿದ ಧೈರ್ಯಪ್ರವೃತ್ತಿ ಪ್ರಗತಿಶೀಲರ ಇನ್ನೊಂದು ಕೊಡುಗೆ.

೪) 'ಸಾಹಿತ್ಯಕ್ಕೂ ರಾಜಕೀಯಕ್ಕೂ ಸಂಬಂಧ ಕೂಡದು' ಎಂಬ ವಾದವಿದ್ದ ಕಾಲದಲ್ಲಿ ಪ್ರಗತಿಶೀಲರು ರಾಜಕೀಯ ರಂಗವನ್ನು ಸಾಹಿತ್ಯದ ಮೂಲಕ ಪ್ರದರ್ಶಿಸಿದ್ದು ಒಂದು ಮಹತ್ವದ ಕೊಡುಗೆ.

೫) ಕನ್ನಡ ಕಾದಂಬರಿ ಸಾಹಿತ್ಯ ಪ್ರಕಾರಕ್ಕೆ ಹೊಸ ಆಯಾಮ ತಂದುಕೊಟ್ಟದ್ದು, ಬೆಳೆಸಿದ್ದು ಪ್ರಗತಿಶೀಲರ ಇನ್ನೊಂದು ಮಹತ್ವದ ಕಾರ್ಯ.

೬) ಮುಖ್ಯವಾಗಿ ಪ್ರಗತಿಶೀಲರು ಸಾಹಿತ್ಯವನ್ನು ಜನಪ್ರಿಯಗೊಳಿಸಿದರು. ಇದರಿಂದಾಗಿ ಕನ್ನಡ ಓದುಗರ ವಲಯ ವಿಸ್ತಾರವಾಯಿತು. ಸಾಹಿತ್ಯದ ಓದಿಗೆ ಜನಸಾಮಾನ್ಯರನ್ನು ಆಕರ್ಷಿಸಿದವರು ಪ್ರಗತಿಶೀಲರು.

೭) ಪ್ರತಿಭಟನೆಯ ಬರಹದ ಮೂಲಕ ಪ್ರಗತಿವಿರೋಧಿಶಕ್ತಿಗಳನ್ನು ಬಯಲಿಗೆಳೆದ



# ಎತ್ತರದಲ್ಲೇ ಇದ್ದಾರೆ ಇನ್ನೂ

ಕಳೆದುಹೋಗಿದೆ
ಮಹತ್ತಿನ ಮಹಲು
ಅವಮಾನದ ಬಯಲು

ಎದುರಾದ ಹಾದಿ
ಮೈಮೇಲೆ ಬಿದ್ದಂತೆ ಆಗಿ
ಪಕ್ಕಕ್ಕೆ ಸರಿದೆ
ಕೈ ಮುಗಿದು ನಿಂತೆ
ತಲೆ ತಗ್ಗಿ ನಡು ಬಗ್ಗಿ
ಹುದುಗಿಯೂ ಹೋದೆ
ಬಿರುಕುಬಿಟ್ಟ ನೆಲದೊಳಗೆ
ಈಗ ಇಲ್ಲವಾಗಿದ್ದೇನೆ
ನನ್ನನ್ನು ನಾನು ಕಳಕೊಂಡು

ನೋಡಿದಿರಲ್ಲ ನೀವೆಲ್ಲ!
ನನ್ನ ಹೆಗಲೇರಿದವರು
ತಲೆ ಮೇಲೆ ಕುಳಿತು
ಇಡೀ ಜಗತ್ತಿಗೆ ಕಾಣುವರು
ನಮ್ಮ ಸುತ್ತಲ ನಾಡಿನ ಯಜಮಾನರು

ಯಾರ ಕಣ್ಣಿಗೂ ಬೀಳದು ಅವರ ಭದ್ರ ಬುನಾದಿ
ತೊತ್ತಳ ತುಳಿತಕೆ ತತ್ತರ ನಲುಗಿ
ಅಲುಗಾಡಿಬಿಟ್ಟರೆ
ಭೂಮಿಗೆ ನಡುಕ ಉಂಟಾದಂತೆ
ಸುನಾಮಿ ಅಲೆಗಳು ಎದ್ದುಬಂದಂತೆ
ಒಂದಾಗಿಬಿಡುವುವು
ಥರ ಥರ ನಡುಗಿ
ಮಹಲೂ ಮಣ್ಣೂ!

ಬೀಸುವ ಗಾಳಿಗೆ ಕಾದು ಕುಳಿತ
ಹಣ್ಣಾದ ಎಲೆಗಳ ಹಾಗೆ
ಎತ್ತರದಲ್ಲೇ ಇದ್ದಾರೆ ಇನ್ನೂ

**ಡಾ|| ಶ್ರೀಧರ ಪಿಸ್ಸೆ**
ನಂ. ೬೩, ದೇಸಾಯಿ ಓಣಿ
ಕಮಲಾಪುರ - ೫೮೫ ೨೨೧

ಪ್ರಗತಿಶೀಲರು ಓದುಗರಲ್ಲಿ ಕೆಲಮಟ್ಟಿಗಾದರೂ ಕ್ರಾಂತಿಕಾರಿ ಭಾವನೆಗಳನ್ನು ತುಂಬಿದರು, ವೈಚಾರಿಕತೆಯನ್ನು ಬೆಳೆಸಿದರು.

೮) ಪ್ರಗತಿಶೀಲರು ಕನ್ನಡ ಪುಸ್ತಕಗಳ ಪ್ರಕಾಶನ, ಮಾರಾಟವನ್ನು ಒಳಗೊಂಡ ಹಾಗೆ ಒಟ್ಟಾರೆ ಪುಸ್ತಕೋದ್ಯಮಕ್ಕೆ ಒಂದು ಹೊಸ ತಿರುವು ತಂದುಕೊಟ್ಟರು.

೯) ಕನ್ನಡ ಸಾಹಿತ್ಯದಲ್ಲಿ ಹೊಸದಾದ ವಸ್ತು ಮತ್ತು ಅಭಿವ್ಯಕ್ತಿಗಳನ್ನುಳ್ಳ ಒಂದು ನವೀನ ಧೋರಣೆಯಲ್ಲಿ ಸಾಹಿತ್ಯ ನಿರ್ಮಿಸಿದ ಪ್ರಗತಿಶೀಲರು ಮುಂದೆ ದಲಿತ - ಬಂಡಾಯ ಸಾಹಿತ್ಯದ ಹುಟ್ಟಿಗೆ ಪ್ರತ್ಯಕ್ಷ ಅಥವಾ ಪರೋಕ್ಷವಾಗಿ ಕಾರಣರಾದರು.

ಪ್ರಗತಿಶೀಲ ಚಳುವಳಿಯ ಪೂರ್ವಾಪರಗಳನ್ನು ಹೀಗೆ ವಿವರವಾಗಿ ಅವಲೋಕಿಸಿಯಾದ ಮೇಲೆ, ಕೊನೆಯಲ್ಲಿ ಪ್ರಗತಿಶೀಲ ಬರಹಗಾರರಿಗಿದ್ದ ಕೆಲವು ಮಿತಿಗಳನ್ನು ಹೇಳುವುದು ಅಗತ್ಯ. ಮುಖ್ಯವಾಗಿ ಪ್ರಗತಿಶೀಲ ಬರಹಗಾರರಲ್ಲಿ ಹೆಚ್ಚಿನವರು ಉನ್ನತ ಶಿಕ್ಷಣ ಪಡೆದವರಲ್ಲ. ಕೆಲವರಾದರೂ ಪ್ರಗತಿಶೀಲರು ಅತ್ಯಂತ ದಾರುಣವಾದ ಪರಿಸರದಲ್ಲಿ ಹುಟ್ಟಿ, ಪ್ರತಿಕೂಲ ಪರಿಸರದಲ್ಲಿ ಬೆಳೆದವರು. ಪ್ರಗತಿಶೀಲ ಸಾಹಿತಿಗಳಾರೂ ಉನ್ನತ ಹುದ್ದೆಗಳಲ್ಲಿರಲಿಲ್ಲ ಅಥವಾ ಜೀವನ ನಿರ್ವಹಣೆಗೆ ಅವರು ಯಾವ ನೌಕರಿಯನ್ನೂ ಅವಲಂಬಿಸಲಿಲ್ಲ. ಬರೆದೇ ಬದುಕನ್ನು ನಿರ್ವಹಿಸಬೇಕಾದ ಅನಿವಾರ್ಯತೆಗೆ ಬಹುಜನ ಲೇಖಕರು ಒಳಗಾಗಿದ್ದರು. ಹೀಗಾಗಿ ಅವರು ಬರವಣಿಗೆಯನ್ನು ಒಂದು ಉದ್ಯೋಗವಾಗಿಸಿಕೊಂಡರು. ಬರವಣಿಗೆ ಹೀಗೆ ಒಂದು ಉದ್ಯೋಗವಾದಾಗ ಅದರ ಸತ್ವ ಕಡಿಮೆಯಾಗುವುದು ಸಹಜ. ಅಂತೆಯೇ ಹಸಿ-ಬಿಸಿ ಕೃತಿಗಳು ಹುಟ್ಟಿದವು. ಹೀಗೆ ಅವರ ಹಲವಾರು ಮಿತಿಗಳನ್ನು ಗುರುತಿಸಬಹುದು. ಈ ಮಿತಿಗಳ ಜೊತೆಗೆ ಅವರನ್ನು ಕಾಡಿದ ಅವಸರ, ಅತ್ಯುತ್ಸಾಹ ಮತ್ತು ಮನುಷ್ಯ ಸಹಜ ದೌರ್ಬಲ್ಯಗಳು ಒಟ್ಟಾರೆ ಅವರನ್ನು ಅಪಪ್ರಚಾರಕ್ಕೆ ಗುರಿಮಾಡಿದವು. ಇಷ್ಟೆಲ್ಲ ಮಿತಿಗಳ ನಡುವೆಯೂ ಪ್ರಗತಿಶೀಲ ಲೇಖಕರು ಪ್ರಗತಿಶೀಲ ಸಾಹಿತ್ಯವೆಂದರೇನು ಎಂಬುದಕ್ಕೆ ಉತ್ತರ ಕೊಡಬಲ್ಲ ಕೆಲವಾದರೂ ಕೃತಿಗಳನ್ನು ಕೊಟ್ಟಿರುವುದನ್ನು ಗಮನಿಸದಿರಲಿಕ್ಕಾಗದು.

ಜಾಗತೀಕರಣದ ಪ್ರಸ್ತುತ ಸಂದರ್ಭದಲ್ಲಿ ಏನೆಲ್ಲವುಗಳ ಕಲಸು-ಮೇಲೋಗರವಾಗುತ್ತಿದೆ. ವ್ಯಾಪಾರಿ ಸಂಸ್ಕೃತಿಯ ಕರಡಿ ಕುಣಿತದಲ್ಲಿ ಏನೆಲ್ಲ ಸಮಸ್ಯೆಗಳು ಹುಟ್ಟಿಕೊಂಡಿವೆ. ಬಡತನವಿದೆ, ಜಾತೀಯತೆಯಿದೆ, ಸ್ತ್ರೀ ಶೋಷಣೆ ಇದೆ, ಜೊತೆಗೆ ಹಲವಾರು ಸಾಮಾಜಿಕ, ಸಾಂಸ್ಕೃತಿಕ ಹಾಗೂ ರಾಜಕೀಯ ಸಮಸ್ಯೆಗಳಿವೆ - ಬಿಕ್ಕಟ್ಟುಗಳಿವೆ. ಇಷ್ಟೆಲ್ಲ ಇದ್ದರೂ ಲೇಖಕರು ವೈಯಕ್ತಿಕವಾಗಿಯೇ ಆಗಲಿ, ಸಾಮೂಹಿಕವಾಗಿಯೇ ಆಗಲಿ ಒಂದು ಚಳುವಳಿಯ ರೀತಿಯಲ್ಲಿ ಅವುಗಳ ಕಡೆಗೆ ಪ್ರತಿಕ್ರಿಯೆ ತೋರುತ್ತಿಲ್ಲ. ಪ್ರತಿಭಟನೆ-ಪ್ರಗತಿಯ ಆಶೋತ್ತರಗಳಂತೂ ತಣ್ಣಗಾಗಿ ಹೋಗಿವೆ. ಎಲ್ಲರ ಗಮನ ಮಾರುಕಟ್ಟೆಯತ್ತಲೇ ಕೇಂದ್ರೀಕೃತವಾಗಿರುವ ಕಾರಣ ಸಾಹಿತ್ಯವೂ ಮಾರುಕಟ್ಟೆಯ ಸರಕಾಗಿ ಮೂಡಿಬರುತ್ತಿದೆ. ಇಂಥಲ್ಲಿ ಪ್ರಗತಿಶೀಲ ಚಳುವಳಿಯು ಹೊಸ ಮುಖದೊಂದಿಗೆ ಪುನರುಜ್ಜೀವನ ಪಡೆದರೆ, ಮುಖ್ಯವಾಗಿ ಅದು ಜಾಗತೀಕರಣ, ವಾಣಿಜ್ಯೀಕರಣ ಹಾಗೂ ಉದಾರೀಕರಣದ ಫಲವಾಗಿ ದೊಡ್ಡ ಪ್ರಮಾಣದಲ್ಲಿ ತಲೆ ಎತ್ತುತ್ತಿರುವ ನವಬಂಡವಾಳಶಾಹಿಯ ವಿರುದ್ಧ ಉಗ್ರವಾದ ಪ್ರತಿಭಟನೆಯನ್ನು ಆರಂಭಿಸಬಹುದಾಗಿದೆ. ಅದರ ಜೊತೆಗೆ ಎಲ್ಲಾ ರಂಗಗಳಲ್ಲೂ ತಾಂಡವಿಸುತ್ತಿರುವ ಭ್ರಷ್ಟಾಚಾರ, ಮಧ್ಯವರ್ತಿಗಳ ಹಾವಳಿ, ಅಧಿಕಾರದಾಹದಿಂದ ಹುಟ್ಟಿರುವ ಅರಾಜಕತೆ ಮತ್ತು ಇತರ ಹಲವಾರು ಸಾಮಾಜಿಕ ಸಮಸ್ಯೆಗಳ ವಿರುದ್ಧ ಅದು ಗಟ್ಟಿಯಾದ ದನಿ ಎತ್ತಬಹುದಾಗಿದೆ. ಒಂದು ಸಂಘಟನೆಯಾಗಿ ಪ್ರಗತಿಶೀಲ ಚಳುವಳಿ ರೂಪ ಪಡೆದು, ಸಾಹಿತ್ಯಕವಾಗಿ ಅದು ಹೊಸದಾದ ಅಭಿವ್ಯಕ್ತಿ ಸಾಧಿಸಬಹುದಾಗಿದೆ.

ಇಂಥ ಚಳುವಳಿ ಮತ್ತೆ ರೂಪ ಪಡೆಯಲು ಸಾಧ್ಯವೆ? ಆಶಾವಾದಿಗಳಾಗಿರೋಣ.

**ಡಾ|| ಬಸವರಾಜ ಸಾದರ**
ಸಹಾಯಕ ಕೇಂದ್ರ ನಿರ್ದೇಶಕ, ವಿವಿಧ ಭಾರತಿ, ಆಕಾಶವಾಣಿ
ಬೆಂಗಳೂರು - ೫೬೦ ೦೦೧

# ಮುಡಿದವರು

ಎಂ. ಎಸ್. ವೇದಾ

''**ಮಾ**ಯಣ್ಣ, ಮಾಯಣ್ಣ...'' ತೋಟದ ತುದಿಯಿಂದ ಒಂದೇ ಸಮನೆ ವೋಡಿಕೊಂಡು ಬರುತ್ತಿದ್ದ ಎದುರಟ್ಟಿ ರಾಜಪ್ಪನ ಮಗನನ್ನು ಕಂಡು ಕಳೆ ಕೀಳುತ್ತಿದ್ದ ಮಾಯಣ್ಣ ಪಟಕ್ಕನೆ ಯೆದ್ದು ಬಿಸಿಲಿಗೆ ಅಡ್ಡವಾಗಿ ಕಣ್ಣುಗಳ ಬಳಿ ತನ್ನ ಕೈಗಳನ್ನಿಟ್ಟು, ''ಯಾನಾ ಕೂಸು. ಇದ್ಯಾಕ್ ಹಿಂಗ್ ವೋಡ್‌ಕಂಡು ಬತ್ತಾ ಇದ್ದಿ'' ಅಂತ ತಾನೂ ಕೂಗು ಹಾಕಿದ್ದ. ''ಅದ್ಯಾನ್ ಅದು ಯಾಳ್ ತಿಂಗ್ಳುಗ್ ವುಟ್ಟಿದ್ದಂಗೆ ಆಡ್ದರಿ ಬತ್ತಾ ಅವ್ನಲ್ಲ. ಯೇಳ್ತನೆ ತಡರಿ'' ಹೆಂಡಿರು ಭಾಗ್ಯಮ್ಮ ಗಂಡನ ಆತಂಕವನ್ನು ಅದುಮುವ ಮಾತನಾಡಿದ್ದಳು. ''ನಮ್ಮಟ್ಟಿ ಜಗುಲಿ ಮ್ಯಾಗ ಮನಗಿದ್ದ ಲಿಂಗಣ್ಣ ಎದ್ದೇಳಿಸಾಕೆ ವಾದ್ರೆ ಯೆದ್ದೇಳ್ತಾನೇ ಇಲ್ಲ. ಯೆಲ್ಲ ವಸ್ತು ಹೊಂಟೋಗದೆ ಅಂತ ಅವರೆ'', ಬಂದವ ಸುದ್ದಿ ಕೊಡುತ್ತಿದ್ದಂಗೆ ಗಂಡ ಹೆಂಡಿರ ಯೆತ್ತಿಂಟಂತ್ತಾಗಿತ್ತು. ''ಈಗ್ತಾನೆ ಉಣ್ಣಕ್ಹಾಕ್‌ಬುಟ್ಟು ಬಂದ್ವಲ್ಲಪ್ಪ. ಚಣದಾಗೆ ಅದೇನಾಗೋಯ್ತು ಅಪ್ಪಯ್ಯಂಗೆ'', ನುಡೀತಾ ಇದ್ದಂಗೆ ಯಿಬ್ಬರ ವೋಟವೂ ಹಟ್ಟಿಯತ್ತ ಸಾಗಿತ್ತು.

ಎದುರಟ್ಟಿಯ ಜಗುಲಿಯ ಮ್ಯಾಗೆ ವುಸಿರಿಲ್ಲದೆ ಮನಗಿದ್ದ ಅಪ್ಪನನ್ನು ಕಂಡು ಮಾಯಣ್ಣನ ಕಂಗಳಲ್ಲಿ ನೀರು ತುಂಬಿದ್ದವು. ಯೆಗಲ ಮ್ಯಾಲಿದ್ದ ಚೌಕದಿಂದ ಕಣ್ಣೊತ್ತಿಕೊಂಡು ಬಿಕ್ಕುತ್ತಾ ಕಾಲದೆಸೆ ಕುಂತ. ಆ ದಿನವೇ ಸುಕ್ರೋರಾ ಎಂದು ಸೇವು, ಸಾನ ಮಾಡಿ ಬಟ್ಟೆ ಬದಲಾಯಿಸಿ ಮನಗಿದ್ದ ಅಪ್ಪ!? ಹಿಂದಿನ ಗಳಿಗೆ ಜಗಳವಾಡಿ, ''ಮುಂಡಾಮುಕ್ಳ, ಯಾವ್ ನನ್ಮಗನೂ ನನ್ನಟ್ಟಿ ವುದ್ಧಾರ ಮಾಡಹಂಗೆ ಹುಟ್ನಿಲ್ಲ'' ಎಂದು ಹಂಗಿಸಿದ್ದ ಅಪ್ಪ ಈಗ ತಣ್ಣಗೆ ಮನಗಿದ್ದಾನೆ. ತಣ್ಣಗೆ ಮನಗಿದ್ದ ಮಾವನನ್ನೊಮ್ಮೆ ನೋಡಿದ್ದ ಭಾಗ್ಯಮ್ಮ ನಾಗಮ್ಮ ತಂದುಕೊಟ್ಟ ಗಿಂಡಿಯ ನೀರಾ ಗಂಟಲಿಗೆ ಬುಟ್ಟುಕೊಂಡು, ನೀರಾದ ತುಟಿಗೋಳ ಬಳಿ ಸೆರಗ ವತ್ತಿ ಲಿಂಗಣ್ಣೋರ ಸಾವ ಹಿಂದಿನ ಕ್ಷಣಗಳ ಪುಟಗಳನ್ನು ತಿರುವಿಹಾಕಿದ್ದಳು. 'ಈಗ್ತಾನೆ ಉಣ್ಣಾಕೆ ಇಕ್ಕಿಬುಟ್ಟು ಕೂತಿದ್ನಾ. ಮಾವಯ್ಯಂದು ಅದೇ ಕಿರ್ಕು, ವರಾತ, ಎಸ್ರುಗೆ ವುಪ್ಪು, ನಿನ್ನೆಂಡ್ತಿ ಬೇಕಂತಾನೆ ಜಾಸ್ತಿ ಹಾಕ್ಬುಟ್ಟೋಳೆ. ನನ್ ತಣಿಗೇಗೆ ತುಪ್ಪಾ ವಸಿ ಹಾಕುದ್ಕು ಅಂತ ಕ್ಯಾಣ ಮಾಡ್ಕಂಡು ತಣಿಗೆ ತಕ್ಕಂಡ್‌ಹ್ವಾಗಿ ಕಲಗಚ್ಚಿಗೆ ಸುರ್ದುಬುಟ್ರಾ. ಇವ್ರು ನಂಗೇ ಬೈಯ್ಕಂಡು ಅಪ್ಪುನ್ನಾ ಮತ್ತ ಕೂರ್ಸಿ ವುಣ್ಣಾಕ್ಕಿಕ್ಕಿ...'', ಕೈ ಬಾಯಿಗಳನ್ನು ತಿರುವುತ್ತಾ ನುಡಿಯತೊಡಗಿದ್ದಳು. ನಾಗಮ್ಮ ಅದ ತುಟಿ ಮ್ಯಾಲಿನ ಕೊಂಕುನಗೆಯೊಂದಿಗೆ ಪರಾಂಬರಿಸುತ್ತಿದ್ದುದ ಕಂಡವನಾದ ಮಾಯಣ್ಣ, ''ವಸಿ ಬಾಯ್ಮುಚ್ಕಂಡು ನಿಂತ್ಕ ಮಾರಾಯ್ತಿ'' ಎಂದು ಕೂಗು ಹಾಕಿದ್ದ.



''ನೀವು ತ್ವಾಟದ ಕಡೇಗಂತ ಆ ಕಡಾ ವಾದ್ರಾ. ಲಿಂಗಣ್ಣ ನಮ್ಮಟ್ಟಿ ಕಡೀಕೆ ಬಂತು. ಉಂಡ್ಯಾ ಲಿಂಗಣ್ಣ ಅಂದೆ. ''ವುಣ್ಣೆಸ್‌ಬುಟ್ ಹ್ವಾದ್ರಲ್ಲಾ'' ಅಂತು. ''ಎಲ್ರೂ ವುಣ್ಣೆಸಹಂಗೇ ನಿಂಗೂ ವುಣ್ಣೆಸ್ತಾ ಅವ್ರೆ. ಅಣೀಬರಾ. ಯಾನ್ ಮಾಡಾದು ಬುಡು. ಯೋಗಿ ತಂದದ್ ಯೋಗಿಗೆ ಜೋಗಿ ತಂದುದ್ ಜೋಗಿಗೆ'' ಅಂದೆ. ''ಅಣೀಬರಾ ಅಂತ ಸುಮ್ನ ಬುಟ್ಟುಬುಡ್ತೀನಾ ಇವುರ್ನ. ಗಿರ್‌ಗಿರಾ ಅಂತ ಆಡುಸ್‌ಬುಡ್ತೀನಿ'' ಅಂತು. ಅಂದ ಮರುಕ್ಷಣದಾಗೆ ಕಣ್ಣು ಎಳೀತಾ ಅವೆ ಅಂತ ಮನಿಕಂತು. ಧಡಕ್ಕನೆದ್ದು ಎಲ್ಡ್ ಸಲ ವಮನ ಮಾಡ್ಕಂತು. ಸುಸ್ತಾಗಿ ಮನಿಕಂಡೋರಿಗೆ ವಳಗೋಗಿ ಒಂದ್ ಗಿಂಡಿ ನೀರ್ ತರಾದ್ರೊಳಗೆ ವಸ್ತು ಇಲ್ಲ. 'ಅಣ್ಣಯ್ಯೋ ಲಿಂಗಣ್ಣಯ್ಯೋ' ಅಂತ ಕೂಗುದ್ರೂ ಯಿಲ್ಲ. ತಡುವುದ್ರೂ ಯಿಲ್ಲ.''

ಭಾಗ್ಯಮ್ಮನ ಬಾಯಿ ಮುಚ್ಚಿದೆಡೆಯಾಗೆ ನಾಗಮ್ಮನ ಬಾಯಿ ತೆರಕಂಡಿತ್ತು. ಹೆಂಡಿರ ಬಾಯ ಮುಚ್ಚಿಸಿದ ಹಂಗಲ್ಲ ನಾಗಮ್ಮನ ಬಾಯಿ ಮುಚ್ಚಿಸಾದು ?! ನೋಡನೋಡುತ್ತಿದ್ದಂಗೇ ಐವೊತ್ತು ಅರುವತ್ತು ಹಟ್ಟಿಗಳಿಂದ ಕೂಡಿದ್ದ ಆ ವೂರೆಂಬ ವೂರೇ ನಾಗಮ್ಮನ ಹಟ್ಟಿ ಮುಂದೆ ನೆರೆದು ನಿಂತಿತ್ತು. ಮಾಯಣ್ಣನ ಹಟ್ಟಿಯ ಸಾವು ತಮ್ಮಟ್ಟಿಯ ಜಗುಲಿಯ ಮ್ಯಾಲೆ ಮನಗಿ, ಅದರ ಸುತ್ತಾ ವೂರೆಂಬ ವೂರು ಸೇರಿ... ಆ ಸಾವು ತಮ್ಮ ಹಟ್ಟಿಯದೇ ಅನ್ನಿಸಿ,... ನಾಗಮ್ಮೋರ ಮಗಳು 'ಥೀ ಥೀ' ಎಂದು ತಲೆಕೊಡವಿಕೊಂಡವಳಾಗಿ, ''ಮಾಯಣ್ಣ ಹೆಣುವಾ ನಿಮ್ಮಟ್ಟಿ ಜಗುಲಿಗೆ ಯೆತ್ತಿ ಆಕ್ಕಳ್ಳ ಯವಸ್ಥೆ ಮಾಡಣ್ಣ'' ಎಂದು ಇನ್ನೂ ಮೊಕಕ್ಕೆ ಚೌಕ ಹಚ್ಚಿಕ್ಕಂಡು ಅಳುತ್ತಿದ್ದವನನ್ನು ಯೆಚ್ಚರಿಸಿದ್ದಳು.

ಭಾಗ್ಯಮ್ಮನಾಗಲೇ ಹಟ್ಟಿ ಸೇರಿ ಜಗುಲಿಯ ಮ್ಯಾಗೆ ಚಾಪೆ ಹಾಸಿದ್ದಳು. ಕಟ್ಟುಮಸ್ತಾದ ನಾಕಾಳುಗಳು ಹೆಣುವಾ ವೊತ್ತುಕೊಂಡು ಚಾಪೆಯ ಮ್ಯಾಗೆ ಮನಗಿಸಿ ಕಂಬಳಿ ವೊದ್ದಿಸಿದ್ದರು. ''ಯೆಡವಟ್ಟ್ ಹೈಕ್ಳು. ಅದ್ಕೇ ಅನುಬೋವಾ ಸಾಲ್ದು ಅನ್ನಾದು. ಕಂಬ್ಳಿ ವೊದ್ದಿಸ್‌ಬುಟ್ರೆ ಆಗೋಯ್ತಾ. ಕೈ ಕಾಲ್ ಮುರ್ದು. ಕಣ್ಣುಗುಡ್ಡೆ ಅದುಮಲ್ವಾ ಕಾಣಿ. ಎಲ್ಲಾ ಸೆಟಗೊಂಡ ಮ್ಯಾಕೆ ಮಾಡಾಕೆ ಹ್ವಾದೀರಾ ?'' ವೂರ ಹಿರಿಯ ತಲೆ ಅಂದಾನಯ್ಯ ಸುಮ್ಮಗೆ ಯೆಣದ ಮ್ಯಾಗೆ ಕಂಬಳಿ ವೊದ್ದಿಸಿ ಕೈ ತೊಳಗಂಡು ಬುಟ್ಟ ಹೈಕುಳುಗಳ ತಿಳಿವಳಿಕೆಯನ್ನು ಹರಾಜಿಗೆ ಹಚ್ಚಲೆಂದೇ ನಿಂತುಕೊಂಡಿದ್ದ. ''ಅಷ್ಟೇ ಏನಯ್ಯಾ ಅಂದಾನಯ್ಯ ಕಿವಿಗೂ ಮೂಗ್ಗೂ ಅತ್ತಿ ತುಂಬಾ ಕೇಳು. ಇಲ್ದೇರಾ ಗಾಳಿ ತುಂಬ್ಕಂಡು ವಸ್ತು ವೂದ್‌ಕಂಡ್‌ಬುಡಲ್ವಾ. ಮಕ್ಳುಮರಿ, ಬಂಧುಬಳಗ ಬಂದು ವಪ್ಪಾ ಮಾಡಾಗಂಟ ಒಂದ್ ದಿನುವೇ ಕಳ್ದೋಯ್ತದೆ'' ಅಂತ ಮತ್ತೋರ್ವ ಹಿರೀಕ ಚಿಕ್ಕೀರಯ್ಯ ತನ್ನ ಅನುಭೋವವಾ ಆ್ಯಡು ಮಾಡಿದ್ದ. ''ಗ್ವಾಡೆಬೀರೂನಾಗೆ ಪೂಜೆಗೆ ತಂದಿರಾ ಅತ್ತಿ ಅದೆ. ತಂದ್ಕೊಡು ನಾಗಕ್ಕ'', ಮಾಯಣ್ಣ ಕೇಳಿದ್ದ. ನಾಗಕ್ಕ ತನ್ನಟ್ಟಿ ವಳಗೆ ಹೋಗುವುದ ಇಷ್ಟಪಡದ ಭಾಗ್ಯಮ್ಮ ಧಡಕ್ಕನೆದ್ದು ಹಟ್ಟಿವಳಗೆ ತೂರಿಕಂಡಿದ್ದಳು. ಹತ್ತಿನಾಗಿದ್ದ ಬೀಜಗಳ ಬುಡುಸಿ ಎಸೆಯುತ್ತಾ ಮಾಯಣ್ಣನ ಕೈನಾಗೆ ಇಟ್ಟಿದ್ದಳು.

ಭಾಗ್ಯಮ್ಮನ ಬಿರುನಡೆ ಏನೇನೂ ಸರಿ ಕಾಣನಿಲ್ಲವಾಗಿ ನಾಗಮ್ಮ ತಟ್ಟನೆದ್ದು ತನ್ನಟ್ಟಿಯ ಕಡೆ ನಡದು ಜಗುಲಿ ಮ್ಯಾಲೆ ಆಸೀನಳಾಗಿದ್ದಳು. ಮಗಳು ''ಇದ್ಯಾಕವ್ವ ಇಲ್ಲಿ ಕುಂತುಬುಟ್ಟೆ. ನೀರ್ವಾಕಿ ತೊಳಿಯಾ ಗಂಟಾ ಏನವಸರ ನಿಂಗ'' ಅಂತ ಗದರಿಕೊಂಡಿದ್ದಳು. ಅಷ್ಟೊತ್ತಿಗಾಗಲೇ ಲಿಂಗಣ್ಣನ ಹೆಣಾ ನೋಡಿಕೊಂಡು ನಾಕಾರು ಹೆಂಗುಸರು ನಾಗಮ್ಮನ ಜಗುಲಿಯೇರಿದ್ದರು. ಜಗುಲಿ ತೊಳಿಯುವ ಮಗಳ ಕಾರ್ಯ ಮುಂದಕ್ಕೆ ಹೋಗಿತ್ತು. ತನ್ನನ್ನು ಹಟ್ಟಿ ವಳಕ್ಕೆ ಬುಟ್ಟುಕೊಳ್ಳದಿದ್ದ ಭಾಗ್ಯಮ್ಮನ ಕಾರುಬಾರಿನಿಂದ ಆಕ್ರೋಶಗೊಂಡವಳಾಗಿದ್ದ ನಾಗಮ್ಮ, ''ಬದುಕಿರೋಗಾ ವಂದ್ ನೆಮ್ದಿ ಕೊಟ್ರಾ ಈ ನನ್ ಮಕ್ಳು... ಒಬ್ಬೊಬ್ರೂ ವೋದ್ರು, ಕೆಲ್ಸ ಅಂತ ವಂದೊಂದು ದಿಕ್ಕು. ಉಗಾದಿಗೋ ದೀವಳಿಗೆಗೋ ಬಂದ್ರೂ ಬಂದ್ರು. ಇಲ್ಲಾಂದ್ರೆ ಅದೂ ಇಲ್ಲ. ವಂದ್ ಕೋಳಿ ಹತ್ ಕೋಳೀ ಸಾಕ್ತದೆ. ಆ ಹತ್ತು ಕೋಳಿಗಳು ಸೇರಿ ವಂದ್ ಕೋಳೀನಾ ಸಾಕಲ್ವಂತೆ. ಹಂಗಾಯ್ತು ಇವ್ನ ಬದ್ಕು. ಮಾವುನ್ ಹಟ್ಟಿ ಸೇರ್ಕಂಡಿದ್ ಮಾಯಣ್ಣನ್ನ ಅವ್ನ್ ತಮ್ಮ ವಾಪಸ್ ಕರ್ಕಂಡ್ ಬಂದು ಇದ್ಲೂ ವಂದ್ ಹಟ್ಟಿ ಅಂತ ಮಾಡಾಕೊಂಟ. ಆಹಾ ! ಆ ಸೊಸ ಮುದ್ದು ಅವ್ಳಲ್ಲ, ಅದ್ಯಾವ ದಿವಾನ್‌ಗಿರಿ ಅದೆ ಅಂತ ಮೆರೀತಿದ್ಲೋ ? ಅತ್ತೆ ಮಾವರ ಅಗ್ದು ವುಣ್ಣಕೆ ಬುಡನಿಲ್ಲ, ನಿಗ್ದು ತಿರುಗಾಡಾಕೆ ಬುಡನಿಲ್ಲ. ಕಿರುಬೆರಳಿನಾಗೆ ಗರಗರ ಅಂತ ಆಡುಸ್‌ಬುಟ್ಳು. ಸಾಯೋದೊಂದು ಚಣ ಅಂತ ಇವುಳ ಗುಣಗಾನಾನೇ ಮಾಡ್ತಾ ಸತ್ತಾ ಮಾರಾಯ'' ಅಂತ ಕೈ, ಬಾಯ್ಗಳ ತಿರುವುತ್ತಾ ಮಾತನಾಡಹತ್ತಿದ್ದಳು. ಆ ಮಾತು ಯೆಲ್ಲಿ ನಿಲ್ಲುತ್ತಾವೋ ತಿಳಿದವರಿಲ್ಲ, ಹಾಗೆ ನೋಡಿದರೆ ಆ ವೂರ ಹಟ್ಟಿಗಳವರಿಗೆ ಕೆಲಸವೆಂಬೋ ಕೆಲಸವೇ ಇರುವುದಿಲ್ಲ, ಆ ಹೆಣವಾ ಎತ್ತುವಗಂಟಾ ! ಮಾತೆಂಬುವಾ ಮಾತು ನಿಲ್ಲುವ ಹಂಗೇ ಇಲ್ಲ, ಆ ಹೆಣವಾ ಮಣ್ಣುಮಾಡುವಗಂಟಾ !

ಇತ್ತ ಹಿರೀಕರ ಮಾತನ್ನು ತಲೆಯಲ್ಲಿ ಹೊತ್ತವರಾಗಿ ಹೈಕಳೆಂಬೋ ಹೈಕಳು ಹೆಣಕ್ಕೆ ವಂದು ಯವಸ್ಥೆ ಮಾಡತೊಡಗಿದ್ದರು. ಕಿವಿಗಳಿಗೆ, ಮೂಗಿನ ಹೊಳ್ಳೆಗಳಿಗೆ ಹತ್ತಿ ತುಂಬಿ ಮುಂದೇನೆಂಬಂತೆ ಅಂದಾನಯ್ಯನ ಬಳಿ ತಿರುಗಿದ್ದರೆ, ಅವನು, ''ಹೆಣದ ಕೈ ಕಾಲ್ಗಳ ಮುರಿಯಾದ್ ಹೆಂಗೆ ? ಗೊತ್ತಿದ್ದದಾ'' ಎಂದು ಉಡುಪಂಚೆಯ ತುದಿಯನ್ನು ಎಡಗೈಯ



ಬೆರಳ ತುದಿಯಲ್ಲಿರಿಸಿ, ಬಲಗೈಯ ಸ್ವಂತದ ಮ್ಯಾಲೆ ಇರಿಸಿ ಇವುಕ್ಕೇನೂ ಗೊತ್ತಿಲ್ಲ ಎಂಬ ಯಕಶ್ಚಿತ್ ನೋಟವ ತೂರಿ ಹೈಕಳ ಪ್ರಶ್ನಿಸಿದ್ದ. ವುಡುಗರ ಎದುರಿಗೆ ಇವುನೇನೋ ಸ್ಕೋಪು ತಗಂಡುಬಿಡುತ್ತಿದ್ದಾನೆ ಎಂದುಕೊಂಡ ಮಾದೇವಯ್ಯ, ''ಯ್ಯೋ ಅಂದಾನಯ್ಯ, ಹೆಣ ಬಿದ್ದದೆ. ಶ್ಯಾನೆ ಲೇಟಾಯ್ತು ಅಂದ್ರೆ ಮರಗಟ್‌ಬುಡ್ತದೆ. ಬ್ಯಾಗ ಬ್ಯಾಗ ಕೈಕಾಲು ಮುರಿ. ಆ ಹೈಕ್ಳು ನೋಡಿ ತಿಳ್ಕತವೆ'', ಥಿಯರಿಗಿಂತ ಪ್ರಾಕ್ಟಿಕಲ್ಲೇ ಸರಿಯೆಂದು ಅವನ ಸ್ಕೋಪು ತಗೊಳ್ಳುವ ವುಮೇದಿಗೆ ಕಲ್ಲು ಹಾಕಿದ್ದ. ''ಬಾರ್ಲ ಮಾದೇವ, ನೀನೇ ವಸಿ ಮುರಿ. ನಾಕ್ಕತ್ತೆ ವಯ್ಸಾಗದೆ ನೀನೇ ಕಲ್ತಿಲ್ಲ. ಯಿನ್ನು ಈ ಹೈಕ್ಳು ಕಲಿಯಾದ್ ಏನ್ ಬಂತು. ನಾ ಸತ್ರೆ ನನ್ ಕೈ ಕಾಲು ಮುರಿಯಾರೆ ಇರಾಕಿಲ್ಲವೇನೋ ಈ ಹಳ್ಳಿನಾಗೆ'', ಮಾದೇವನ ತಲೆ ಮೊಟಕುವ ಕಾರ್ಯದಿಂದ ಏರಿದ್ದ ದನಿ ಕ್ಷಣಗೆ ಯಿಷಾದದಿಂದ ಕೊನೆಗಂಡಿತ್ತು. ತನ್ನ ಸಾವಿನ ಮಾತು ಯಿದ್ದಕಿದ್ದಂತೆ ತನ್ನ ಬಾಯಿಂದ ಬಂದುಬುಟ್ಟ ನೋವಿಗಾಗಿ ಅವನು ಮತ್ತೆ ಬಾಯಿ ತೆರೆಯದೆ ಕೈಕಾಲು ಮುರಿವ ಕಾರ್ಯವ ಸಾಂಗವಾಗಿ ನಡೆಸಿದ್ದ. ಸುತ್ತಮುತ್ತ ನಿಂತವರಲ್ಲಿ ಕಂಡೋರು ಕಂಡು ಕೃತಾರ್ಥರಾದರೆ ಕಾಣದವರು ಮುರಿತದ 'ಕಟಕಟ' ಸವುಂಡು ಕೇಳಿ ಪುನೀತರಾಗಿದ್ದರು.

ಸೊಸೆ ಲಗುಬಗೆಯಿಂದ ಹಟ್ಟಿವೊಳಗೋಗಿ ಒಂದು ತಟ್ಟೇನಾಗೆ ವಂದಷ್ಟು ಅಕ್ಕಿ ಹಾಕಿ ಅದರ ಮ್ಯಾಗೊಂದು ಒಂಟಿ ದೀಪವ ಇಟಗಂಡು ಜತೇನಾಗೇ ಯಿಭೂತಿಗಟ್ಟಿ, ಊದುಗಡ್ಡಿಗಳ ತಂಗಂಬಂದು ಹೆಣದ ತಲೆದೆಸ ಇಡುವಾಗ ಯಿದ್ದಕ್ಕಿದ್ದಂಗೆ ಯೆಲ್ಲರಿಗೂ ಲಿಂಗಣ್ಣನ ಮಡದಿಯ ನೆನಪಾಗಿತ್ತು. ''ಅಯ್ಯೋ ಸಿವಾ ! ಅವ್ವನ್ನ ತ್ವಾಟದ ತಾವೆ ಬುಟ್ಬ್ ಬಂದುಬುಟ್ಟೆಂವಿ. ಸುದ್ದಿ ಕ್ವಡದೆ ಅವುಳ ಮೆಲ್ಲುಗ್ ಜ್ಞಾಪನವಾಗಿ ಕರ್ಕಂಡು ಬಾ ವೋಗು ಸತೀಸ'', ಮಗನಿಗೆ ಮಾಯಣ್ಣ ಆತಂಕದಿಂದ ನುಡಿದಿದ್ದ. ಅಪ್ಪನ ಮಾತುಗೋಳ ಮಗರಾಯ ಸಾಂಗವಾಗಿ ನಡೆಸಿದ್ದ. ಲಿಂಗಣ್ಣನ ಮಡದಿಯಾದರೋ ಅವುನಿಗಿಂತ ಮೂರ್ನಾಲ್ಕು ಕಿರಿಯಳಿರಬೋದು. ಬದುಕಿನ ಜಂಟಾಟದಾಗೆ ನವೆದು, ಗಂಡಂಗಿಂತ ಮೊದ್ಲುಗೇ ಅವುಳು 'ಮುತ್ತೈದೆ ಸಾವ' ಪಡಕಂಡುಬುಡ್ತಾಳೆ ಯೆಂಬೊಂದು ನಿರ್ಣಯವ ವೂರವರು ಮಾಡಿಕೊಳ್ಳುವಂತೆ ಯಿದ್ದವಳು. ಯೀಗ ನೋಡಿದರೆ ಯಿಧಿಯಿಲಾಸವೇ ಬ್ಯಾರೆಯಾಗಿತ್ತು. ಲಿಂಗಣ್ಣನ ಹೆಂಡರು ಅಳಲು ಕಣ್ಣೀರೂ ತನ್ನ ಬರಡು ದೇಹದಾಗೆ ಯಿಲ್ಲವೆಂಬುದ ಒಪ್ಪಿಕೊಂಡವಳಾಗಿ ತನ್ನ ಬರಡು ಕೈಗಳಿಂದ ಸೇವು ಮಾಡಿ ನುಣ್ಣಗೆ, ಮೂಳೆಗಳು ಸಿಕ್ಕುತ್ತಿದ್ದ ತನ್ನ ಗಂಡನೆಂಬೋ ಗಂಡನ ಮೊಗವ ಸವುರುತ್ತಾ ಹೆಣಗಣ್ಣಾಗಿ ಕುಂತುಬುಟ್ಟಿದ್ದಳು. ಅದನ್ನು ಸಹಿಸಲಾರದವೋ ಎಂಬಂತೆ ನಾಕಾರು ಹೆಂಗಸರು ಬಂದು ಹಟ್ಟಿ ವಳಿಗೆ ಕರಕೊಂಡು ಹೋಗಿ ಅದಾಗಲೇ ಬಂಧುಗಳೊಬ್ಬರು ತಂದಿದ್ದ ಹೊಸಾ ಕೆಂಪು ಸೀರೆಯ ಹೆಂಗಂದರಂಗೆ ವುಡಿಸಿ ಸೆರಗ ವೊದ್ದಿಸಿದ್ದರು. ವಂದಷ್ಟು ಹೂವ ತಂದು ಅವುಳ ಚುಂಗಾದ ತಲೆಗೂದಲಿಗೆ ಮುಡಿಸಿ, ಅಣೆ ತುಂಬಾ ಕುಂಕುಮ ಅಚ್ಚಿ, ಗುಳಿಬಿದ್ದ ಕೆನ್ನೆಗಳ ತುಂಬಾ ಅರಿಸಿನವ ಬಳಿದಿದ್ದರು. ಅಲಂಕಾರ ಸಾಲಂಕೃತವಾಯಿತೆಂಬ ತೃಪ್ತಿ ಮೂಡಿದಮ್ಯಾಗೆ ಆ ಮಡದಿಯ ನಡೆಸಿಕೊಂಡು ಬಂದು ಲಿಂಗಯ್ಯನ ಯೆಣದ ತಲೆದೆಸಿ ಕುಳ್ಳಿರಿಸಿದ್ದರು. ಅಲ್ಲಿಯಗಂಟಾ ಯೆಣವೂ ಹಣೆಗೆ ಯಿಭೂತಿ ಪಟ್ಟೆಯ ವಡೆಸಿಕೊಂಡು, ಕಣ್ಣು, ಕಿವಿಗಳ ಜಾಗಕ್ಕೂ ಅದ ಬಳಸಿಕೊಂಡು ಅದಾಗಲೇ ವೂರ ಹಿರೀಕರು ಆತುರದಾಗೆ ತಂದು ಆಕಿದ್ದ ವೂಆರಗಳ ಎದೆಮ್ಯಾಲೆ ಮಡಗಿಸಿಕೊಂಡು ಮನಗಿತ್ತು.

ಈ ನಡುವೆ ಮಾರಣ್ಣ ಆ ಗೌಜಲಿನಿಂದ ಕೊಂಚ ಅರುಗಾಗಿ ನಿಂತು ಅಕ್ಕ ತಂಗೇರಿಗೆ, ತಮ್ಮಂದಿರಿಗೆ, ಬಂಧು ಬಳಗದೋರಿಗೆ - ಹಿಂಗೆ ವಂದೊಂದಾಗಿ ನೆಪ್ಪು ಮಾಡಿಕೊಂಡು ಮೊಬೈಲು ಹಿಡಕೊಂಡು ಸುದ್ದಿ ಕೊಡಲಾರಂಭಿಸಿದ್ದ. ಅದದೇ ಪದಗೋಳು, ಅವವೇ ವಾಕ್ಯಗೋಳು, ರಿಪೀಟಾಗಿ ರಿಪೀಟಾಗಿ ಅವುನಿಗೆ ವಾಕರಿಕೆಯೇ ಬರುವಂತಾಗಿಬುಟ್ಟಿತ್ತು. ಆರಂಭದ ಕಾಲಿನಲ್ಲಿದ್ದ ನೋವಿನ ದನಿ ಕೊನೆಯ ಕಾಲು ಮಾಡುವಾಗ ನೀರಸಗೊಂಡು ಸಮನಾಗಿತ್ತು. ಆ ವೂರಾಗೆ ಮುಕ್ಕಳೆನ್ನಿಸಿಕೊಂಡಿದ್ದ ಕಂಡಕ್ಟರು ಸಾಮಿಯ ಹೆಂಡಿರು ಇನ್ನೂ ಮಾಡಬೇಕಾದವರ ಯೆಸರುಗಳ ನೆನಪಿಸುತ್ತಿದ್ದಳು.

ತನ್ನ ಕೆಲುಸವ ಮುಗಸಿ ಮಾರಣ್ಣ ಹಟ್ಟಿ ದಿಕ್ಕಿಗೆ ತಿರುಗುವಷ್ಟರಾಗೆ ಯಾವನೋ ಪುಣ್ಯಾತ್ಮ ಮಾರಣ್ಣ ಮಳಗಾಲಕ್ಕೆಂದು ಕಡಿದಿಟ್ಟಿದ್ದ ಆನೆಗಾತ್ರದ ಮರದ ದಿಮ್ಮಿಯ ಹಟ್ಟಿ ಮುಂದಕ್ಕ ನೂಕಿ ಬೆಂಕಿ ಹಾಕಿಬಿಟ್ಟಿದ್ದ. ಐದ್ಹತ್ತು ನಿಮಿಸ ವುರಿದ ಬೆಂಕಿ ಆರಿ, ಕೊಂಟಿನಿಂದ ವೊಗೆ ಯೇಳಲಾರಂಭಿಸಿತ್ತು. ''ವಂದೆರಡು ಸಣ್ಣ ಸ್ವಾದೆ ಸೀಳು ಹಾಕಿ ಬೆಂಕಿ ಆಕಿದ್ರಾ ಆಯ್ತಿರನಿಲ್ವ. ಮಳಗಾಲುಕ್ಕೆಂತಾ ಯಿಟ್ಕಂಡಿತ್ತು.'' ಭಾಗ್ಯ ಆ ವುಡುಗನ ಕಡೆ ತಿರುಗಿ ಗದರಿಕಂಡಿದ್ದಳು. ''ನಮ್ ಕಡೆ ಹಂಗೇ ಕಣ್ ಭಾಗಮ್ಮ. ನೀ ಏನ್ ಹಿಂಗ್ ಮಾತಾಡ್ತಯ್ಯಿ, ಲಿಂಗಣ್ಣುನ ಯೇಗ್ಯತೆಗೆ ವಂದ್ ಕೊಂಟು ಉರಿಸನಾರೆಯಾ ?'' ತಾವಿಬ್ಬರೂ ಭೂಖಂಡದ ಯೆರಡು ತುದಿಗಳಲ್ಲಿರುವಂತೆ ಅಂದಾನಯ್ಯ ನುಡಿದಿದ್ದ.

ಅದಾಗಲೇ ಕತ್ತಲು ಕವಿದುಕೊಳ್ಳಲಾರಂಭಿಸಿತ್ತು. ಅಷ್ಟಾಗಲೇ ಹತ್ತಿರವಿದ್ದ ವಂದಿಬ್ಬರು ಯೆಣ್ಣುಮಕ್ಕಳು, ಅಳಿಯಂದಿರು, ಮೊಮ್ಮಕ್ಕಳು, ಬಂಧುಗಳು ಯೆಣಕ್ಕೆ ಬಂದಿದ್ದರು. ಒಬ್ಬೊಬ್ಬರು ಬಂದಾಗಲೂ 'ಅಪ್ಪಜ್ಜ್ಯೋ' ಎಂಬೊಂದು ಕೂಗು ಹೊಂಟು, ''ನಿಂಗೆಂತ ಗತಿ ಬಂತೋ ಅವ್ವಾ'' ಎಂದು ಮುಂದರಿದು ಪಟಕ್ಕಂತ ನಿಂತು ವೋಗುತ್ತಿತ್ತು. ಆ ಅವ್ವನಾದರೋ ತನ್ನ ಪಿಳಿಪಿಳಿ ಕಂಗಳಲ್ಲಿ ಜೀವದ ಇರುವ ತೋರಿಸಿಗಂಡು ಸುಮ್ಮನೆ ಕುಂತೇ ಇತ್ತು. ಪೆಟ್ರೋಮ್ಯಾಕ್ಸುಗಳು, ಪೆಂಡಾಲುಗಳು, ವಂದಷ್ಟು ಕುರ್ಚಿಗಳು ಬಂದಿದ್ದವು. ಹಟ್ಟಿಯ ಹಿತ್ತಲಲ್ಲಿ ನಾಕಾರು ವೊಲೆಗಳು ವೂಡಿದ್ದವು. ಇದ್ದ ಲವಾಜಮೆಗಳಲ್ಲಿಯೇ ಹತ್ತಾರು ಕೈಗಳು ಅಡುಗೆ ಮಾಡಲಾರಂಭಿಸಿದ್ದವು. ಯೆಣಕ್ಕೆಂದು ಬಂದವರು, ವೂರಿನ ಹತ್ತಿರದ ಹಟ್ಟಿಯೋರು ವೂಟ ಮಾಡಿ ಕೈ ತೊಳೆದುಕೊಂಡರು. ವೂರವರು ಕಣ್ಣುಗಳು ಯೆಳೆಯುತ್ತಿದ್ದಂಗೇ ತಮ್ಮಟ್ಟಿಗಳತ್ತ ಹೊಂಟಿದ್ದರು. ಹಟ್ಟಿಯಾಗೇ ವುಳಿದ ಬಂಧುಬಳಗದೋರು ಲಿಂಗಣ್ಣಯ್ಯನ ಗುಣಗಾನವ ಮಾಡುವ ಘಟನೆಗಳ ರಿಕಾರ್ಡು ಹಚ್ಚಿ ಕುಂತರು. ಲಿಂಗಯ್ಯನ ತಲೆದೆಸದ ದೀಪದ ಕುಡಿ ಬಾಡಿದ ವೊಲ್ಲೆ ಮೊಗ್ಗಿನಂತೆ ಕುಂತಿತ್ತು. ಲಿಂಗಯ್ಯನ ಕರುಳ ಕುಡಿಗಳು, ನೆಂಟರಿಸ್ಟರೂ ಕಣ್ಣುಗಳು ಜೋತುಬೀಳುವಂತಾದಾಗ ಕುಂತ ಕುಂತಲ್ಲಿಯೇ ಉಳ್ಳಿಕೊಂಡಿದ್ದರು.

* * *

ಮಂಟೇದಯ್ಯ ಸಾಕಿಕೊಂಡಿದ್ದ ಕೋಳಿಗಳ ಕೂಗಿನೊಂದಿಗೆ ಸೂರ್ಯಸ್ವಾಮಿ ಅವತರಿಸಿದ್ದ. ವೂರಿಗೆ ವೂರೇ ಯೆಚ್ಚರಗಂಡು ನೆನ್ನೆ ಜಿನ ಲಿಂಗಯ್ಯನ ಮರಣವಾದದ್ದರ ನೆಪ್ಪು ಮಾಡಿಕಂಡು ತಿಗಾಮೊಗಾ ತೊಳದು ಉಡು ಪಂಚೆಗಳ ಉಟ್ಟು, ಚೌಕಗಳ ವದರಿ ಯೆಗಲ ಮ್ಯಾಲೆ ಆಕಿಕೊಂಡ ಜೀವಗಳು ಲಿಂಗಯ್ಯನ ಹಟ್ಟಿ ಮುಂದೆ ಆಕಿದ್ದ ಪೆಂಡಾಲಿನ ಕೆಳಗಣ ಕೆಂಪು, ನೀಲಿ ಪ್ಲಾಸ್ಟಿಕ್ಕು ಕುರ್ಚಿಗಳ ಮ್ಯಾಲೆ ಆಸೀನವಾಗ ತ್ವಡಗಿದ್ದವು. ಅದದೇ ಜಗುಲಿಗಳ ಮ್ಯಾಲೆ ಕುಂತು, ಅದದೇ ಜನಗೋಳ ಜ್ವತೆ ಅದದೇ ಮಳೆ ಬೆಳೆಗಳ ಬಗೆಗಾಡಿದ ಮಾತುಗಳು ಸಾಕಾಗಿದ್ದವೋ ಯೆಂಬಂತೆ ಆ ಬದಲಾವಣೆಯ ಖುಸಿಯ ಅವುರ ಮನಸುಗಳು ಅನುಭೋಸಿದ್ದವು. ಲಿಂಗಣ್ಣನ ಗಂಡೈಕಳು ಯೆಣಕ್ಕಾಗಿ ಬಂದೋರ ಬೆಳಗಿನ ತಿಂಡಿ ತೀರ್ಥಗಳ ಸಿದ್ದತೆಗಾಗಿ ಯವಸ್ಥೆ ಮಾಡಲು ಓಡಾಡುತ್ತಿದ್ದವು. ದೂರ ದೂರುಗಳಿಂದ ನೆಂಟರಿಸ್ತರು ಬರುವುದು, ಲಿಂಗಯ್ಯನ ಹೆಂಡಿರು, ಮಕ್ಕಳ ತಬ್ಬಿ ಕಣ್ಣ ಕೊನರಲ್ಲಿಯೂ ನೀರು ಕಾಣದಂಗೆ ಶೋಕ ಮಾಡುವುದು, ಮಕ್ಕಳುಗಳು ಕೈ ಚೆಲ್ಲಿ ಯೆಲ್ಲ ಸಿವನ ಲೀಲೆ ಎಂಬಂತೆ ಆಕಾಸದತ್ತ ಮೊಕಾ ಮಾಡುವುದು, ಹೆಂಡಿರು ಜಿಬರೆಗಣ್ಣುಗಳ ಪ್ರಯತ್ನ ಪೂರ್ವಕವಾಗಿ ತೆರೆಯುವುದು, ಕುರ್ಚಿಗಳ ಮ್ಯಾಲೆ ಕೂರುವುದು, ಮಕ್ಕಳುಗಳು ಬನ್ನಿರೆಂದರೆ ಹಿತ್ತಲಿನೆಡೆ ಸರಿದು ಅಲ್ಲಿಯೂ ಹಾಕಿದ್ದ ಶಾಮಿಯಾನದಡಿ ಬೆಂಚು ಕುರ್ಚಿಗಳಲ್ಲಿ ಕುಂತು ಮಾಡಿದ್ದ ತಿಂದು ಮತ್ತೆ ಹಟ್ಟಿಯ ಮುಂದಿನ ಶಾಮಿಯಾನಕ್ಕೆ ಶಿಫ್ಟಾಗಿ ಮಾತುಕತೆಗೆ ಕುಂತುಕೊಳ್ಳುವುದು ಸಾಂಗವಾಗಿ ನಡೆದಿತ್ತು.

ಲಿಂಗಯ್ಯನ ಮೊದಲ ಮಗಳು ತನ್ನ ಮಗಳಿಗೆ ಮೊದಲ ಕೂಸಾದ ವರುಸದ ನಂತರ ಒಂದೂಕಾಲು ತಿಂಗಳುಗಳಾಗಿ ಮೈ ಇಳಿದ ವಿಚಾರವನ್ನು ಅದೊಂದು ವಿಶ್ವಸಂಗತಿಯೋ ಯೆಂಬಂತೆ ಎಲ್ಲರ ಕೈನಾಗೂ ಯೇಳಿಕೊಂಡು ಆಸ್ಪತ್ರೆಗೆ ಹೋಗಿರುವ ಮಗಳ, ಕಾರು ಹೊಂದಿರುವ ತನ್ನ ತಮ್ಮ ಕರೆತರಲು ಹ್ವಾಗದೆ ಹಟ್ಟಿಯಾಗೇ ಅಡ್ಡಾಡಿಕೊಂಡು ವುಳದುಬಿಟ್ಟಿದ್ದಾನೆಂಬ ಕ್ಯಾಣಸಾರದಾಗೆ 'ಉಪ್ ಉರ್' ಎಂದು ಅತ್ತಿತ್ತ ವಾಡಾಡುತ್ತಿದ್ದಳು. ಕಿರಿಮಗಳು ತನ್ನ ಗಂಡ ಬೇಕಂತಲೇ ಯಿನ್ನೂ ಬಾರದಿರುವ ಬಗೆಗೆ ಕಣ್ಣೀರು ತುಂಬಿಕೊಂಡು ಕುಂತಿದ್ದಳು. ಮತ್ತೊಬ್ಬ ಮಗಳು ತನ್ನಟ್ಟಿಯಾಗೆ ಬಿಟ್ಟುಬಂದಿರುವ ಬಾಣಂತಿ ಮಗುವನ್ನು ನೆನಕೊಂಡು ಕುಂತಿದ್ದಳು. ಈ ಯೆಲ್ಲ ತಾಪತ್ರಯಗಳಿಂದ ಕ್ವಂಚ ಮುಂದೆ ಹೋಗಿದ್ದ ಹಿರಿಮಗಳು ಹೋದವರ ಕೈ ಹಿಡದು ಕರಕೊಂಡ್ಹೋಗಿ ಕುಶಲೋಪರಿ ಯಿಚಾರಿಸಿ ಕೂರಿಸುವ ಕರ್ತವ್ಯ ನಿರ್ವಹಿಸುತ್ತಿದ್ದಳು.

ವೊತ್ತು ಏರುತ್ತಿತ್ತು. ಜನವೆಂಬೋ ಜನ ಹೆಣವೆತ್ತೋ ಮಾತೊಂದ ಬುಟ್ಟವರಾಗಿ ಉಳಿದೆಲ್ಲಾ ಮಾತುಗಳ ಆಡುತ್ತಾ ಕುಂತೇ ಇದ್ದರು. ನೆನ್ನೆ ಬೆಂಕಿ ಹಾಕಿದ್ದ ಕೊಂಬೆಗೆ ಕಿರಿಮಗ ಎಣ್ಣ ಸುರುದು ಬೆಂಕಿ ಹಚ್ಚಿ ವೊಗೆ ಏಳಿಸಲು ಅನುಮಾಡಿದ್ದ. ಹಿರಿಮಗ ಯೆಲ್ಲಿದ್ದನೋ ಪುಣ್ಯಾತ್ಮ ಚಟ್ಟ ಕಟ್ಟುವಾತನನ್ನು ಯೆಳಕಂಡು ಬಂದಿದ್ದ. ಅವ ಅದೇ ತಾನೇ ಲಿಂಗಯ್ಯನ ತ್ವಾಟದ ಮರವೊಂದರಿಂದ ವಂದಷ್ಟು ಕಟ್ಟಿಗೆಯ ಕಡಕಂಡು ಬಂದು ತನ್ನ ಮೊಂಡಾದ ಕತ್ತಿಯಿಂದ 'ಕೊಟ್ಟ ಕೊಟ್ಟ' ಕುಟ್ಟಲು ಆರಂಭಿಸಿದ್ದ. ಯಾರೋ ವೊಬ್ಬರ ಮೂಗಿಗೆ ಯೆಣದೆಡೆಯಿಂದ ವಾಸನೆ ಬರುತ್ತಿರುವುದು ಬಡಿದು ಮತ್ತಷ್ಟು ಊದುಗಡ್ಡಿಯ ಹಚ್ಚಿ, ಯೆಣದ ಸುತ್ತ ನೀಲಗಿರಿ ಎಣ್ಣೆಯ ಚಿಮುಕಿಸಿದ್ದರು.

ಈ ನಡುವೆ ಎಲ್ಲಿದ್ದನೋ ?! ನಾಗಮ್ಮನ 'ಹುಚ್ಚಲ್ಲ ಬೆಪ್ಪಲ್ಲ ಸಿವಲೀಲೆ'ಯೆಂಬಂತಹ ಮಗ ಧುತ್ತನೆ ಅವತರಿಸಿ ಬಾವಿಕಟ್ಟೆಯ ಮ್ಯಾಗೆ ಆಸೀನನಾಗಿಬುಟ್ಟಿದ್ದ. ಹೆಂಡಿರೊಡನೆ ನೆಟ್ಟಗೆ ಬಾಳದೆ ತಗಾದೆ ಮಾಡಿಕಂಡು ಅವುಳು ಅವನ ಪೊಲೀಸ್ ಸ್ಟೇಸನ್ನು, ಕೋರ್ಟುಗಳ ಮೆಟ್ಟಲು ಯೇರಿಸಿ ಅಲದಾಡಸಿ ಅಲದಾಡಸಿ, ''ಹ್ವಾಗೋ ಮುಂಡೆಮಗ್ನೆ, ಬದಿಕ್ಕಾ ಹ್ವಾಗು'' ಎಂದು ತೂಯ್ದು ಎಸೆದಿದ್ದಳು. ಹಂಗಾಗಿ ಅವುನ ನಾನ್‌ಸ್ಟಾಪ್ ಭಾಷಣದಾಗೆ ಪೊಲೀಸು, ಹೆಂಗಸು, ಸ್ಟೇಸನ್ನು, ಕೋರ್ಟು, ಲಾಯರ್ರು ಇತ್ಯಾದಿ ಪದಗಳೇ ಹೇರಳವಾಗಿದ್ದವು. ದುರಂತವೆಂದರೆ ನಿತ್ಯವೂ ಅವುನನ್ನು ನೋಡುತ್ತಿದ್ದೇ ಬದುಕು ಮಾಡುತ್ತಿದ್ದ ಜನರಿಂದಾಗಿ ಅವ್ವನಿಗೆ ಒಬ್ಬನೇ ಒಬ್ಬ ಸ್ತೋತೃವೂ ಇಲ್ಲವಾಗಿದ್ದದ್ದು. ಯಾರೊಬ್ಬರಿಗೂ ಅವುನ ಕಡೆ ಲಕ್ಷ್ಯವಿರದಿದ್ದರೂ ಅವುನು ಮಾತ್ರ ತನ್ನೆದುರಿಗೆ ಯಾರೋ ಇದ್ದಾರೆ ಅವುರು ತನ್ನ ಮಾತು ಕ್ಯಾಳುತ್ತಿದ್ದಾರೆ, ತಾನು ಅವುರಿಗೇ ಯೇಳುತ್ತಿರುವುದು ಎಂಬ ಗಾಢ ನಂಬಿಕೆಯಾಗೇ ತನ್ನಿಂತಾನೇ ನಿರಂತರವಾಗಿ ಮಾತಾಡಿ ಕೊಳ್ಳುವುದಕ್ಕೆ ಸುರು ಹಚ್ಚಿದ್ದ. ಅವನ ಮಾತುಕತೆಗಳಲ್ಲಿ ಇಂಡಿಯನ್ ಪೀನಲ್ ಕೋಡುಗಳ ಕಲಮುಗಳು ಎಡತಾಕುತ್ತಿದ್ದವು. ಯೆಣಕ್ಕೆ ಬಂದಿದ್ದ ಹೊಚ್ಚ ಹೊಸ ಹೊರಗಿನ ಮಂದಿಗಳೊಬ್ಬಿಬ್ಬರಿಗೆ ಮಾತ್ರ ಅವುನನ್ನು ಕಂಡು ಗಾಬರಿ, ಬಾವಿಗೆಲ್ಲಾದರೂ ಬಿದ್ದುಬಿಟ್ಟಾನೆಂಬ ಆತಂಕ, ಅವುನ ಮಾತುಕತೆಗಳ ಕುರಿತಂಗೆ ಕುತೂಹಲ



ಮೂಡಿರಬಹುದು. ಮಾತಾಡಿ ಮಾತಾಡಿ ಸಾಕಾದವ ಚಟ್ಟ ಕಟ್ಟುತ್ತಿದ್ದವನ ಬಳಿಗೆ ತೆರಳಿ ಚಟ್ಟ ಕಟ್ಟೋಕೆ ತನ್ನ ಕೈಯನ್ನೂ ಸೇರಿಸಿದ್ದ. ತಲೆ ಮತ್ತು ಮಾತುಗೋಳು ಕೆಟ್ಟಿದ್ದರೂ ಕೈಗಳು ಮಾತ್ರ ತಾವು ಮಾಡುವ ಕೆಲ್ಸವಾ ಅಚ್ಚುಕಟ್ಟಾಗಿ ನಡೆಸಿದ್ದವು. ಬ್ಯಾಂಡಿನ ಸೆಟ್ಟಿನೋರು ಆಗಮಿಸಿ ಒಂದು ರೌಂಡು ಬ್ಯಾಂಡು ವಾದನ ಮುಗಿಸಿದ್ದರು.

ಲಿಂಗಯ್ಯನ ಗದ್ದೆಯ ಮೋಸದಿಂದ ತನ್ನೆಸರಿಗೆ ಬರೆಸಿಕೊಂಡು, ಅವುನ ಮಗನನ್ನು ಕೋರ್ಟು, ಕಚೇರಿ ಅಂತ ಅಲೆಸಿದ ಮ್ಯಾಲೆ ಅವುಗಳ ವಾಪಸ್ಸು ಕೊಟ್ಟಿದ್ದ ಎದುರಟ್ಟಿಯ ಶಾಂತರಾಜುವಿನ ಜಗುಲಿ, ಮನೆಯ ತುಂಬೆಲ್ಲಾ ಉಡುಪಂಚೆಗಳ ಸರದಾರರು ಆವುರಿಸಿಕೊಂಡಿದ್ದರು. ಕುಂತೋರ ಮ್ಯಾಲೆ ನಿಂತೋರ ತಳ್ಳುವ, ನಿಂತೋರ ಮ್ಯಾಲೆ ಕುಂತೋರ ತಳ್ಳುವ ನಾಕು ಪುಡಿಗಾಸು ಇಟ್ಟುಕೊಂಡ ವೂರಿನ ಪುಡಾರಿ ಅವ. ಅವನ ಜ್ಞಾನದ ಪ್ರಸಾದವ ಪಡಕೊಳ್ಳದಿದ್ದರೆ ಹೆಂಗೆ ? ಎಡೆಯೂರಪ್ಪನ ಸರ್ಕಾರ ಉಳಿತದಾ ಎಂಬಲ್ಲಿಂದ ಆರಂಭಗೊಂಡ ಮಾತುಕತೆಗಳು ರೇಣುಕಾಚಾರ್ಯಂಗೆ ಜಯಲಕ್ಷ್ಮಿ ಎಂಬೋಳು ಮಾಡಿದ್ದು ಸರಿಯಾ, ಆಲಪ್ಪನ ಕೇಸು ಯಾವ ಟ್ವಿಸ್ಟು ಪಡಕೊಳ್ಳಬೋದು... ಎಂಬಿತ್ಯಾದಿ ವಿಷಯಗಳ ಸುತ್ತ ಗಿರಕಿ ವಡದು ವಡದು ಬೀಳುತ್ತಿದ್ದವು. ಆ ವುಮೇದಿನಲ್ಲಿ ಅವುರೆಲ್ಲರಿಗೂ ತಾವು ಲಿಂಗಯ್ಯನ ಯೆಣಕ್ಕೆ ಬಂದೀವಿಯೆಂಬ ಯಿಷಯವೇ ಮರ್ತುಹೋಗಿತ್ತು.

ಅಂತಹ ಸಂದರ್ಭದಾಗೆ ಊರ ಸಾವ್ಕಾರರು ದೊಡ್ಡ ಕಾರಿನಾಗೆ ಲಿಂಗಯ್ಯನ ಹಟ್ಟಿ ಬಳಿ ಬಂದು ಇಳಿದದ್ದೆ ತಡ ಯೆಲ್ಲರಲ್ಲೂ ವಂದು ಸಂಚಲನವಾಗಿತ್ತು. ಲಿಂಗಯ್ಯನಿಗಿಂತ ವಯಸ್ಸಿನಲ್ಲಿ, ಅಂತಸ್ತಿನಲ್ಲಿ ಹೆಚ್ಚೇಯಿದ್ದರೂ ಸಾವ್ಕಾರರ ಬಳಿ ಲಿಂಗಯ್ಯನಿಗೊಂದು ಸಲಿಗೆ ಇತ್ತು. ಸಾಯುವಗಂಟಾ ಅವನು ತನ್ನ ಕಷ್ಟಸುಖಗೋಳ ಅವುರ ಬಳಿಯೇ ಯೇಳಿಕೊಳ್ಳುತ್ತಿದ್ದದ್ದು. ಎಲ್ಲಿರಲಿ, ಹೆಂಗಿರಲಿ ನೆಮ್ದಿ ಕಾಣದ ಜೀವ

ಇದೆಂದು ಗುರುತಿಸಿಕಂಡಿದ್ದ ಅವುರು ಮಕ್ಕಳಿಗೂ ಅವುನಿಗೂ ಮಧ್ಯೆ ನಿಂತು ಕಾಜಿ ನ್ಯಾಯ ಮಾಡುತ್ತಿದ್ದರು. ಅವರೀಗ ಯೆಣದ ಮ್ಯಾಗೆ ತಂದಿದ್ದ ಹಾರುವ ಹಾಕಿ ಅದನ್ನೇ ನಿಟ್ಟುಸಿ ನ್ವಾಡಿ ನಿಟ್ಟುಸಿರು ಬುಟ್ಟಿದ್ದರು. ''ಯೆಲ್ಲ ಯಿದ್ರೂ ನೆಮ್ದಿ ಕಾಣಾದು ಕಲೀನಿಲ್ಲ ಲಿಂಗಯ್ಯ'' ಅಂತ ನುಡಕೊಂಡು ಕುರ್ಚಿಯ ಮ್ಯಾಲೆ ಕುಂತಿದ್ದರು. ಲಿಂಗಯ್ಯನ ಬೇಕಾದಷ್ಟು ಹಣವಾ ತನ್ನ ಬಳಿ ಯಿರಿಸಿಕೊಂಡಿದ್ದಾನೆಂಬ ಮಾತು ಹೊತ್ತಿರುವ ರಾಮಯ್ಯ ಪಕ್ಕದಾಗೇ ಕುಂತು ತನ್ನದಾಗಿರಬಹುದಾದ ಹಣದ ರುಣವಾ ತೀರಿಸಲೋ ಯೆಂಬಂತೆ ಲಿಂಗಯ್ಯನ ಪರುವಾಗಿ ಮಾತನಾಡ ಲಾರಂಭಿಸಿದ್ದ. ''ಎಲ್ರೂ ಮಕ್ಳೆ. ಅವುನ ಕಾಯ್ಲೆ ನೋಡ್ಲಿಲ್ಲ ಕಸಾಲೆ ನೋಡ್ಲಿಲ್ಲ, ಹದಿನೈದು ದಿನದಿಂದೆ ಹಟ್ಟಿ ತಾವ ಬಂದು ಕಣ್ಣೀರು ಆಕ್ಕಂಡಿದ್ದ'' ಅಂತ ಸಾಹ್ಕಾರರು ತಲೆಯಾಡಿಸಿದ್ದರು; ''ಮಕ್ಕಳಿಗೇನು ಮಾಡ್ದ ಇಂವಾ. ಯೆಲ್ಲ ಅವುಗಳ ದಾರಿ ಅವೇ ನೋಡ್ಕಂಡೋ. ಹದಿನೈದು ದಿನದಿಂದೇನೇ ಇದೆ ಲಿಂಗಯ್ಯ ವಂದು ಸಾಬೂನಿನ ಯಿಸ್ಯಕ್ಕೆ ಮಾಯಣ್ಣನ ಬುರಡೆ ತೂತು ಆಗಾ ಹಂಗೆ ವಡದುಬುಟ್ಟಿದ್ದ. ವಯ್ಸಾದೋನೂಂತ ಸಮಾಧಾನ ಹೇಳಿ ಕಳುಸ್ದೆ. ಮಾಯಣ್ಣಂಗೆ ಬುದ್ಧಿ ಮಾತು ಅಂದು ಕಳುಸ್ದೆ. ವಯ್ಸಾತು ಅಂದ್ರೆ ಮಾಡಿದ್ದೆಲ್ಲಾ ಸರಿ ಅಂತಲ್ಲ ರಾಮಯ್ಯ. ಕಿರೀಕರ ಜೊತೆ ನಮ್ಗೂ ವಂದಷ್ಟು ವಂದಾಣ್ಕೆ ಬೇಕಾಯ್ತದೆ. ಮುನಿಸಿಕಂಡು ನಾಕ್‌ನಾಕ್ ದಿನಕ್ಕೂ ಹಟ್ಟಿ ಬುಟ್ಟಿ ಹೊಂಟೋಗನು. ಹಾದಿಬೀದಿ ಯೆಣವಾಗಿ ಬಿಟ್ಟಿದ್ರೆ ಈ ಹೆಂಡ್ತಿ ಮಕ್ಳು ನೆಮ್ಮದಿಯಿಂದ ಬಾಳಾಕಾಯ್ತಿತ್ತಾ? ಸದ್ಯ ಹಟ್ಟಿತಾವೇ ಸತ್ತೋನಲ್ಲ, ಹೆಂಡ್ತಿ, ಮಕ್ಳು ಪುಣ್ಯ ಅನ್ನಬೇಕು.''

ಈ ನಡುವೆ ಚಟ್ಟ ಹೂವಿನಿಂದ ಅಲಂಕೃತಗೊಂಡು ಒಂದು ಹದಕ್ಕೆ ಬಂದಿತ್ತು. ಇದೀಗ ಅಲ್ಲಿದ್ದವರು ಲಿಂಗಯ್ಯನ ಯೆಣವ ಯೆತ್ತಿಕೊಂಡು ಸ್ನಾನ ಮಾಡಿಸಲು ಹೊಂಟರು. ''ಬಿಸ್ನೀರು ಅಂದ್ರೆ ಪ್ರಾಣ. ಹಾಕಿ... ಇನ್ನೂ ನಾಕ್ ಚೆಂಬು ಹೆಚ್ಚಿಗ್ಗೇ ಹಾಕಿ'' ಅಂತ ಭಾಗ್ಯಮ್ಮ ಟವಲ್ಲು ಹಿಡದು ನಿಂತು ಆಣತಿ ಕೊಡುತ್ತಿದ್ದಳು. ''ಯೆಣಕ್ಕೇನು ಗೊತ್ತಾದದು ಸುಮ್ನ ನಿಂತ್ಕಾ ಭಾಗ್ಯಮ್ಮ'', ನಾಗಮ್ಮ ಚುಚ್ಚುವುದ ಮರೆತಿರನಿಲ್ಲ. ಯೆಣವ ಸಾಲಂಕೃತ ಅಲಂಕರಿಸಿ ವೊಸಬಟ್ಟೆ ಧರಿಸಿ ಚಟ್ಟದಾಗೆ ಕೂರಿಸಿ ಅಲ್ಲಾಡದಂಗೆ ಬಿಗುದು ಕಟ್ಟಿ ತಂದಿದ್ದ ಹೂಹಾರಗಳಿಂದ ಅಲಂಕರಿಸಿ ನೋಡಿರೆಂದು ಬಿಟ್ಟಾಗ ಯೆಲ್ಲರೂ ಯೆಣದತ್ತ ದೃಷ್ಟಿಹಾಯಿಸಿದ್ದರು. ''ಮೊಕದಾಗೆ ಕಳೆ ನ್ವಾಡು. ಯೆದ್ದ್ ಬರಹಂಗೆ ಅವ್ನೆ ಲಿಂಗಣ್ಣ. ಸಾಯಾ ವಯ್ಸೇನೂ ಅಲ್ಲ ಬುಡು'' ಅಂದಾನಯ್ಯನ ಮಾತ ನಂಬಿ 'ಹ್ಞೂಂ' ಅನ್ನಬೇಕೋ, ಬುಡಬೇಕೋ ಅಲ್ಲಿದ್ದ ಮಂದಿಗೆ ಗೊತ್ತಾಗ್‌ನಿಲ್ಲವಾಗಿ ಅವುರೆಲ್ಲ ಮೌನವಾಂತಿದ್ದರು.

ಮಾಯಣ್ಣನ ಮಗ ಸತೀಸ ಸ್ವಾಮಿಗೋಳ ಸ್ಕೂಟರಿನ ಮ್ಯಾಗೆ ಕರೆತಂದ. ಅವುರು ಯಾವುದೋ ಮದುವೆಯಾಗೆ ಬಿಜಿಯಾಗಿಬಿಟ್ಟಿದ್ದರಂತೆ. ಯೆಣದ ಮುಂದೆ ತಾವೊಂದು ಕುರ್ಚಿಯ ಆಕಿಸಿಕಂಡು ಕುಂತು ಯೆಣದ ಪಕ್ಕದಾಗೆ ಮತ್ತೊಂದು ಕುರ್ಚಿಯ ಆಕುಸಿ ಲಿಂಗಯ್ಯನ ಹೆಂಡಿರ ಕುಳ್ಳುರಿಸಿ ತಮ್ಮ ಪೂಜೆ, ಸಾಸ್ತ್ರಗಳ ಸುರು ಹಚ್ಚಿಗೊಂಡಿದ್ದರು. ''ಬುದ್ಧಿ, ಸರ‍್ಯಾಗಿ ಪೂಜ ಮಾಡಿ. ಲಿಂಗಯ್ಯ ನ್ಯಾರುಕ್ಕೆ ಕೈಲಾಸುಕ್ಕೇ ಹ್ವಾಗಬೇಕು'', ಅಂದಾನಯ್ಯನ ಮಾತಿಗೆ ಸ್ವಾಮಿಗೋಳು ನಕ್ಕಿದ್ದರು. 'ಕೈಲಾಸ ನರುಕ ಯೆಲ್ಲ ಇಲ್ಲೇ ಐತಿ ಅಂದಾನಯ್ಯ. ಲಿಂಗಯ್ಯ ಯಾರುಗ್ ತಾನೇ ಅನ್ಯಾಯ ಮಾಡೋನೆ ಯೇಳು. ನ್ಯಾರ ಸಿವನ ಸಾನಿದ್ಯಕ್ಕೇ ವೋಗ್ತಾನೆ ತಗಾ.''

ಮಕ್ಕಳು, ಅಳಿಯಂದಿರು, ಸ್ವಸೆಯರು, ಮೊಮ್ಮಕ್ಕಳು ಯೆಲ್ಲರ ಕೈನಾಗೂ ಲಿಂಗಯ್ಯ ಪೂಜೆ ಮಾಡಿಸಿಕೊಳ್ಳ ತೊಡಗಿದ್ದ. ಹೆಮ್ಮಕ್ಕಳು ತಾವು ತಂದಿದ್ದ ಹೂವ ಅವನ ಹೆಂಡಿರ ತಲೆಗೆ ತುರುಕಿ, ಅರಿಸಿನ ಕುಂಕುಮ ಹಚ್ಚಿ, ಬಳೆಗಳ ತೊಡುಸಿ ಗೋಳೆಂದು ಸ್ವರ ವರಡಿಸುತ್ತಿದ್ದರು. ಸೊಸೆಯರು ಅತ್ತೆಗೆ ತಂದಿದ್ದ ಸೀರೆಗಳ ಯೆತ್ತಿ ಯೆತ್ತಿ ಹಟ್ಟಿಯ ವಳಗ ಇಡುತ್ತಿದ್ದರು. ಸುತ್ತೇಳು ವೂರುಗಳಿಗೂ ಸುದ್ದಿ ಸಿಕ್ಕಿಬಿಡಲೆಂದು ಚಿಕ್ಕೀರಯ್ಯ ಪಟಾಕಿ ಹಚ್ಚಲು ಹೇಳಿದ್ದ. ಆ ಘನಕಾರ್ಯವ ಕೈಗೊಂಡವನು ನಾಗಮ್ಮನ ಅರೆಹುಚ್ಚ ಮಗನೇ?! ಅಲ್ಲಿ ನೆರೆದಿರುವ ಜನರು ತನ್ನರಿವಿಗೇ ಯಿಲ್ಲದಂಗೆ ಅವನು ಕೈಯ್ಯಲ್ಲೇ ಪಟಾಕಿ ಹಿಡದು ಕೊಳ್ಳಿಯಿಂದ ತಾಕಿಸಿ ಎಲ್ಲೆಂದರಲ್ಲಿ ಎಸದು ಸುದ್ದಿ ಕೊಡತೊಡಗಿದ್ದ. ವಂದು ಪಟಾಕಿ ಶಾಮಿಯಾನದ ಮ್ಯಾಲೆ ಬಿದ್ದು ಬೆಂಕಿ ಅತ್ತಿ ಕವರತೊಡಗಿತ್ತು. ಅಲ್ಲಿದ್ದವರೆಲ್ಲ ಯೇಳುವುದಕ್ಕೂ ಚಿಕ್ಕೀರಯ್ಯ ವೂಟ ರೆಡಿಯಿದೆಯೆಂದು ಅನೌನ್ಸು ಮಾಡುವುದಕ್ಕೂ ತಾಳೆಯಾಗಿ ಅಲ್ಲಿದ್ದವರೆಲ್ಲ ಗುಂಪುಗುಂಪಾಗಿ ಹಿತ್ತಲಿನ ಪೆಂಡಾಲಿನತ್ತ ಧಾವಿಸಿ ಬಿಟ್ಟಿದ್ದರು. ಮಾಯಣ್ಣ ಪೆಂಡಾಲಿಗೆ ನೀರ ಎರಚಿ ಎರಚಿ ಬೆಂಕಿ ನಂದಿಸಿದ್ದ. ಲಿಂಗಯ್ಯನ ಯೆಣದ ಮುಂದೀಗ ಯಾರೂ ಇಲ್ಲದಂತಾಗಿದ್ದರು. ಹಿರೇಮಗಳು ಅವ್ವನನ್ನು ಸಂಬಾಳಿಸುತ್ತಿದ್ದಳು; ''ನಿಂಗೊಂದು ತುತ್ತು ವುಣ್ಣಿಸ್ ಬುಡ್ತಿನಿ ವುಣ್ಣ್‌ಕಂಡು ಬುಡವ್ವ.''

ಯೆಣಕ್ಕೆ ಬಂದವರೆಲ್ಲಾ ಉಂಡು ಬರುವಷ್ಟರಲ್ಲಿ ಸೂರ್ಯಸ್ವಾಮಿ ಕೆಂಪುರೂಪ ತಾಳಿ ಪಡುವಣದಲ್ಲಿ ಮುಳುಗಲಾರಂಭಿಸಿದ್ದ. ''ವರದ್ರಪ್ಪಾ ಲೇಟಾಗೋಯ್ತದೆ. ಪೆಟ್ರೋಮ್ಯಾಕ್ಸೂ ತಗಂಬುಡಿ'' ಅಂದಾನಯ್ಯ ಅವಸರ ಪಡಿಸಿದ್ದ. ಲಿಂಗಯ್ಯನನ್ನು ಹೊತ್ತ ಚಟ್ಟವನ್ನೆತ್ತಿಕೊಂಡ ನಾಕುಜನ ಹಟ್ಟಿಯತ್ತ ಮುಖ ಮಾಡಿ ಹೊಲದತ್ತ ನಡೆದಿದ್ದರು. 'ಲಿಂಗಣ್ಣಂಗೆ ಜೈ' ಎಂಬೊಂದು ಜಯಕಾರದಲ್ಲಿ ಸಂಬಂಧಿಕರು ಕ್ವಟ್ಟ ಕೊನೆಯದಾಗಿ ಹೊರಡಿಸಿದ ನೋವಿನ ದನಿ ಮುಳುಗಿಹೋಗಿತ್ತು. ಹೆಣದ ಮೆರವಣಿಗೆ ಹೊಲಗದ್ದೆಗಳ ಹಾಯುತ್ತಾ ಲಿಂಗಯ್ಯನ ಹೊಲವನ್ನು ತಲುಪಿ ನಿಂತಿತ್ತು. ಲಿಂಗಯ್ಯ ತನಗೆ ಬುದ್ಧಿ ತಿಳಿದಾಗಿನಿಂದ ಆ ಮಣ್ಣೊಡನೆ ಮಣ್ಣಾಗಿ ಹೋಗಿದ್ದ ಹೊಲ. ''ನಾ ಸತ್ತಮ್ಯಾಗೆ ಪಾಲು ಪರೀಕತ್ತು ಮಾಡ್ಕಳ್ಳಿ. ಅಲ್ಲಿಗಂಟಾ ಹೊಲದ್ ವಂದ್ ಮಣ್ಣ್ ಇಂಚೇ ಮ್ಯಾಲೂ ಯಾರ್ಗೂ ಅಧಿಕಾರವಿಲ್ಲ'' ಮಣ್ಣ ಮ್ಯಾಗೆ ಅಂಗ್ಯೆ ಕುಟ್ಟಿ ರೋಸದಿಂದ ನುಡುದಿದ್ದ ಹೊಲ, ಶಾಂತರಾಜು ಮೋಸದಿಂದ ಬರುಸಿ ಕೊಂಡುಬುಟ್ಟಿದ್ದ ಹೊಲ!!

ಯೆಣವ, ಅದಾಗಲೆ ಅಗೆದಿದ್ದ ಗುಂಡಿ ಬಳಿ ಇಟ್ಟು ಪಕ್ಕದಾಗೆ ಹೆಂಡಿರ ಕೂರಿಸಿ ಬುದ್ಧಿಯೋರು ಮತ್ತೊಮ್ಮೆ ಪೂಜೆಗಿಟ್ಟುಕೊಂಡರು. ಎಂದೂ ಮಾವನನ್ನು ಮುಟ್ಟದಿದ್ದ ಸ್ವಸೆಯರ ಕೈಗಳು ಅವುರ ಪಾದಗಳ ಸ್ಪರ್ಶಿಸಿದುವು. 'ನೋಡ್ಕಳ್ಳಿ ನೋಡ್ಕಳ್ಳಿ. ಲಿಂಗಯ್ಯನ ಮೊಕಾ ಮತ್ತೆಂದೂ ಸಿಗಾಕಿಲ್ಲ' ನಾಗಮ್ಮ ಪೂಜೆ ಮಾಡಲು ಬಂದೋರಿಗೆ, ಹೋದೋರಿಗೆ ನಿರಂತರ ತಾಕೀತು ಮಾಡುತ್ತಲೇ ನಿಂತಳು. ಇಲ್ಲಿ ಗಂಟಾ ಪೂಜೆ ಪುರಸ್ಕಾರವೆಲ್ಲ ತಮ್ಮೊಬ್ಬರ ಹಕ್ಕು ಎಂದೇ ಕಾರ್ಯ ನಿರುವಹಿಸಿದ್ದ ಸ್ವಾಮಿಗಳು ಲಿಂಗಯ್ಯನ ಹೆಂಡಿರ ಬಳೆ ಒಡೆಯುವ ಕಾರ್ಯಕ್ಕೆ, ಅದಾಗಲೇ ಬಳೆ ಹೊಡೆಸಿಕೊಂಡವರ ಆಹ್ವಾನಿಸಿದ್ದರು. ಆ ಹೆಮ್ಮಕ್ಕಳ ಗುಂಪಾದರೋ ಆ ಹೆಂಡಿರ ತಮ್ಮ ಸಮುದಾಯಕ್ಕೆ ಸೇರಿಸಿಕಳ್ಳಲು ಬಹಳವೇ ಕಾತುರರಾಗಿ ಆತುರದಿಂದ ವೊಬ್ಬರ ಮ್ಯಾಲೆ ವೊಬ್ಬರು ಬಿದ್ದು ಲಿಂಗಯ್ಯನ ಹೆಂಡಿರನ್ನು ಕವಿದುಕೊಂಡಿತ್ತು. ಮತ್ತೆ ಅವುರು ಹಿಂದೆ ಸರಿದಾಗ ಆ ಹೆಂಡಿರು ಹಿರೇಮಗಳ ಹೆಗಲಮ್ಯಾಲೆ ಸಂಪೂರ್ಣ ವಾಗಿ ಉಂಟಿಕೊಂಡು ಬುಟ್ಟಿತ್ತು. ಹೆಮ್ಮಕ್ಕಳು ಅವುಳಲ್ಲಿ ತಮ್ಮ ಗುರುತಿಸಿಕೊಂಡವರಾಗಿ 'ಹೋ' ಎಂದು ದನಿ ತೆಗದು ಆಕ್ರಂದನ ಮಾಡತ್ವಡಗಿದ್ದರು. ಲಿಂಗಯ್ಯನನ್ನು ಗುಂಡಿಗೆ ಇಳುಸಿ ವೊಬ್ಬೊಬ್ಬರಾಗಿ ಮಣ್ಣು ಕ್ವಟ್ಟು ಹೊಲದಿಂದ ನಿರ್ಗಮಿಸತ್ವಡಗಿದರು. ಕ್ವನೆಗೆ ಲಿಂಗಯ್ಯನ ಗಂಡೈಕಳುಗಳು ಉಳಕಂಡಿದ್ದವು. ಹೆಣ್ಣೈಕ್ಕಳ ಜ್ವತೇನಾಗೆ ಅವ್ವನನ್ನೂ ಕಳುಹಿಸಿಬುಟ್ಟಿದ್ದರು. ಉಗಾದಿ ಅಮಾಸೆಯ ಕತ್ತಲು ಸುತ್ತಲೂ ಕವಿದು ಕೊಂಡಿತ್ತು. ಪೆಟ್ರೋಮ್ಯಾಕ್ಸಿನ ಬೆಳಕಲ್ಲಿ ಗಂಡೈಕಳುಗಳು ಉಳಿದಿದ್ದ ಮಣ್ಣ ಎಲ ಕೊಟ್ಟಿನಿಂದ ಎಳದು ಎಳದು ಹಾಕತೊಡಗಿದ್ದರು.

ಆಕಾಸದಾಗೆ ನೆಲುವ ನೋಡಿ ನಗುವಂಗೆ ಚಿಕ್ಕೆಗಳು ಮಿನುಗುತ್ತಿದ್ದವು.

**ಎಂ. ಎಸ್. ವೇದಾ**
'ಅಲಂಪು', ನಂ. ೧೨೫೮, ಪಡುವಣ ರಸ್ತೆ, ೪ನೇ ಕ್ರಾಸ್, ೪ನೇ ಹಂತ
ಟಿ. ಕೆ. ಬಡಾವಣೆ, ಕುವೆಂಪುನಗರ, ಮೈಸೂರು - ೫೭೦ ೦೨೩

ಸುನಾಮಿ ಪರ್ವತದಲೆ
ಕಂಡ ಮೇಲೆ
ಪ್ರಕೃತಿಯ ಶಕ್ತಿ ಅರಿವಾಗಲಿ;
ತಿಳಿದಿರಲಿ....
ಮಾನವ ಶಕ್ತಿ
ಹನಿ- ಕಂಬನಿಯಷ್ಟೆ ಬಲಶಾಲಿ!

• ಗೋಪಿ •
ಹಿರೇಬೆಟ್ಟು

## ಡಾ|| ನಾರಾಯಣಸ್ವಾಮಿ ಕೆ. ವೈ.

ಎಲ್.ಬಿ. ಅವರ ಕೋಪ ಸಾಂದರ್ಭಿಕವಾದುದ್ದು ಅಲ್ಲ ಎಂಬುದು ಅವರ ಶತ್ರುಗಳಿಗೂ ಗೊತ್ತಿರುವ ಸಂಗತಿ. ಲೋಕಕಲ್ಯಾಣ ಮತ್ತು ಜೀವಕಾರುಣ್ಯಕ್ಕೆ ಅಡ್ಡಿಪಡಿಸುತ್ತಿರುವ ಅಧಿಕಾರ ವ್ಯವಸ್ಥೆಗಳ ಬಗೆಗೆ ಅವರಿಗೆ ಅತೀವ ಸಿಟ್ಟಿತ್ತು. ಅರವತ್ತೈದು ವರ್ಷಗಳ ಸ್ವಾತಂತ್ರ್ಯದ ನಂತರವೂ ಭಾರತೀಯ ಸಮಾಜವು ಕನಿಷ್ಠ ಬಡವರ ಹಸಿವನ್ನು ಸುಧಾರಿಸದ ದುಃಸ್ಥಿತಿಯ ಬಗ್ಗೆ ಅದನ್ನು ಪರೋಕ್ಷವಾಗಿ ಬಲಗೊಳಿಸುತ್ತಿರುವ ನವಪುರೋಹಿತಶಾಹಿ ಮತ್ತು ರಾಜಕೀಯ ಅವಕಾಶವಾದಿ ನಡವಳಿಕೆಯ ಬಗೆಗೆ ಅವರು ಕನಲಿ ಹೋಗಿದ್ದರು. ಅದರ ಪರಿಣಾಮವೆಂಬಂತೆ ಕತ್ತಲ ರಾಕ್ಷಸರು ಎಂಬ ಪುಸ್ತಕವನ್ನು ಪ್ರಕಟಿಸಿದ್ದರು. ಎಂದೂ ಯಾವುದೇ ಹುದ್ದೆ, ಆಸ್ತಿ , ಕೀರ್ತಿಗಳಿಂದ ಮಾರು ದೂರವಿದ್ದ ಕನ್ನಡದ ಜಾಗ್ರತ ಪ್ರಜ್ಞೆಯ ಪ್ರತೀಕದಂತೆ ಬಾಳುತ್ತಿದ್ದ ಎಲ್. ಬಸವರಾಜು ಒಂದು ದಿನ ಮಂಚದಿಂದ ಏಳಲು ಹೋಗಿ ಬಿದ್ದು ತೊಡೆ ಮುರಿದುಕೊಂಡರು. ಅದರ ನೆಪವಾಗಿ ಹಾಸಿಗೆ ಹಿಡಿದವರಿಗೆ ತಾನು ಬದುಕಿದ್ದರೆ ಇತರರ ಹಂಗಿನಲ್ಲಿರಬೇಕು, ಇಂತಹ ಅವಲಂಬಿತ ಬದುಕು ಬೇಡವೆಂದು ತಾವೇ ಕಟುವಾಗಿ ವಿಮರ್ಶಿಸುತ್ತಿದ್ದ ವ್ಯವಸ್ಥೆಗಳನ್ನು, ಅಷ್ಟೇ ತೀವ್ರವಾಗಿ ಪ್ರೀತಿಸುತ್ತಿದ್ದ ಲೋಕವನ್ನು ತೊರೆದು ಮಣ್ಣುಗೂಡಿದ್ದಾರೆ.

# ಲೋಕವಿರೋಧಿ ಗುರುವಿನ ಪರಿನಿರ್ವಾಣ



**ಎಲ್.** ಬಸವರಾಜು ಅವರು ತಮ್ಮ ತೊಂಬತ್ತಮೂರರ ವಯಸ್ಸಿನಲ್ಲಿ ತೀರಿಕೊಂಡಿದ್ದಾರೆ. ಜಿನ ಸಮಣರು ಸಲ್ಲೇಖನದ ಮೂಲಕ ಸಾವನ್ನು ದಿಟ್ಟವಾಗಿ ಆಹ್ವಾನಿಸುವ ರೀತಿಯಲ್ಲಿಯೇ ಎಲ್.ಬಿ. ಅವರು ಕೂಡ ತಮ್ಮ ಸಾವನ್ನು ತಾವೇ ಆಹ್ವಾನಿಸಿಕೊಂಡರು. ಅವರು ಕಳೆದ ಎರಡು ತಿಂಗಳ ಹಿಂದೆಯಷ್ಟೆ 'ಹಂಪೆಯ ಹರಿಹರ ಕಂಡರಿಸಿದ ಭಕ್ತಿ, ಜ್ಞಾನ, ವೈರಾಗ್ಯದ ನುಡಿಶಿಲ್ಪಗಳು' ಎಂಬ ಪುಸ್ತಕವನ್ನು ಪ್ರಕಟಿಸಿದರು. ಅವಿಶ್ರಾಂತ ಶ್ರಮಜೀವಿಯಾಗಿದ್ದ ಅವರು ಮುಗಿಸಬೇಕಿದ್ದ ಕೆಲಸಗಳ ಪಟ್ಟಿ ಇನ್ನೂ ದೊಡ್ಡದಿತ್ತು. ಆ ಎಲ್ಲಾ ಕೆಲಸಗಳನ್ನು ಪೂರ್ಣಗೊಳಿಸುವವರೆಗೂ ಎಲ್.ವಿ. ವಿರಮಿಸುವುದಿಲ್ಲ ಎನ್ನುವುದು ಅವರ ಅಭಿಮಾನಿಗಳ ನಿರೀಕ್ಷೆಯಾಗಿತ್ತು. ಆದರೆ ಈ ನಂಬಿಕೆಯನ್ನು ಹುಸಿಗೊಳಿಸಿ ಎಲ್.ಬಿ. ಅವರು ಲೇಖನಿಯನ್ನು ಕೆಳಗೆ ಇಟ್ಟಿದ್ದಾರೆ. ಇಪ್ಪತ್ತನೆಯ ಶತಮಾನದಲ್ಲಿ ಕನ್ನಡ ವಿವೇಕವನ್ನು ರೂಪಿಸಿದ ತೆರೆ ಮರೆಯ ಮಹಾನ್ ಪ್ರತಿಭೆಗಳಲ್ಲಿ ಎಲ್.ಬಿ. ಅವರೂ ಒಬ್ಬರು. ಹುತ್ತಗಟ್ಟಿದ ಚಿತ್ತದ ರೂಪಕದಂತಿದ್ದ ಬಸವರಾಜು ಅವರು ಗುರು ಶ್ರೀ ಕುವೆಂಪು ಅವರ ವಿಚಾರ ಮತ್ತು ಬದುಕಿನಿಂದ ತೀವ್ರವಾಗಿ ಪ್ರಭಾವಿತರಾಗಿದ್ದರು. ತಮ್ಮ ಬದುಕಿನುದ್ದಕ್ಕೂ ಕುವೆಂಪು ಅವರನ್ನು, ಬದುಕಿನ ಮಾದರಿಯಾಗಿಟ್ಟುಕೊಂಡು ಬರೆದರು, ಬದುಕಿದರು. ಕುವೆಂಪು ತಮ್ಮ ವೈಚಾರಿಕ ಲೇಖನಗಳಲ್ಲಿ ಪ್ರಸ್ತಾಪಿಸುತ್ತಿದ್ದ 'ವಿಚಾರ ಕ್ರಾಂತಿ' ಮತ್ತು 'ಆತ್ಮಶ್ರೀಗಾಗಿ ನಿರಂಕುಶಮತಿಗಳಾಗಿ' ಎನ್ನುವ ತತ್ವಗಳನ್ನು ತಮ್ಮ ಬಾಳಿಗೆ ಅಳವಡಿಸಿಕೊಂಡಿದ್ದರು. ಕೊನೆಯ ಉಸಿರಿನವರೆಗೂ ಲೋಕವಿರೋಧಿಯಂತೆ ಬದುಕಿದ ಎಲ್.ಬಿ. ಅವರು ಕುವೆಂಪು ಅವರಿಗೆ ತಕ್ಕ ಶಿಷ್ಯರಾಗಿದ್ದರು ಮತ್ತು ಲೋಕ ವಿರೋಧಿಗಳಿಗೆ ಗುರುವಾಗಿದ್ದರು.

ಕೋಲಾರ ಜಿಲ್ಲೆಯ (ಈಗಿನ ಚಿಕ್ಕಬಳ್ಳಾಪುರ ಜಿಲ್ಲೆಯ) ಗೌರಿಬಿದನೂರು ತಾಲೂಕಿನ ಇಡಗೂರಿನಲ್ಲಿ ೧೯೧೯ರಲ್ಲಿ ಅತ್ಯಂತ ಬಡಕುಟುಂಬದಲ್ಲಿ ಹುಟ್ಟಿದ ಎಲ್.ಬಿ. ಅವರ ಅಕ್ಷರ ಪಯಣ ಒಂದು ಯಕ್ಷ ಕತೆಯಂತಿದೆ. ಇಡಗೂರು, ತುಮಕೂರಿನ ಸಿದ್ಧಗಂಗೆ, ಹಾಗೂ ಮೈಸೂರು ವಿ.ವಿ.ಯಲ್ಲಿ ವಿದ್ಯಾಭ್ಯಾಸವನ್ನು ಮುಗಿಸಿದರು. ಆರಂಭದಲ್ಲಿ ಎಲ್.ಬಿ. ಅವರು ಕೆಲ ಕಾಲ ದಾವಣಗೆರೆಯಲ್ಲಿ ಅಧ್ಯಾಪಕ ವೃತ್ತಿಯನ್ನು ನಡೆಸಿದರು. ಆ ಕಾಲದಲ್ಲಿಯೇ ಶ್ರೀಮತಿ ವಿಶಾಲಾಕ್ಷಿ ಅವರೊಡನೆ ವಿವಾಹವಾದರು. ನಂತರದಲ್ಲಿ ಮೈಸೂರು ವಿಶ್ವವಿದ್ಯಾಲಯಕ್ಕೆ ಅಧ್ಯಾಪಕರಾಗಿ ನೇಮಕಗೊಂಡು, ಮೂವತ್ತೈದು ವರ್ಷಗಳಿಗೂ ಮಿಗಿಲು ಅಧ್ಯಾಪನ, ಸಂಶೋಧನೆ, ಗ್ರಂಥ ಸಂಪಾದನೆಯ ಕಾಯಕವನ್ನು ಕಡು ಪ್ರಾಮಾಣಿಕತೆಯಿಂದ ನಿರ್ವಹಿಸಿ ಸಾಹಿತ್ಯ ಅನುಸಂಧಾನದ 'ಬಸವರಾಜಮಾರ್ಗ'ವನ್ನು ನಿರ್ಮಾಣ ಮಾಡಿದ್ದರು. ಎಪ್ಪತ್ತೊಂಬತ್ತರಲ್ಲಿ ನಿವೃತ್ತರಾದ ಮೇಲೆ ಶಾಪ ವಿಮೋಚಿತರಂತೆ ಕಾವ್ಯರಚನೆಯನ್ನು ಕೈಗೊಂಡು 'ಠಾಣಾಂತರ-ಜಾಲರಿ-ಡೊಂಕುಬಾಲದ ನಾಯಕರು-ತುಳಿಯುವ ಕಾಲಿಗೆ ಬಿದ್ದೀರಾ' ಮೊದಲಾದ ಐದು ಕವನ ಸಂಕಲನಗಳನ್ನು ಹೊರತಂದು ಅಚ್ಚರಿಯನ್ನು ಮೂಡಿಸಿದರು.

ಬಸವರಾಜು ಅವರು ಕನ್ನಡ ಪ್ರಾಚೀನ ಸಾಹಿತ್ಯವನ್ನು ಆಧುನಿಕ ಅಗತ್ಯಗಳಿಗೆ ತಕ್ಕ ಹಾಗೆ ಮೂರು ಬಗೆಯಲ್ಲಿ ಅಣಿಗೊಳಿಸಿದ್ದಾರೆ. ಅಂದರೆ ಹಳೆಗನ್ನಡ ಪಠ್ಯಗಳನ್ನು ಪ್ರಜಾಸತ್ತಾತ್ಮಕಗೊಳಿಸುವ ಕಾರ್ಯವನ್ನು ಕೈಗೊಂಡರು. ಮೊದಲನೆಯದು ಲಭ್ಯವಿರುವ ಪಠ್ಯಗಳನ್ನು, ಆಕರಗಳನ್ನು ಆ ಕಾಲದ ಸಾಂಸ್ಕೃತಿಕ ವಿದ್ಯಮಾನಗಳ ಹಿನ್ನೆಲೆಯಲ್ಲಿ ಗ್ರಹಿಸಿ ಅರ್ಥಪೂರ್ಣ ಪಠ್ಯಗಳನ್ನು ಸಿದ್ಧಪಡಿಸಿಕೊಟ್ಟಿದ್ದಾರೆ. ಕನ್ನಡದಲ್ಲಿ ಈ ಬಗೆಯ ಸಂಪಾದನಕಾರ್ಯ ವಿಪುಲವಾಗಿ ನಡೆದಿದೆ. ಆದರೆ ಈ ವಿಧಾನವು ಕೇವಲ ಸಂಶೋಧಕರಿಗೆ, ಪಂಡಿತರಿಗೆ ಮಾತ್ರ ಉಪಯುಕ್ತವಾಗಿರುವುದನ್ನು ಅರಿತ ಎಲ್.ಬಿ. ಅವರು ನಂತರದಲ್ಲಿ ಹಳೆಗನ್ನಡ ಪಠ್ಯಗಳನ್ನು ಜನಬಳಕೆಗೆ ಅನುವಾಗುವಂತೆ ಗುಣ ನಷ್ಟಗೊಳಿಸದೆ ರೂಪಾಂತರಿಸುವ ಕಾರ್ಯವನ್ನು ಕೈಗೊಂಡರು. ಎರಡನೆಯದಾಗಿ ಹಳೆಗನ್ನಡದ ಕಾವ್ಯಗಳನ್ನು ಪದವಿಭಾಗಿಸಿ ಬರೆದು ಮುದ್ರಿಸುವ ಮಹತ್ತರಕಾರ್ಯ ಮಾಡುವ ಮೂಲಕ ಹಳೆಗನ್ನಡದ ಪಠ್ಯಗಳನ್ನು ಮೂರು ಮತ್ತು ನಾಲ್ಕನೆಯ ತಲೆಮಾರಿನ ಕನ್ನಡ ಅಧ್ಯಾಪಕರು ಸುಲಭವಾಗಿ ಓದಲು ಹಾಗೂ ಅರಿಯಲು ಅನುವಾಗುವ ಸರಳ ಪಠ್ಯಗಳನ್ನು ನಿರ್ಮಾಣ ಮಾಡಿಕೊಟ್ಟಿದ್ದಾರೆ. ಇದರಿಂದ ಹಳೆಗನ್ನಡ ಕೃತಿಗಳನ್ನು ಓದುವುದನ್ನೇ ಒಂದು ಕೌಶಲ್ಯವಾಗಿ ಪರಿಗಣಿಸಿ, ಕೆಳ ಮತ್ತು ಗ್ರಾಮಾಂತರ ಸಮಾಜದ ವಿದ್ಯಾರ್ಥಿಗಳನ್ನು ನಮ್ಮ ಶಿಕ್ಷಣ ಪದ್ಧತಿಯು ಕೀಳರಿಮೆಗೆ ತಳ್ಳಿತ್ತು. ಟೀಕು ಮತ್ತು ತಾತ್ಪರ್ಯಗಳ ಕಂದಕವನ್ನು ದಾಟಲು ಬಸವರಾಜು ಅವರು ರೂಪಿಸಿ ಪ್ರಕಟಿಸಿದ ಈ ಬಗೆಯ ಪದವಿಭಜನೆಯ ಪಠ್ಯಗಳಿಂದಾಗಿ ಕನ್ನಡ ಬಲ್ಲವರೆಲ್ಲಾ ಹಳೆಗನ್ನಡ ಕೃತಿಗಳನ್ನು ಸ್ವತಂತ್ರವಾಗಿ ಓದುವಂತಾಗಿದೆ. ಅಲ್ಲದೆ ಐಚ್ಛಿಕ ಪದವಿ ಮತ್ತು ಸ್ನಾತಕೋತ್ತರ ಕನ್ನಡ ತರಗತಿಗಳ ಪಾಠದ ಮಟ್ಟಿಗೆ ಇದು ಕ್ರಾಂತಿಕಾರವಾದ ಕ್ರಿಯೆಯೇ ಆಗಿದೆ. ಮೂರನೆಯದಾಗಿ ಕನ್ನಡದ ಮುಂಬರುವ ತಲೆಮಾರುಗಳು ಕನ್ನಡ ಸಾಹಿತ್ಯ ಚರಿತ್ರೆಯ

ಸಾರ್ವಕಾಲಿಕ ಶ್ರೇಷ್ಠ ಪುಸ್ತಕಗಳಾದ ಆದಿಪುರಾಣ, ಪಂಪಭಾರತ, ಗದಾಯುದ್ಧ, ಹರಿಶ್ಚಂದ್ರಕಾವ್ಯ ಮುಂತಾದವುಗಳ ಓದಿನ ಸುಖದಿಂದ ವಂಚಿತವಾಗಬಾರದೆಂದು, ಹಳೆಗನ್ನಡದ ಎಲ್ಲಾ ಪ್ರಮುಖ ಕೃತಿಗಳನ್ನು ಸರಳ ಕಥಾರೂಪಗಳಿಗೆ ಪರಿವರ್ತಿಸುವ ಕಾರ್ಯವನ್ನು ಮಾಡಿದರು. ಈ ಕಥಾ ನಿರೂಪಣೆಗಳಿಂದಾಗಿ ಆದಿಕವಿ ಪಂಪನ ಆದಿಯಾಗಿ ದೇವನೂರ ಮಹದೇವ ಅವರ ಕುಸುಮಬಾಲೆಯವರೆಗೆ ಸಾವಿರ ವರ್ಷಗಳ ಕನ್ನಡ ಸಾಹಿತ್ಯದ ಪ್ರಮುಖ ಕೃತಿಗಳು ಮಧ್ಯವರ್ತಿಗಳ ಸಹಾಯವಿಲ್ಲದೆ ಸಾಮಾನ್ಯ ಓದುಗ ಸ್ನೇಹಿಯಾಗಿವೆ. ಇದು ಕನ್ನಡ ಸಂಸ್ಕೃತಿಗೆ ಎಲ್.ಬಿ. ಅವರು ಕೊಟ್ಟಿರುವ ಬಹು ದೊಡ್ಡ ಕೊಡುಗೆಯಾಗಿದೆ. ಕನ್ನಡ ಪುಸ್ತಕ ಪ್ರಾಧಿಕಾರ ಪ್ರಕಟಿಸಿದ ಪಂಪನ ವಿಕ್ರಮಾರ್ಜುನ ವಿಜಯದ ಕಥಾನಿರೂಪಣೆಯ ಐದು ಸಾವಿರ ಪ್ರತಿಗಳು ಪ್ರಕಟವಾದ ತಿಂಗಳೊಳಗೆ ಮಾರಾಟವಾದ ದಾಖಲೆಯು ಈ ಕಥಾನಿರೂಪಣೆ, ಜನಪ್ರಿಯತೆಗೆ ಸಾಕ್ಷಿಯಾಗಿದೆ.

ಎಲ್.ಬಿ. ಅವರ ಈ ಮಹತ್ತರ ಕಾರ್ಯವು ಹಳೆಗನ್ನಡ ಪಠ್ಯಗಳ ಮೇಲಿನ ಶತಮಾನಗಳಿಂದಲೂ ಸಾಗಿಬಂದಿದ್ದ ಜಾತಿಯಾಧಾರಿತ ಬೌದ್ಧಿಕ ಯಾಜಮಾನ್ಯವನ್ನು ಒಡೆದು ಹಾಕುವ ಕೆಲಸ ಮಾಡಿತು. ಈ ಕೆಲಸದಿಂದ ಸಾಂಪ್ರದಾಯಿಕ ಪಂಡಿತರ ಕೆಂಗಣ್ಣಿಗೆ ಅವರು ಗುರಿಯಾಗಬೇಕಾಯಿತು. ಎಲ್.ಬಿ. ಅವರ ಈ ಪ್ರಯತ್ನಗಳ ಹಿಂದೆ ನಮ್ಮ ಚರಿತ್ರೆಯನ್ನು ನಾವು ನಮಗೆ ಬೇಕಾದಂತೆ ರೂಪಿಸಿಕೊಳ್ಳಬೇಕು ಎಂಬ ಕುವೆಂಪು ಅವರ ಒತ್ತಾಸೆಯಿರುವಂತೆ, ನಾವು ಚರಿತ್ರೆಯನ್ನು ಅನುಸಂಧಾನಿಸಲು ಅನುಸರಿಸಬೇಕಿರುವ ವಿನ್ಯಾಸವೊಂದು ರೂಪಗೊಂಡಿರುವುದು ಕಂಡುಬರುತ್ತದೆ. ಇದುವರೆಗೆ ಅರವತ್ತಕ್ಕೂ ಹೆಚ್ಚು ಕೃತಿಗಳನ್ನು ಪ್ರಕಟಿಸಿರುವ ಬಸವರಾಜು ಅವರು ಅಧಿಕಾರ, ಸ್ವಜನ ಪಕ್ಷಪಾತ, ಸ್ವಾರ್ಥ, ಕಪಟತನ ಮತ್ತು ಜಾತಿ ಪ್ರೇಮವನ್ನು ಕಂಡರೆ ಉರಿದು ಬೀಳುತ್ತಿದ್ದರು. ಎಲ್.ಬಿ. ಅವರು ನಡೆನುಡಿಗಳಲ್ಲಿ ಸಾಮ್ಯತೆ ಸಾಧಿಸಿದ್ದ ಅಪರೂಪದ ಖಡಕ್ ಮನುಷ್ಯರಾಗಿದ್ದರು.

ಎಲ್.ಬಿ. ಅವರಿಗೆ ನಾವು ಕೃತಜ್ಞರಾಗಿರಬೇಕಾದ ಇನ್ನೆರಡು ಸಂಗತಿಗಳೆಂದರೆ ಅಲ್ಲಮನ ವಚನಚಂದ್ರಿಕೆಯನ್ನು ಅವರು ರೂಪಿಸಿದ್ದು ಅಲ್ಲದೆ ಬುದ್ಧಚರಿತೆ ಹಾಗೂ ಸೌಂದರಾನಂದ ಕೃತಿಗಳನ್ನು ಕನ್ನಡಕ್ಕೆ ತಂದಿದ್ದು. ಇಂದಿಗೂ ಕಾವ್ಯ ಕೌತುಕವಾಗಿರುವ ಅಲ್ಲಮ ಪ್ರಭುಗಳನ್ನು ಅರಿಯಲು ತೊಡಗುವ ಯಾರೇ ಆಗಲಿ ವಚನಚಂದ್ರಿಕೆಯನ್ನು ಓದದೆ ಅಲ್ಲಮನ ಜೊತೆಗೆ ಸಂವಾದಿಸಲು ಸಾಧ್ಯವೇ ಇಲ್ಲ ಎನ್ನುವುದು ಅದರ ಮಹತ್ವವನ್ನು ಮನಗಾಣಿಸುತ್ತದೆ. ಇದು ಅರವತ್ತರ ದಶಕದಲ್ಲಿ ತಮ್ಮ ಡಿ.ಲಿಟ್. ಪದವಿಗೆ ಸಿದ್ಧಪಡಿಸಿದ ಕೃತಿಯಾಗಿದೆ. ಎಲ್.ಬಿ. ಅವರು ಭಾರತದ ವಿವಿಧ ಜ್ಞಾನ ಪರಂಪರೆಗಳನ್ನು ತಮ್ಮ ಅವಿರತ ಪರಿಶ್ರಮದಿಂದ ಅಭ್ಯಾಸ ಮಾಡಿ ಆ ಹಿನ್ನೆಲೆಯಲ್ಲಿ ವಚನ ಚಳುವಳಿ ಹಾಗೂ ವಚನಗಳನ್ನು ಓದುವ ಹಲವು ದಾರಿಗಳನ್ನು ಒದಗಿಸಿಕೊಟ್ಟಿದ್ದಾರೆ. ಅವರು ತಾವು ಸಿದ್ಧಪಡಿಸಿದ ವೈಚಾರಿಕ ಚೌಕಟ್ಟುಗಳನ್ನು ಪ್ರಯೋಗ ಮಾಡಿಯೂ ತೋರಿಸಿದ್ದಾರೆ. ಬಸವಣ್ಣ, ಅಕ್ಕ, ಪ್ರಭುದೇವರ ಷಟ್‌ಸ್ಥಲ ವಚನಗಳು, ಸಿದ್ಧರಾಮ, ಸರ್ವಜ್ಞ, ಶಿವದಾಸ ಗೀತಾಂಜಲಿ ಮತ್ತು ಕೆಳವರ್ಗದ ವಚನಕಾರರ ವಚನಗಳನ್ನು ವಿವಿಧ ಮೂಲಗಳಿಂದ ಸಂಗ್ರಹಿಸಿ ನಿಜ ಪಾಠಗಳನ್ನು ನಿರ್ಣಯಿಸಿ ಕೊಟ್ಟಿದ್ದಾರೆ. ಹಾಗೆಯೇ ಶೂನ್ಯ ಸಂಪಾದನೆಗಳನ್ನು ತಮ್ಮ ತೀಕ್ಷ್ಣ ವಿಶ್ಲೇಷಣೆಗಳಿಂದ ಅಧ್ಯಯನ ಮಾಡಿ ಸಿದ್ಧರಾಮನ ದೀಕ್ಷಾ ಪ್ರಸಂಗ ಮುಂತಾದ ಹುಸಿ ನುಸುಳ ಪ್ರಸಂಗಗಳನ್ನು ಕೈಬಿಟ್ಟು ವಿವರಿಸಿದ್ದು ಹೊಸ ತಲೆಮಾರಿನವರಿಗೆ ವಚನ ಪ್ರಪಂಚದ ಪ್ರವೇಶಕ್ಕೆ ತೋರು ಬಾಗಿಲಿನಂತಿದೆ. ಕನ್ನಡದ ವಿವೇಕ ಮತ್ತು ವೈಚಾರಿಕ ಪರಂಪರೆಯ ಮೇಲೆ ಗಾಢ ಪರಿಣಾಮ ಬೀರಿರುವ ಬುದ್ಧನ



ಪ್ರೊ॥ ಶಿವರಾಮಯ್ಯ ಮತ್ತು ಶ್ರೀ. ಕಿ. ರಂ. ನಾಗರಾಜ ಅವರೊಂದಿಗೆ ಎಲ್.ಬಿ. ದಂಪತಿಗಳು



ಕಿ.ರಂ.-ಎಲ್.ಬಿ.

ಆಲೋಚನ ಕ್ರಮಗಳು ಹೊಸ ತಲೆಮಾರಿನ ಓದುಗರಿಗೆ ದಕ್ಕಬೇಕು ಎಂಬ ಕಾರಣದಿಂದ ಅಶ್ವಘೋಷನ ಬುದ್ಧಚರಿತ ಮತ್ತು ಸೌಂದರನಂದ ಕೃತಿಗಳನ್ನು ಸಂಸ್ಕೃತ ಮತ್ತು ಇಂಗ್ಲಿಷ್ ಭಾಷೆಗಳಿಂದ ಕನ್ನಡಕ್ಕೆ ರೂಪಾಂತರಿಸಿದ್ದಾರೆ. ಹೀಗೆ ಎಲ್.ಬಿ. ಬಹುಶಃ ಕಳೆದ ಎಪ್ಪತ್ತು ವರ್ಷಗಳು ನಿರಂತರವಾಗಿ ತಮ್ಮ ಪ್ರಜ್ಞೆಯ ದೀಪದ ಕುಡಿ ಕರಕುಕಟ್ಟದ ಹಾಗೆ ಬೆಳಕಿನ ಪ್ರಭಾವಲಯವನ್ನು ಕಾಯ್ದುಕೊಂಡು ಬಂದವರು.

ನಾಲ್ಕು ವರ್ಷಗಳ ಹಿಂದೆ ಚಿತ್ರದುರ್ಗದಲ್ಲಿ ಎಪ್ಪತ್ತೈದನೆಯ ಅಖಿಲ ಭಾರತ ಸಾಹಿತ್ಯ ಸಮ್ಮೇಳನ ನಡೆಯಿತು. ಬಸವರಾಜು ಅವರು ಆ ಸಮ್ಮೇಳನದ ಅಧ್ಯಕ್ಷತೆಯನ್ನು ವಹಿಸಿದ್ದರು. ಉದ್ಘಾಟನೆಯ ಸಮಾರಂಭದಲ್ಲಿ ಅಂದಿನ ಮುಖ್ಯಮಂತ್ರಿಗಳು, ಕರ್ನಾಟಕದ ಅತ್ಯಂತ ಬಲಿಷ್ಠ ಮಠಗಳ ಜಗದ್ಗುರುಗಳು ಉಪಸ್ಥಿತರಿದ್ದರು ಮತ್ತು ಪ್ರಬಲ ಜಾತಿಗಳ ರಾಜಕಾರಣಿಗಳು ಅವರನ್ನು ಓಲೈಸುವ ಸಾಹಿತಿಗಳು ಇದ್ದರು. ಲಕ್ಷಾಂತರ ಸಭಿಕರ ಮುಂದೆಯೆ ಎಲ್.ಬಿ. ಅವರು ಮಠಾಧಿಪತಿಗಳು ಮತ್ತು ರಾಜಕಾರಣಿಗಳು ಜನತೆಯ ಶತ್ರುಗಳು ಎಂದು ಕರೆದುದಲ್ಲದೆ ಅವರು ಹೇಗೆ ಭಾರತೀಯ ಸಂವಿಧಾನಿಕ ತತ್ವಗಳನ್ನು ಮಣ್ಣುಗೂಡಿಸುತ್ತಿದ್ದಾರೆ ಎಂದು ಜನರ ಮುಂದೆ ಬಿಡಿಸಿ ಇಟ್ಟಿದ್ದರು. ಎಲ್.ಬಿ. ಅವರ ಹೇಳಿಕೆಯಿಂದ ವೇದಿಕೆಯ ಮೇಲೆ ಬೀಗುತ್ತಿದ್ದ ರಾಜಕಾರಣಿಗಳು, ಮಹಾಸ್ವಾಮಿಗಳು ಆಘಾತಗೊಂಡಿದ್ದರು, ಏಕೆಂದರೆ ಇಂತಹ ಕೆಂಡದ ಪ್ರತಿಕ್ರಿಯೆಯನ್ನು ಅವರು ನಿರೀಕ್ಷಿಸಿರಲಿಲ್ಲ, ಆದರೆ ಎಲ್.ಬಿ. ಅವರನ್ನು ಬಲ್ಲ ಅವರ ಓದುಗರಿಗೆ ಅವರ ಅಸಂಖ್ಯಾತ ಶಿಷ್ಯರಿಗೆ ಬಸವರಾಜು ಅವರ ಬಂಡುಕೋರತನ ತೀರ ಸಹಜವಾದ ಪ್ರತಿಕ್ರಿಯೆಯೇ ಆಗಿತ್ತು. ಈ ಮಾತು ನಾಡಿನಾದ್ಯಂತ ವಿದ್ಯುತ್ ಸಂಚಾರ ವನ್ನುಂಟುಮಾಡಿತ್ತು. ಎಲ್.ಬಿ. ಅವರ ಕೋಪ ಸಾಂದರ್ಭಿಕವಾದುದ್ದು ಅಲ್ಲ ಎಂಬುದು ಅವರ ಶತ್ರುಗಳಿಗೂ ಗೊತ್ತಿರುವ ಸಂಗತಿ. ಲೋಕಕಲ್ಯಾಣ ಮತ್ತು ಜೀವಕಾರುಣ್ಯಕ್ಕೆ ಅಡ್ಡಿಪಡಿಸುತ್ತಿರುವ ಅಧಿಕಾರ ವ್ಯವಸ್ಥೆಗಳ ಬಗೆಗೆ ಅವರಿಗೆ ಅತೀವ ಸಿಟ್ಟಿತ್ತು. ಅರವತ್ತೈದು ವರ್ಷಗಳ ಸ್ವಾತಂತ್ರ್ಯದ ನಂತರವು ಭಾರತೀಯ ಸಮಾಜವು ಕನಿಷ್ಠ ಬಡವರ ಹಸಿವನ್ನು ಸುಧಾರಿಸದ ದುಃಸ್ಥಿತಿಯ ಬಗ್ಗೆ ಅದನ್ನು ಪರೋಕ್ಷವಾಗಿ ಬಲಗೊಳಿಸುತ್ತಿರುವ ನವಪುರೋಹಿತಶಾಹಿ ಮತ್ತು ರಾಜಕೀಯ ಅವಕಾಶವಾದಿ ನಡವಳಿಕೆಯ ಬಗೆಗೆ ಅವರು ಕನಲಿ ಹೋಗಿದ್ದರು. ಅದರ ಪರಿಣಾಮವೆಂಬಂತೆ ಕತ್ತಲ ರಾಕ್ಷಸರು ಎಂಬ ಪುಸ್ತಕವನ್ನು ಪ್ರಕಟಿಸಿದ್ದರು. ಎಂದೂ ಯಾವುದೇ ಹುದ್ದೆ, ಆಸ್ತಿ, ಕೀರ್ತಿಗಳಿಂದ ಮಾರು ದೂರವಿದ್ದ ಕನ್ನಡದ ಜಾಗ್ರತ ಪ್ರಜ್ಞೆಯ ಪ್ರತೀಕದಂತೆ ಬಾಳುತ್ತಿದ್ದ ಎಲ್. ಬಸವರಾಜು ಒಂದು ದಿನ ಮಂಚದಿಂದ ಏಳಲು ಹೋಗಿ ಬಿದ್ದು ತೊಡೆ ಮುರಿದುಕೊಂಡರು. ಅದರ ನೆಪವಾಗಿ ಹಾಸಿಗೆ ಹಿಡಿದವರಿಗೆ ತಾನು ಬದುಕಿದ್ದರೆ ಇತರರ ಹಂಗಿನಲ್ಲಿರಬೇಕು, ಇಂತಹ ಅವಲಂಬಿತ ಬದುಕು ಬೇಡವೆಂದು ತಾವೇ ಕಟುವಾಗಿ ವಿಮರ್ಶಿಸುತ್ತಿದ್ದ ವ್ಯವಸ್ಥೆಗಳನ್ನು, ಅಷ್ಟೇ ತೀವ್ರವಾಗಿ ಪ್ರೀತಿಸುತ್ತಿದ್ದ ಲೋಕವನ್ನು ತೊರೆದು ಮಣ್ಣುಗೂಡಿದ್ದಾರೆ. ಅವರು ಹಚ್ಚಿಟ್ಟ ದೀಪಗಳು ಮಾತ್ರ ತಣ್ಣಗೆ ನಮ್ಮ ಮುಂದಿನ ದಾರಿಗಳನ್ನು ಬೆಳಗುತ್ತಿವೆ. ಎಲ್.ಬಿ. ಎಂಬ ನಿತ್ಯ ಉರಿವ ಜ್ಯೋತಿಗೆ ಶರಣು.

ಡಾ॥ ನಾರಾಯಣಸ್ವಾಮಿ ಕೆ. ವೈ.
ನಂ. ೪೭, ಎನ್. ಆರ್. ಬಡಾವಣೆ, ೯ನೇ ಮುಖ್ಯರಸ್ತೆ, ವಿರಾಟನಗರ, ಬೊಮ್ಮನಹಳ್ಳಿ, ಬೆಂಗಳೂರು-೫೬೦೦೬೮

ತಾವು ಕವನ ಓದಿ ಬಂದ ಮೇಲೆ ಇತರರಿಂದ ಒಂದು ಶಹಭಾಷ್‌ಗಿರಿಯ ನಗೆಯನ್ನು - ಚಪ್ಪಾಳೆಯನ್ನು ಅಪೇಕ್ಷಿಸುತ್ತಿದ್ದ ಹಿರಿಯ ಕವಿಗಳು ಹೊಸಬರ್‍ಯಾರ ಕವನಕ್ಕೂ ಪ್ರತಿಕ್ರಿಯಿಸದೇ ಗತ್ತಿನಿಂದ ಕೂತಿದ್ದರು. ಮತ್ತಷ್ಟು ಸ್ಪರ್ಧಾಳುಗಳು ಹುಟ್ಟಿದರೆಂದು ಭಾವಿಸಿದರೋ ಏನೋ ! ಹಿರಿಯ ಕವಿಗಳೆಂದರೆ ಹೀಗೆ ಇರುತ್ತಾರೇನೋ ಎಂದು ನಾವು ನಂತರ ಮಾತನಾಡಿಕೊಂಡೆವು.



# ಹೀಗೊಂದು ಕವಿ ಸಮ್ಮೇಳನ...

ನನಗೆ ತಿಳುವಳಿಕೆ ಬಾರದ ದಿನಗಳಿಂದಲೂ ಅಪ್ಪ ನಮ್ಮನ್ನೆಲ್ಲ ಒಂದಿಲ್ಲೊಂದು ಸಾಹಿತ್ಯಿಕ ಕಾರ್ಯಕ್ರಮಗಳಿಗೆ ಕರೆದುಕೊಂಡು ಹೋಗುತ್ತಾನೆ. ಆಗೆಲ್ಲ ವೇದಿಕೆ ಮೇಲೆ ಮಾತನಾಡುವವರನ್ನು ಕಂಡು 'ವಾಹ್!' ಎಂದುಕೊಳ್ಳುತ್ತಿದ್ದೆ. ಕಾರ್ಯಕ್ರಮ ೫-೬ ತಾಸುಗಳ ಕಾಲ ಮುಂದುವರಿದಾಗ ಇವರಿಗೆಲ್ಲ ಎಷ್ಟು ತಾಳ್ಮೆಯಲ್ಲವೇ, ಎನಿಸುತ್ತಿತ್ತು. ಅವರ ಮುಖದ ಮೇಲಿನ ಗಾಂಭೀರ್ಯ, ಮಧ್ಯ ಮಧ್ಯ ಇತರರ ಮಾತಿಗೆ 'ಹೌದ್ಹೌದು' ಎನ್ನುವಂತೆ ತಲೆ ತೂಗುವ ರೀತಿ, ಎಲ್ಲವೂ ನನಗೆ ಅವರು ಎಷ್ಟೊಂದು ಬುದ್ಧಿ ಜೀವಿಗಳಲ್ಲವೇ ಎನ್ನಿಸುವಂತೆ ಮಾಡುತ್ತಿತ್ತು.

ನಾನು ಮೊದಲ ಬಾರಿಗೆ ವೇದಿಕೆಯ ಮೇಲೆ ಕೂತುಕೊಳ್ಳುವ ಪ್ರಸಂಗ ಬಂದದ್ದು ಬಿ.ಇಡಿ.ಯಲ್ಲಿ ವಿದ್ಯಾರ್ಥಿನಿಯರ ಪ್ರತಿನಿಧಿಯಾದಾಗ. ಆಗ ಮೈಕ್‌ನ ಮುಂದೆ ನಿಂತವರು ಹೇಳುವುದನ್ನು ಟಿಪ್ಪಣಿ ಮಾಡಿಕೊಳ್ಳುವುದರಲ್ಲೇ ಸಮಾರಂಭ ಮುಗಿದುಹೋಯಿತು. ಹೀಗಾಗಿ ಅಲ್ಲಿ ನನ್ನ ತಾಳ್ಮೆಯ ಪರೀಕ್ಷೆಯೇನೂ ನಡೆಯಲಿಲ್ಲ.

ಒಮ್ಮೆ ಮೊದಲು ಬಾರಿಗೆ ಕವಿ ಸಮ್ಮೇಳನವೊಂದರಲ್ಲಿ ಕವನ ವಾಚನ ಮಾಡುವ ಅವಕಾಶ ಒದಗಿಬಂತು. ಆಗ ನನ್ನ ಮನಸಿನಲ್ಲಿದ್ದ ತಳಮಳ ಅಷ್ಟಿಷ್ಟಲ್ಲ. ಸುಮಾರು ೬೦ ಕವಿಗಳ ದಂಡೇ ಅಲ್ಲಿತ್ತು. ನನ್ನ ಸಂಖ್ಯೆ ಸರದಿಯಲ್ಲಿ ಅರ್ಧ ಶತಕ ಬಾರಿಸಿತ್ತು! ವೇದಿಕೆಯನ್ನೇರುವಾಗ ಅವ್ವ ಹೇಳಿದಳು, ''ತಂಗಿ, ನೀನು ಯಾರಾದರೂ ಹೆಣ್ಮಕ್ಕಳ ಪಕ್ಕ ಹೋಗಿ ಕೂತ್ಕೊ.'' ನನ್ನ ಒಳಗಿದ್ದ ಚಿಂತನೆಯೇ ಬೇರೆ. ವೇದಿಕೆಯ ಹತ್ತಿರ ಹೋಗುವವರೆಗೂ ನನ್ನ ವಯಸ್ಸಿನವರ್‍ಯಾರೂ ಅಲ್ಲಿ ಗೋಚರಿಸಲೇ ಇಲ್ಲ. 'ಅಯ್ಯಯ್ಯೋ ! ಇಷ್ಟೆಲ್ಲ ಹಿರಿಯರಿರುವಾಗ ನಾನು ಕಟ್ಟಕಡೆಯ ಸಾಲಲ್ಲೇ ಕುಳಿತುಕೊಳ್ಳೋದು' ಅಂತ ನಿರ್ಧರಿಸಿಬಿಟ್ಟೆ. ನನ್ನ ಗೆಳತಿ, ''ಲೇ ಮಂಗಾ ! ಎಲ್ಲರಿಗೂ ಕಾಣ್ಸೋ ಥರ ಈಕಡೆ ಕೂತ್ಕೊಳಲೇ'' ಅಂದ್ಲು. ನಾನಂತು ಗೊಂದಲಕ್ಕೆ ಬಿದ್ದೆ; ಎಲ್ಲರಿಗೂ ಕಾಣುವಂತೆ, ಹೆಣ್ಣುಮಕ್ಕಳ ಪಕ್ಕದಲ್ಲೂ ಆಗುವಂತೆ, ಹಿರಿಯರ ಹಿಂದೆಯೂ ಆಗುವಂತೆ ಹ್ಯಾಗೆ ಕೂತುಕೊಳ್ಳುವುದು ? ಅದೇ ಗೊಂದಲದಲ್ಲಿ ವೇದಿಕೆಯನ್ನೇರಿದೆ. ಹಿರಿಯ ಅಜ್ಜಿಯಂದಿರಿಬ್ಬರು ಅಷ್ಟೊಂದು ಗಂಡಸರನ್ನು ಹಿಮ್ಮೆಟ್ಟಿ ಹ್ಯಾಗೆ ಮುಂದಿನ ಸಾಲಿನಲ್ಲಿ ಕೂತುಕೊಳ್ಳೋದು ಅಂತ ಮಾತನಾಡಿಕೊಂಡು ಹಿಂದಿನ ಸಾಲಿನಲ್ಲಿ ಜಾಗ ಹುಡುಕುತ್ತಿದ್ದರು. ನಾನು ಅವರ ಹಿಂದೆಯೇ ಹೋಗುತ್ತಿದ್ದರೂ ಚಿಕ್ಕವಳಾದ ನನ್ನಡೆಗೆ ಅವರು ಒಂದು ಪ್ರೀತಿಯ ಮುಗುಳ್ನಗೆಯನ್ನೂ ಬೀರಲಿಲ್ಲ. ಇನ್ನು ಅವರು ನನ್ನನ್ನು ಕರೆದು ಪಕ್ಕದಲ್ಲಿ (ಹಿಂದಿನ ಸಾಲಲ್ಲೇ ಆದರೂ ಸರಿ) ಕೂಡಿಸಿಕೊಳ್ಳುವುದು ಅಷ್ಟರಲ್ಲಿಯೇ ಇದೆ ಎನ್ನಿಸಿ ನಾನೇ ಎಲ್ಲೋ ಒಂದು ಕಡೆ ಕೂತುಕೊಳ್ಳಲನುವಾದೆ. ಅಷ್ಟರಲ್ಲಿ ಪರಿಚಿತರೊಬ್ಬರು, ''ಮೇಡಂ, ಮುಂದೆ ಬನ್ನಿ. ಕೂತ್ಕೊಳ್ಳಿ'' ಅಂದರು. ಮತ್ತೊಮ್ಮೆ ಕರೆದರು. ನಾನು ನಿರಾಕರಿಸಿದೆ. ಆದರೂ ಅವರು ನನ್ನನ್ನೂ, ಪಕ್ಕದಲ್ಲಿದ್ದ ಒಬ್ಬ ಆಂಟಿಯನ್ನೂ ಮುಂದೆ ಕರೆದೊಯ್ದರು. ಅದಾಗಲೇ ಅಲ್ಲಿ ಪುರುಷರ ಪಡೆ ಮೊದಲನೇ ಸಾಲಿನಲ್ಲಿ ಭರ್ತಿಯಾಗಿತ್ತು. ನಾವಿಬ್ಬರೇ ಹೋಗಿ ಅವರ ಮಧ್ಯ ಕುಳಿತುಕೊಂಡೆವು. ನಂತರ... ಶುರುವಾಯ್ತು ಕವಿಗೋಷ್ಠಿ.

ಆಶಯ ನುಡಿಕಾರ ಕೊಂಚ ಹೆಚ್ಚಿಗೇ ತಮ್ಮ ಆಶಯವನ್ನು ವ್ಯಕ್ತಪಡಿಸಿದರು. ಮಾತಿನ ಮಧ್ಯ ಸಭಿಕರನ್ನುದ್ದೇಶಿಸಿ, ''ನೀವು ಇಂಥದೊಂದು ಗೋಷ್ಠಿ ಮುಗಿಸಿಕೊಂಡು ನಿಮ್ಮ ನಿಮ್ಮ ಮನೆಗಳಿಗೆ ಹೋಗಿ ನಿಮ್ಮ ಹೆಂಡತಿಯರನ್ನು ಮುದ್ದಾಡುವಾಗ, ಮಕ್ಕಳನ್ನು ಅಕ್ಕರೆಯಿಂದ ತಬ್ಬಿಕೊಳ್ಳುವಾಗ, ಸ್ನೇಹಿತರೊಂದಿಗೆ ಆತ್ಮೀಯತೆಯಿಂದ ಮಾತನಾಡುವಾಗ ಎಲ್ಲೋ ಒಂದುಕಡೆ ಇಲ್ಲಿಯ ಯಾವುದೋ ಒಂದು ಕವನದ ಸಾಲುಗಳು ಸಾರ್ಥಕಗೊಳ್ಳುತ್ತವೆ'' ಅಂತೇನೋ ಹೇಳಿದರು. ವೇದಿಕೆಯ ಮೇಲಿದ್ದ ಯುವಕವಿಯೊಬ್ಬ ಆಶಯಕಾರನ ಮೊದಲ ಮಾತಿನಿಂದ ತುಂಬ ಪುಳಕಿತನಾದಂತಾಗಿ ಉಕ್ಕಿಬರುತ್ತಿದ್ದ ತನ್ನ ನಗೆಯನ್ನು ಕಷ್ಟಪಟ್ಟು ತಡೆದುಕೊಳ್ಳುತ್ತಿದ್ದ. ಪಕ್ಕದ ಆಂಟಿ 'ಇದೆಂಥ ವಿಚಿತ್ರ ಪ್ರಾಣಿ !' ಎನ್ನುವಂತೆ ಮುಖವನ್ನು ಕೆಡಿಸಿಕೊಂಡು ಅವನನ್ನು ನೋಡಿದಳು. ಅವನಿಗೂ ಅರ್ಥವಾಯ್ತೇನೊ, ತಾನೂ ಅವಳಂತೆಯೇ ಮುಖ ಸಿಂಡರಿಸಿಕೊಂಡು ಕುಳಿತ. ಭಾಷಣಕಾರ ಮುಂದುವರಿಸೇ ಇದ್ದ. ತುಂಬ ತಡವಾಗಿದ್ದರಿಂದ, ''ಈ ಯಪ್ಪ ಬೇಗ ಮುಗಿಸಿದರೆ ಮನೆಗೆ ಹೋಗಿ ನಾವೂ ಇವನು ಹೇಳಿದ್ದರಲ್ಲೇ ಯಾವುದಾದರೊಂದನ್ನು ಮಾಡಿದರಾಯ್ತು'' ಎಂದು ಕವಿಗಳೆಲ್ಲ ವಟಗುಟ್ಟುತ್ತಿದ್ದರು. ಹುಂ...! ಅಬ್ಬಾ ! ಆತ ಮುಗಿಸಿದ.

ಕವಿಗಳು ಒಬ್ಬೊಬ್ಬರಾಗೀ ವಾಚನ ಆರಂಭಿಸಿದರು. ಹಲವರು

**ಮಹೇಶ್ವರಿ ಕೋಟಿ**

ಓದಿದರು, ಕೆಲವರು ಚಪ್ಪಾಳೆ ಗಿಟ್ಟಿಸಿಕೊಂಡರು. ಹೊತ್ತು ಮೀರಿದ್ದರಿಂದ ಸಂಘಟಕರು ''ಕವಿಗಳು ದಯಮಾಡಿ ತಮ್ಮ ಕವನದ ಸಾಲುಗಳನ್ನು ಪುನರುಚ್ಚರಿಸಬಾರದು'' ಎಂದು ವಿನಂತಿಸಿಕೊಂಡರು. ಕೆಲವರು ತಮ್ಮ ಕವನಕ್ಕೆ ಪುನರುಚ್ಚಾರಣೆ ಸೇರಿಸಿದರೇನೇ ಆಕರ್ಷಕವಾಗಿರುತ್ತದೆ ಎಂದು ಸಮಜಾಯಿಷಿ ನೀಡಿದರೆ ಮತ್ತೆ ಕೆಲವರು ತಮ್ಮ ಪುಟಾಣಿ ಕವಿತೆಯನ್ನು ಪುನರುಚ್ಚಾರಣೆ ಇಲ್ಲದೆ ಹೇಗೆ ದೊಡ್ಡದಾಗಿ ಮಾಡುವುದೆಂದು ಗೊಣಗಿದರು. ಒಂದಿಬ್ಬರು ಅಲ್ಲೇ ಕೂತು ತಮ್ಮ ಕವನಗಳಿಗೆ ಬಾಲ ಹಚ್ಚಿ ಹಿಗ್ಗಿಸಿದರು. ನಾವು ಚಿಕ್ಕವರು ವೇದಿಕೆಯ ಮೇಲಿನ ಆಗು ಹೋಗುಗಳಿಗೆ ಅಲ್ಲಿದ್ದವರು ನೀಡುತ್ತಿದ್ದ ಪ್ರತಿಕ್ರಿಯೆಗಳನ್ನು ನೋಡುತ್ತಾ, ವಾಚಿಸಲ್ಪಡುತ್ತಿದ್ದ ಕವನಗಳಿಗಿಂತ ನಮ್ಮದು ಒಳ್ಳೆಯದೇ-ಕೆಟ್ಟದ್ದೇ ಎಂದು ಮೌಲ್ಯಮಾಪನ ಮಾಡಿಕೊಳ್ಳುತ್ತ ಸುಮ್ಮನೆ ಕುಳಿತಿದ್ದೆವು. ಮಧ್ಯದಲ್ಲಿ ಸಮವಯಸ್ಕರೂ ಬಂದದ್ದು ನನಗೆ ಕೊಂಚ ನಿರಾಳವೆನಿಸಿತು. ನನ್ನ ಸರದಿ ತುಂಬ ದೂರವಿತ್ತಾದ್ದರಿಂದ ಕೆಲ ಸಮಯದ ನಂತರ ನನಗೂ ಅಲ್ಲಿ ಕೂತಿರುವುದು ಬೇಸರವೆನಿಸಿತು. ಆದರೆ ಅದನ್ನು ತೋರಿಸಿಕೊಳ್ಳುವಂತಿಲ್ಲವೇ! ಆಗ ಮತ್ತೊಮ್ಮೆ ಅನಿಸಿತು - ವೇದಿಕೆಯ ಮೇಲಿರುವವರಿಗೆ ತುಂಬ ತಾಳ್ಮೆ ಇರುತ್ತದೆ! ಬಹಳ ಜನ ಕವಿಗಳೆಲ್ಲ ತಮ್ಮ ಕವಿತೆಯನ್ನು ಓದಿ ಮುಗಿಸಿ, ನೆನಪಿನ ಕಾಣಿಕೆಯೊಂದನ್ನು ಪಡೆದು, ಹಿಂದೂ-ಮುಂದೂ ನೋಡದೇ ವೇದಿಕೆಯನ್ನಿಳಿದು ಹೋದರು. ಮಿಕ್ಕವರು ಅಲ್ಲೇ ಕಾಯುತ್ತಾ ಕೂತಿರುವುದು ಅನಿವಾರ್ಯವಾಯಿತು. ಕಡೆಯಲ್ಲಿದ್ದ ವ್ಯಕ್ತಿಯ ಸ್ಥಿತಿಯಂತೂ ನ್ಯಾಯಬೆಲೆ ಅಂಗಡಿ ಮುಂದೆ ಸರದಿಯಲ್ಲಿ ಕಟ್ಟಕಡೆಗೆ ಡಬ್ಬಿಯನ್ನಿಟ್ಟು ಸೀಮೆಎಣ್ಣೆಗಾಗಿ ಕಾಯುವವನ ಪಾಡಾಗಿತ್ತು!

ಹೊತ್ತು ಮೀರಿದಂತೆ ಬೇಸರಿಕೆಯನ್ನು ತಡೆಯುವುದು ಅಸಾಧ್ಯವಾಯ್ತು. ಚಿಕ್ಕ ಆಕಳಿಕೆಯೊಂದು ನನಗರಿವಿಲ್ಲದೆ ಹೊರಬಿತ್ತು. ಹಿಂದಿನ ಸಾಲಲ್ಲಿ ಕುಳಿತಿದ್ದ ಗಂಡಸರಿಬ್ಬರು ತಾವು ಆದಾಗಲೇ ದೊಡ್ಡ ಬಾಯಿ ತೆಗೆದು ನಾಲ್ಕಾರು ಬಾರಿ ಆಕಳಿಸಿದ್ದರೂ ನನ್ನ ಆಕಳಿಕೆಯನ್ನು ನೋಡಿ ಚಕಿತಗೊಂಡಂತೆ ಪ್ರತಿಕ್ರಿಯಿಸಿದರು. ಅದೇನೋ ಪ್ರಮಾದವಾದಂತೆನಿಸಿ ನನಗೆ ಮುಜಗರವಾಯ್ತು. ಬೆದರುಗಣ್ಣಿನಿಂದ ಅವರನ್ನೊಮ್ಮೆ ನೋಡಿ, ಅದನ್ನು ಮರೆಮಾಚುತ್ತ ಮೈಕಿನೆಡೆಗೆ ಗಮನ ಹರಿಸಿದೆ. ಅಷ್ಟರಲ್ಲೇ ಪಕ್ಕದ ಆಸಾಮಿಯೊಬ್ಬ ನಮ್ಮೆಲ್ಲರನ್ನೂ ಹಿಮ್ಮೆಟ್ಟಿ ಕೊಂಚ ಸದ್ದನ್ನೂ ಮಾಡುತ್ತ ದೊಡ್ಡದಾಗಿ ಆಕಳಿಸಿದ! ಈ ಮಧ್ಯೆ ಕವಿಯೊಬ್ಬ ಕವನವನ್ನಾರಂಭಿಸಿದ, ಬಿಟ್ಟುಹೋದ ತನ್ನ ಗೆಳತಿಯನ್ನು ನೆನೆದ. ಪಕ್ಕದ ಆಂಟಿ, ''ಇವನಿಗ್ಯಾರೂ ಸರಿಯಾಗಿ ಕೈ ಕೊಟ್ಟಿದ್ದಾಳೆ ಅನಿಸುತ್ತೆ ಅಲ್ವಾ?'' ಎಂದು ತಮಾಷೆ ಮಾಡಿದಳು. ಎಲ್ಲರೂ ನಕ್ಕೆವು. ಇನ್ನೊಬ್ಬ ಮಧ್ಯವಯಸ್ಕ ಹೆಣ್ಣುಮಗಳು ಬಂದಳು. ಎರಡು ಸಾಲು ಓದುತ್ತಿದ್ದಂತೆಯೇ ಅವಳ ಪುಟ್ಟ ಮಗು ಬಂದು ಮೈಕನ್ನೇ ಹಿಡಿದು, ''ಮಮ್ಮೀ ಮನಿಗಿ ಹೋಗುನು ಬಾಽಽ ಬಾಽಽಽಽಽ'' ಎನ್ನುತ್ತ ಅತ್ತಿಂದಿತ್ತ, ಇತ್ತಿಂದತ್ತ ಓಡಾಡತೊಡಗಿತು. ರಂಗುರಂಗಿನ ಕನಸುಗಳನ್ನು ಬಣ್ಣಿಸುತ್ತಿದ್ದ ಅವಳ ಮುಖದ ರಂಗೇ ಇಳಿದಂತಾಯ್ತು. ನೋಡುಗರೆಲ್ಲರಿಗೂ ಮೋಜು! ''ಇವಳ ಗಂಡನಾದರೂ ಎಲ್ಲಿದ್ದಾನೋ ಮಹಾರಾಯ'' ಎಂದು ಹಿಡಿ ಶಾಪ ಹಾಕಿದರು. ಒಂದಾದಮೇಲೊಂದು ಕವನ, ಜನರ ಕರತಾಡನ, ಎಲ್ಲಾ ಸಾಗೇ ಇತ್ತು. ತಾವು ಕವನ ಓದಿ ಬಂದ ಮೇಲೆ ಇತರರಿಂದ ಒಂದು ಶಹಭಾಷ್‌ಗಿರಿಯ ನಗೆಯನ್ನು-ಚಪ್ಪಾಳೆಯನ್ನು ಅಪೇಕ್ಷಿಸುತ್ತಿದ್ದ ಹಿರಿಯ ಕವಿಗಳು ಹೊಸಬರ್‍ಯಾರ ಕವನಕ್ಕೂ ಪ್ರತಿಕ್ರಿಯಿಸದೇ ಗತ್ತಿನಿಂದ ಕೂತಿದ್ದರು. ಮತ್ತಷ್ಟು ಸ್ಪರ್ಧಾಳುಗಳು ಹುಟ್ಟಿದರೆಂದು ಭಾವಿಸಿದರೋ ಏನೋ! ಹಿರಿಯ ಕವಿಗಳೆಂದರೆ ಹೀಗೆ ಇರುತ್ತಾರೇನೋ ಎಂದು ನಾವು ನಂತರ ಮಾತನಾಡಿಕೊಂಡೆವು. ಸರಿ, ಅಂತೂ ನನ್ನ ಸರದಿಯು ಬಂದೇಬಿಟ್ಟಿತು, ಕವನ ಓದಿದೆ. ಇನ್ನೇನು? ಇತರರಂತೆ 'ಮುಗಿಯಿತು ನನ್ನ ಪಾಳಿ' ಎಂದು ನೆನಪಿನ ಕಾಣಿಕೆ ಪಡೆದು ಒಂದು ಫೋಟೊ ಕ್ಲಿಕ್ಕಾದ ಮೇಲೆ ನಾನೂ ಹೊರಟು ಬಂದೆ. ಮನೆಯವರೆಲ್ಲಾ ಸೇರಿ ಊಟಕ್ಕೆ ಹೋದೆವು. ಅಧ್ಯಕ್ಷರು, ನಿರೂಪಕರು ಮಾತ್ರ ಪುರಾಣ ಹೇಳುವ ಸ್ವಾಮಿಗಳ ಕೆಳಗೆ ಕಂಬಳಿ ಹಾಸಿದವನಂತೆ ಕುಳಿತೇ ಇದ್ದರು...

**ಮಹೇಶ್ವರಿ ಕೋಟಿ**
ಮನೆ ಸಂಖ್ಯೆ. ೩, ವಿದ್ಯಾಗಿರಿ, ಬಾಗಲಕೋಟ - ೫೮೭ ೧೦೧

ಡಾ|| ರಾಮರೆಡ್ಡಿ ಎಸ್. ರಡ್ಡೇರ

# ದೇವರ ಜೇಡರ ದಾಸಿಮಯ್ಯ

## ಇಬ್ಬರೆಂಬುದು ಊಹೆ – ಒಬ್ಬನೆಂಬುದೇ ದಿಟ

ವಚನ ಸಾಹಿತ್ಯ ಚರಿತ್ರೆಯಲ್ಲಿ ಆರಂಭದ ಮತ್ತು ಸತ್ವಯುತ ವಚನಕಾರನಾಗಿ ಕಂಡುಬರುವ ಮುದನೂರ ದಾಸಿಮಯ್ಯನಿಗೆ 'ದೇವರ' ಮತ್ತು 'ಜೇಡರ' ಎಂಬ ಎರಡು ವಿಶೇಷಣಗಳು ಅಂಟಿಕೊಂಡಿರುವ ಕಾರಣವಾಗಿ ಸಂಶೋಧನಾ ವಲಯದಲ್ಲಿ ಸಂದೇಹ ಮೂಡಿರುವುದು ಸಹಜವೆನಿಸುತ್ತದೆ. ಆದರೆ ಕ್ರಿ.ಶ. ಸುಮಾರು ೧೦೧೦ರಿಂದ ಕ್ರಿ.ಶ. ಸುಮಾರು ೧೧೧೦ರ ಅವಧಿಯಲ್ಲಿ ಜೀವಿಸಿದ್ದ ದೇವರ (ಜೇಡರ) ದಾಸಿಮಯ್ಯನ ಜೀವಿತದ ಅವಧಿಯಿಂದ ಸುಮಾರು ೧೯೭೦ರ ದಶಕದವರೆಗೆ ವಿವಿಧ ವಚನ, ಕಾವ್ಯ, ಪುರಾಣ, ಚರಿತ್ರೆ ಮತ್ತು ಸಂಶೋಧನಾತ್ಮಕ ಲೇಖನಗಳಲ್ಲಿ ಸಾವಿರಾರು ಬಾರಿ ಉಲ್ಲೇಖಗೊಂಡಿರುವ ದಾಸಿಮಯ್ಯನನ್ನು ಸುಮಾರು ೧೯೭೦ರ ದಶಕದಿಂದೀಚೆಗೆ ದಾಸಿಮಯ್ಯನಿಗಿರುವ 'ದೇವರ' ಮತ್ತು 'ಜೇಡರ' ವಿಶೇಷಣಗಳನ್ನೇ ಮುಖ್ಯವಾಗಿ ಆಧರಿಸಿ, ಅವುಗಳಿಗೆ ಸಂದೇಹಾತ್ಮಕ ಊಹೆಗಳನ್ನು ಪೋಣಿಸಿ ಇಬ್ಬರು ದಾಸಿಮಯ್ಯರನ್ನು ಕಲ್ಪಿಸಿಕೊಂಡಿರುವ ಅಂಶ, ಕನ್ನಡ ಸಂಶೋಧನೆಯಲ್ಲಿ ಊಹಿಸಲಾಗಿದೆಯೇ ಹೊರತು ಸತ್ಯವೆನಿಸುವುದಿಲ್ಲ.

'ಜೇಡರ' ವಿಶೇಷಣದಿಂದ ಉಲ್ಲೇಖಗೊಂಡಿರುವ ದಾಸಿಮಯ್ಯನು ಮುದನೂರಿನಲ್ಲಿ ಜನಿಸಿದವನಾಗಿದ್ದು, 'ರಾಮನಾಥ' ಎಂಬ ಅಂಕಿತದಿಂದ ವಚನಗಳನ್ನು ರಚಿಸಿದ್ದಾನೆ. ಇವನು ಶರಣೆ ದುಗ್ಗಳೆಯ ಪತಿಯಾಗಿದ್ದು, ನೇಯ್ಗೆ ಕಾಯಕವನ್ನು ಅನುಸರಿಸುತ್ತಿದ್ದ. ದಿವ್ಯಾಂಬರವನ್ನು ನೇಯ್ದು ಶಿವನಿಗೆ ಇತ್ತು ತವನಿಧಿ ಪಡೆದನೆಂದು ವಚನ - ಕಾವ್ಯಗಳಲ್ಲಿ ಉಲ್ಲೇಖಗೊಳ್ಳುವ ದಾಸಿಮಯ್ಯನು ಬಸವಪೂರ್ವ ಯುಗದ ವಚನಕಾರ ಎಂಬುದರಲ್ಲಿ ಯಾರಿಗೂ ಸಂದೇಹವಿಲ್ಲ. ಕಲ್ಯಾಣದ ಚಾಲುಕ್ಯ ದೊರೆ ಇಮ್ಮಡಿ ಜಯಸಿಂಹ (ಕ್ರಿ.ಶ. ೧೦೧೫-೧೦೪೨) ಮತ್ತು ಅವನ ಧರ್ಮಪತ್ನಿ ರಾಣಿ ಸುಗ್ಗಲೆಗೆ ಗುರುವಾಗಿದ್ದ ದೇವರ ದಾಸಿಮಯ್ಯನು ಪೊಟ್ಟಲಕೇರಿಯ ಜೈನ ವಿದ್ವಾಂಸರೊಂದಿಗೆ ಧಾರ್ಮಿಕ ಸಂವಾದ ಮಾಡಿ ಅವರನ್ನು ಸಂವಾದದಲ್ಲಿ ಜಯಿಸಿದನೆಂಬ ವಿಷಯ ವೀರಶೈವ ಪುರಾಣಗಳಲ್ಲಿ ಉಲ್ಲೇಖಗೊಂಡಿರುವುದು ಸರ್ವವಿದಿತವಾಗಿದೆ. ಅಲ್ಲದೆ, ದೇವರ ದಾಸಿಮಯ್ಯನ ಪಾಂಡಿತ್ಯ ಮತ್ತು ಸಂವಾದ ವಿಜಯದಿಂದ ಅಸಹನೆ ಹೊಂದಿದ್ದ ಅಲ್ಲಿನ ಜೈನರು ಕಾಳಸರ್ಪವೊಂದನ್ನು ಗಡಿಗೆಯಲ್ಲಿ ಮುಚ್ಚಿಟ್ಟು ಆ ಗಡಿಗೆಯಲ್ಲಿ ದೇವರಿದ್ದಾನೆಯೇ, ಎಂದು ಕೇಳಿದಾಗ ಶಿವನ ಸರ್ವಾಂತರ್ಯಾಮಿತ್ವವನ್ನು ಪ್ರತಿಪಾದಿಸುತ್ತಿದ್ದ ದಾಸಿಮಯ್ಯನು ಅಲ್ಲಿಯೂ ದೇವರಿದ್ದಾನೆಂದು ಹೇಳುವನಲ್ಲದೆ, ಪ್ರತಿವಾದಿಗಳ ಇಚ್ಛೆಯಂತೆ ಆ ಘಟದಲ್ಲಿ ಕೈ ಹಾಕಿದಾಗ ಅದರೊಳಗಿನ ಸರ್ಪವು ದಾಸಿಮಯ್ಯನ ಹಸ್ತಸ್ಪರ್ಶದಿಂದ ಸ್ಫಟಿಕದ ಲಿಂಗವಾಗುತ್ತದೆ ಎಂಬ ಐತಿಹ್ಯವಿದೆ. ಅದನ್ನು ಎಲ್ಲರಿಗೂ ತೋರಿಸಿ 'ಉತ್ತರನಾಥ'ನೆಂದು ಅದಕ್ಕೆ ಹೆಸರಿಟ್ಟು ಪ್ರತಿಷ್ಠಾಪಿಸಿದ ವಿಷಯ ಕವಿ ಶಾಂತಲಿಂಗದೇವನ 'ಭೈರವೇಶ್ವರ ಕಾವ್ಯ'ದ 'ಕಥಾಮಣಿ ಸೂತ್ರರತ್ನಾಕರ' (ಭಾಗ-೨, ಪು. ೩೫-೩೬)ದಲ್ಲಿ ನಿರೂಪಿತಗೊಂಡಿದೆ. ಈ ಘಟಸರ್ಪ ಪವಾಡ ಮೆರೆದ ದೇವರ ದಾಸಿಮಯ್ಯ ಮತ್ತು ಶಿವನಿಂದ ತವನಿಧಿ ಪಡೆದ ಜೇಡರ ದಾಸಿಮಯ್ಯ ಒಬ್ಬನೇ ಎನ್ನುವುದಕ್ಕೆ ಹಲವು ಆಧಾರಗಳಿವೆ. ಕವಿ ಅದೇ ಕಾವ್ಯದ ೧೩೮ನೇ ಕಥೆಯಲ್ಲಿ ಬರುವ ''ಮುದನೂರಲ್ಲಿ ದೇವರ ದಾಸಯ್ಯನಿರುತ ಹೊಟ್ಟಲ ಕೆರೆಯಲಿರ್ದ ದೇಸಿಂಗರಾಯ ಸುಗ್ಗಲ ದೇವಿಯರಿಗೆ ದೀಕ್ಷೆಯನಿತ್ತು ಜೈನವಾದವ ಗೆದ್ದಿರುವಾಗ...'' – ಎಂಬ ನಿರೂಪಣೆಯಿಂದ ದೇವರ ದಾಸಿಮಯ್ಯನ ಊರು 'ಮುದನೂರು' ಎಂಬುದು ಮತ್ತು ಅವನೇ ಚಾಳುಕ್ಯ ದೊರೆ ಜಯಸಿಂಹ-ಸುಗ್ಗಲದೇವಿಯರಿಗೆ ಗುರುವಾಗಿದ್ದನೆಂಬುದು ದೃಢ ಪಡುತ್ತದೆ. ಮುದನೂರಿನ ರಾಮನಾಥ ದೇವಾಲಯ (ಜೇಡರ ದಾಸಿಮಯ್ಯನ ಇಷ್ಟದೈವ)ದ ಮುಂದಿರುವ ಕ್ರಿ. ಶ. ೧೧೦೫ರ ಶಾಸನದಲ್ಲಿ ಉತ್ತರೇಶ್ವರ ದೇವಾಲಯಕ್ಕೆ ದಾನ ನೀಡಿದ ಬಗ್ಗೆ ವಿವರವಿದೆ (ನೋಡಿ: ಶ್ರೀಮತಿ ಹನುಮಾಕ್ಷಿ ಗೋಗಿ (ಸಂ:) ಸುರಪುರ ತಾಲೂಕಿನ ಶಾಸನಗಳು, ಪು. ೧೩೩-೧೩೪). ದೇವರ ದಾಸಿಮಯ್ಯನು 'ಉತ್ತರನಾಥ' ಎಂದು ಹೆಸರಿಡುವುದಕ್ಕೂ ಮತ್ತು ಮುದನೂರಿನಲ್ಲಿ ಸ್ಥಾಪಿತಗೊಂಡಿರುವ 'ಉತ್ತರೇಶ್ವರ' ದೇವಾಲಯಕ್ಕೂ ಸಂಬಂಧ ಇರುವುದನ್ನಿಲ್ಲಿ ಗಮನಿಸಬಹುದು. ಭೀಮಕವಿಯ 'ಬಸವ ಪುರಾಣ'ದಲ್ಲಿ 'ದೇವರ' ಮತ್ತು 'ಜೇಡರ' ಎಂಬ ಎರಡೂ ವಿಶೇಷಣಗಳನ್ನು ಬಳಸಲಾಗಿದ್ದು, 'ಘಟಸರ್ಪ ಪವಾಡ'ವನ್ನು ನಿರೂಪಿಸುವ ಸಂಧಿ-೫೦ರಲ್ಲಿ ಎರಡೂ ಹೆಸರುಗಳನ್ನು ಉಲ್ಲೇಖಿಸಿರುವುದರಿಂದ ಒಬ್ಬನೇ ದಾಸಿಮಯ್ಯನಿಗೆ ಎರಡೂ

> ದೇವರ ದಾಸಿಮಯ್ಯ - ಜೇಡರ ದಾಸಿಮಯ್ಯ ಇಬ್ಬರೂ ಬೇರೆ ಬೇರೆ ವ್ಯಕ್ತಿಗಳು ಎಂದು ಊಹಿಸಿರುವ ಡಾ|| ಎಚ್. ದೇವೀರಪ್ಪ ಮತ್ತು ಪ್ರೊ|| ಆರ್. ರಾಚಪ್ಪನವರ ಊಹೆಗಳು ಆಕರ ದಾಖಲೆಗಳ ಕೊರತೆಯಿಂದ ಬಳಲುತ್ತಿದ್ದು, ಅವು ಸಂದೇಹಾತ್ಮಕ ಊಹೆಗಳಾಗಿವೆ. ವಿದ್ವಾಂಸರಾದ ಪ್ರೊ|| ಆರ್. ರಾಚಪ್ಪನವರು 'ದಾಸಿಮಯ್ಯಗಳು' ಎಂಬ ತಮ್ಮ ಲೇಖನದಲ್ಲಿ ದೇವರ ದಾಸಿಮಯ್ಯ - ಜೇಡರ ದಾಸಿಮಯ್ಯ ಇಬ್ಬರೂ ಭಿನ್ನರೆಂದು ಅಭಿಪ್ರಾಯಪಟ್ಟಿರುವುದು (ಪ್ರೊ|| ಆರ್. ರಾಚಪ್ಪ - ವಚನಾನುಭವ, ಪು. ೩೨-೪೪) ಕೇವಲ ಕಲ್ಪಿತ ಕತೆಯನ್ನಾಧರಿಸಿದ ಸಂದೇಹಾತ್ಮಕ ಊಹೆಯಿಂದಲೇ ಹೊರತು ಸಮುಚಿತ ಸಾಕ್ಷ್ಯಾಧಾರಗಳಿಂದಲ್ಲ. ಶರಣೆ ದುಗ್ಗಳೆಯ ವಚನಗಳಲ್ಲಿ ಬಸವಣ್ಣ, ಚೆನ್ನಬಸವಣ್ಣ, ಪ್ರಭುದೇವರ ಉಲ್ಲೇಖಗಳು ಕಂಡುಬರುವುದಕ್ಕೆ ಪ್ರಾಯಶಃ ಲಿಪಿಕಾರರಿಂದ ಉಂಟಾದ ಸ್ಖಾಲಿತ್ಯವು ಕಾರಣವೇ ಹೊರತು ವಾಸ್ತವವೆನಿಸುವುದಿಲ್ಲ.

ವಿಶೇಷಣಗಳಿಂದ ಕರೆಯುವ ವಾಡಿಕೆ ಇರುವುದು ಖಚಿತಪಡುತ್ತದೆ.

'ಬಸವ ಪುರಾಣ'ದ - ೫೦ನೆಯ ಸಂಧಿಯ ೧೨-೧೩ನೆಯ ಪದ್ಯಗಳಲ್ಲಿ ದೇವರ ದಾಸಿಮಯ್ಯನ ಪಾಂಡಿತ್ಯ ಪೂರ್ಣ ವ್ಯಕ್ತಿತ್ವ ಮತ್ತು ಅವನ ಆರಾಧ್ಯದೈವ 'ರಾಮನಾಥ'ನ ಉಲ್ಲೇಖ ಉಕ್ತಗೊಂಡಿದೆ. ಪದ್ಯ-೧೩ರಲ್ಲಿ ಸಕಲವೆಲ್ಲವೂ 'ರಾಮನಾಥ'ನ ಅನುಗ್ರಹದಿಂದ ಉಂಟಾದ ಸೃಷ್ಟಿ – ಎಂದು ನಿರೂಪಿತವಾಗಿದೆ. ಜೇಡರ ದಾಸಿಮಯ್ಯನ,

ಇಳೆ ನಿಮ್ಮ ದಾನ, ಬೆಳೆ ನಿಮ್ಮ ದಾನ
ಸುಳಿದು ಸೂಸುವ ವಾಯು ನಿಮ್ಮ ದಾನ
ನಿಮ್ಮ ದಾನವನುಂಡು ಅನ್ಯರ ಹೊಗಳುವ
ಕುನ್ನಿಗಳನೇನೆಂಬೆ ಕಾಣಾ ರಾಮನಾಥ

– ಎಂಬ ವಚನಕ್ಕೂ ಮೇಲೆ ಉಲ್ಲೇಖಿಸಿದ 'ಬಸವ ಪುರಾಣ'ದ ಪದ್ಯ-೧೩ಕ್ಕೂ ಇರುವ ಹೋಲಿಕೆಯನ್ನು ಗಮನಿಸಿದರೆ ವಚನಕರ್ತೃ ಜೇಡರ ದಾಸಿಮಯ್ಯ - ಘಟಸರ್ಪ ಪವಾಡದ ದೇವರ ದಾಸಿಮಯ್ಯ ಇಬ್ಬರಲ್ಲ, ಒಬ್ಬನೇ ಎಂಬುದು ದೃಢವಾಗುತ್ತದೆ.

ವಚನಕಾರ ದಾಸಿಮಯ್ಯನ ಚರಿತ್ರೆಯನ್ನು ಕುರಿತು ರಚನೆಗೊಂಡಿರುವ ಕವಿ ವಿರುಪಾಕ್ಷ ಪಂಡಿತ (ಕ್ರಿ.ಶ. ೧೮೪೨)ನ ಪುರಾಣ ಕಾವ್ಯದ ಶೀರ್ಷಿಕೆ 'ಶ್ರೀ ದೇವರ ದಾಸಿಮಾರ್ಯ ಪುರಾಣ' ಎಂದಿರುವುದರಿಂದ ದಾಸಿಮಯ್ಯನಿಗಿರುವ 'ದೇವರ' ಎಂಬ ವಿಶೇಷಣಗಳ ಬಗ್ಗೆ ಕವಿ ವಿರುಪಾಕ್ಷ ಪಂಡಿತನಿಗೆ ಸಂದೇಹವೇ ಇಲ್ಲದಿರುವುದು ಸ್ಪಷ್ಟ.

ಮುದನೂರಿನಿಂದ ಸುಮಾರು ೩೦ ಕಿ.ಮೀ. ಅಂತರದಲ್ಲಿರುವ ಹಾವಿನಾಳ ಗ್ರಾಮದ ಕಲ್ಲಯ್ಯನ ದೇವಸ್ಥಾನದಲ್ಲಿರುವ ಕ್ರಿ.ಶ. ೧೧೮೫ರ ಶಾಸನದ (ಕೊನೆಯ) ಪ್ರಶಸ್ತಿ ಭಾಗದಲ್ಲಿ ಶಾಸನದ ಕರ್ತೃವನ್ನು ಕುರಿತಿರುವ ''ಶ್ರೀಮಲೆಯ ಮಲ್ಲಿಕಾರ್ಜುನ ದೇವರದಾಸಿಯುಭಯ ಲಿಪಿಲಿಖಿತ...'' ಎಂಬ ವಿವರವಿದೆ. ಇಲ್ಲಿ ಉಲ್ಲೇಖಗೊಳ್ಳುವ 'ದೇವರ ದಾಸಿ'ಯು ಸಂಸ್ಕೃತ-ಕನ್ನಡ ಎರಡೂ ಭಾಷೆಗಳನ್ನು ಬಲ್ಲ ಪಂಡಿತ, ಜೊತೆಗೆ, ಶಾಸನ ಕವಿ ಕೂಡ ಆಗಿದ್ದನೆಂಬುದರಲ್ಲಿ ಸಂಶಯವಿಲ್ಲ. ಇಲ್ಲಿ ಉಲ್ಲೇಖಗೊಳ್ಳುವ 'ದೇವರ ದಾಸಿ'ಯ ಪಾಂಡಿತ್ಯಕ್ಕೂ 'ಬಸವ ಪುರಾಣ'ದ ಸಂಧಿ-೫೦, ಪದ್ಯ-೧೨ರಲ್ಲಿ ನಿರೂಪಿತಗೊಂಡ ದೇವರ ದಾಸಿಮಯ್ಯನ ಪಾಂಡಿತ್ಯಕ್ಕೂ

# ಅಪ್ಪ ಮತ್ತವನ ಆ ಅವರು



ಅಪ್ಪ ಸುತ್ತುತ್ತಿದ್ದ ರುಂಬಾಲಿನ
ಚುಂಗಿಗೆ ಕಟ್ಟಿದ ಗೊಂಡೇದ
ಗಾಳಿಗೆ ಹಾರಿ ಹರಿದಾಡಿಯೆಂಬಂತೆ
ಹಿಂದೆಯೇ ಬರುತ್ತಿದ್ದರು
ನಮ್ಮಪ್ಪನ ಸೂಳೆಯರು.

ತಂಬಾಕಿನೊಂದಿಗೆ ಉಜ್ಜಿ
ಹದ ಮಾಡಿ ಚಿಲುಮೆಗೆ ತುಂಬಿ
ಚಕಮಕಿ ಕಲ್ಲಿಗೆ ದೂದಿ ಇಟ್ಟು
ಕಟೆದು ಹೊತ್ತಿಸಿ, ಜುರು ಜುರು
ಜಗ್ಗಿ ಉಫ್... ಎಂದು
ಹೊರಬಿಡುತ್ತಿದ್ದ ಅಪ್ಪ!

ಅವರು ಹೊಗೆಯಾಗಿ
ಬಯಲೆಂಬ ಮಾಯೆಯಲ್ಲಿ
ಚಿತ್ರ ವಿಚಿತ್ರ ಆಕಾರಗಳ
ತಳೆಯುತ್ತ ಮಾತಾಗುತ್ತಿದ್ದರು;
ಕತೆಯಾಗುತ್ತಿದ್ದರು...

ಮೂಗ ಮೇಲೆ ಬೆರಳಿಟ್ಟು
ಈ ಸೋಜಿಗವ ನೋಡುತ್ತಿದ್ದ
ನಮಗೆ, ನಮ್ಮಂಥವರಿಗೆ
ಕುತೂಹಲದ ಕುದುರೆ ಏರಿದಂತೆ !
ಅಪ್ಪನಿಗೆ ಸ್ವರ್ಗವ ಗೆದ್ದ
ಶೂರ ಸುಖ...!!

ಸದಾ ಏನೇನೋ ವಟಗುಟ್ಟುತ್ತ ,
ನೆಟಿಕೆ ಮುರಿಯುತ್ತ ,
ಕೈಗೆ ಸಿಕ್ಕ ಚೊಂಬು, ಬಟ್ಟಲುಗಳ
ಕುಟ್ಟುತ್ತ , ಬೈಗುಳಗಳ
ಮಂತ್ರವ ಜಪಿಸುವ ಅಜ್ಜಿಯ
ಮೂಲೆಯ ದನಿ ಯಾರಿಗೂ
ಕೇಳುವುದಿಲ್ಲ.. .. .. !!

ಉಡಲು ಒಳ್ಳೆಯ ಧೋತ್ರವಿಲ್ಲದಿದ್ದರೂ
ಜಾತ್ರೆ , ಹಬ್ಬ, ಹರಿದಿನಗಳಲ್ಲಿ
ಅಪ್ಪ ಕಾಯುತ್ತಿದ್ದ; ಎಲೆ, ಅಡಕೆ
ಸುಣ್ಣವನಿಟ್ಟುಕೊಂಡು ತನ್ನ
ಮಾತಾಗುವ, ಕತೆಯಾಗುವ
ಸೂಳೆಯರಿಗಾಗಿ.. ..

ಇವನ ವಿಚಿತ್ರ ವೀರ್ಯದ ಈ
ಆಟವ ಕಂಡು ಅವ್ವ ,
ಹಿಟ್ಟನ್ನು ಕಣ್ಣೀರಿನಲ್ಲಿ ಕಲಸಿ,
ನಾದಿ, ರೊಟ್ಟಿಯೊಂದಿಗೆ
ತನ್ನ ನಸೀಬನ್ನೂ ತಟ್ಟಿ ತಟ್ಟಿ
ತೆಳ್ಳಗೆ ಮಾಡಿ ನಿಗಿ ನಿಗಿ
ಕೆಂಡದಲ್ಲಿ ಸುಡುತ್ತಿದ್ದಳು...

**ಮಾರುತಿ ದಾಸಣ್ಣವರ**
ಕನ್ನಡ ಅಧ್ಯಾಪಕರು, ಜವಾಹರ ನವೋದಯ ವಿದ್ಯಾಲಯ
ಗಾಳಿಬೀಡು, ಮಡಿಕೇರಿ ತಾಲೂಕು
ಕೊಡಗು ಜಿಲ್ಲೆ - ೫೭೧ ೨೦೧

ಸಂಬಂಧವಿರುವಂತಿದ್ದು, ಈ ಶಾಸನದಲ್ಲಿ ಉಲ್ಲೇಖಿತನಾಗಿರುವ 'ದೇವರ ದಾಸಿ' ವಚನಕಾರನಾದ ದೇವರ ದಾಸಿಮಯ್ಯನೇ ಆಗಿರುವಂತೆ ತೋರುತ್ತದೆ. ಹೀಗೆ ದೇವರ ದಾಸಿಮಯ್ಯ - ಜೇಡರ ದಾಸಿಮಯ್ಯ ಎಂಬ ಹೆಸರುಗಳು ಒಬ್ಬನೇ ಆದ ರಾಮನಾಥನ ದೈವಭಕ್ತ ಮುದನೂರು ದಾಸಿಮಯ್ಯನಿಗೆ ಸಂಬಂಧಿಸಿವೆ ಎನ್ನುವುದರಲ್ಲಿ ಸಂದೇಹವಿಲ್ಲ.

ವಸ್ತುಸತ್ಯ ಹೀಗಿರುವಾಗಲೂ ನನ್ನ ಗುರುಗಳೂ ಮತ್ತು ವಿದ್ವಾಂಸರಾದ ಪ್ರೊ॥ ಎಂ. ಎಂ. ಕಲಬುರ್ಗಿಯವರು 'ದೇವೂರ ದಾಸಿಮಯ್ಯ' ಎಂಬ ತಮ್ಮ ಲೇಖನದಲ್ಲಿ ದೇವರ ದಾಸಿಮಯ್ಯ 'ದೇವೂರ'(ಹಿಪ್ಪರಗಿ ಹತ್ತಿರದ) ವನಾಗಿರಬಹುದೇ, ಎಂಬ ಸಂದೇಹಾತ್ಮಕ ಊಹೆ ಮಾಡಿದ್ದಾರೆ (ಮಾರ್ಗ-ಸಂಪುಟ-೧, ಪು. ೧೫೬). ಚಾಳುಕ್ಯ ದೊರೆ ಇಮ್ಮಡಿ ಜಯಸಿಂಹನ ರಾಣಿ ಸುಗ್ಗಲೆಯ ದಾನ ಶಾಸನವೊಂದು 'ದೇವೂರ'ಲ್ಲಿ ಲಭಿಸಿರುವುದನ್ನು ಗಮನಿಸಿ, 'ದೇವೂರು' ರಾಣಿ ಸುಗ್ಗಲೆಯ ತವರೂರಾಗಿರಬಹುದೆಂದೂ, ಅವಳ ಗುರುವಾದ ದೇವರ ದಾಸಿಮಯ್ಯನ ಊರು ಅದೇ ಆಗಿರಬೇಕೆಂದೂ ಡಾ॥ ಕಲಬುರ್ಗಿಯವರು ಊಹಿಸಿದ್ದಾರೆ. ಆದರೆ ರಾಣಿ ಸುಗ್ಗಲೆಯ ದಾನ ಶಾಸನಗಳು ತೋರಗಲ್ಲು (S.I.I. XII Inscription No. 78) ಮತ್ತು ನಿಡಗುಂದಿ (S.I.I. XII Inscription No. 117)ಗಳಲ್ಲೂ ಲಭಿಸುತ್ತವೆ. ಹೀಗಾಗಿ ದೇವೂರಲ್ಲಿ ರಾಣಿ ಸುಗ್ಗಲೆಯ ದಾನಶಾಸನ ಸಿಕ್ಕ ಮಾತ್ರಕ್ಕೆ ಅದೇ ಅವಳ ತವರೂರು ಎಂದಾಗಲೀ, ಅದು ದೇವರ ದಾಸಿಮಯ್ಯನ ಊರು ಎಂದಾಗಲೀ ಊಹಿಸುವುದು ಸಮಂಜಸವೆನಿಸಲಾರದು.

ಇನ್ನೊಂದು ಕಡೆ, 'ಬಸವಣ್ಣನ ಸಂಪ್ರದಾಯ'ವನ್ನು ವಿವೇಚಿಸುತ್ತಾ, ಡಾ॥ ಎಂ. ಎಂ. ಕಲಬುರ್ಗಿಯವರು ಹಸ್ತಪ್ರತಿಯೊಂದರ ಪ್ರಶಸ್ತಿ ಭಾಗದಲ್ಲಿ ಬರುವ ''ಈ ಪುಸ್ತಕವನ್ನು ದೇವರದಾಸೈಯ್ಯನ ಸಾಂಪ್ರದಾಯಿಕ ಚಿತ್ತಾಪುರದ ಅಮಾತೆಪ್ಪನವರಿಗೆ ... ಬರೆದುಕೊಟ್ಟ ಪಂಚತಂತ್ರ...'' ಎಂಬ ವಿವರವನ್ನು ಸ್ಪಷ್ಟೀಕರಿಸುತ್ತ, ''ಬಹುಶಃ ಇಲ್ಲಿ ಅಮಾತೆಪ್ಪನು ಜಾತಿಯಿಂದ ಜೇಡರವನಾಗಿದ್ದು, ತನ್ನನ್ನು ದೇವರ ದಾಸಿಮಯ್ಯನ ಸಂಪ್ರದಾಯದವನೆಂದೂ... ಹೇಳಿಕೊಂಡಿರಬಹುದು'' (ಡಾ॥ ಎಂ. ಎಂ. ಕಲಬುರ್ಗಿ - ಮಾರ್ಗ ಸಂಪುಟ-೩, ಪುಟ-೨೦೭) ಎಂಬ ವಿಚಾರವನ್ನು ವ್ಯಕ್ತಪಡಿಸಿದ್ದಾರೆ. ಇಲ್ಲಿ ದೇವರ ದಾಸಿಮಯ್ಯನ ಜಾಡರ ಸಂಪ್ರದಾಯವನ್ನು ಒಪ್ಪಿಕೊಳ್ಳುವ ಡಾ॥ ಕಲಬುರ್ಗಿಯವರ ವಿಚಾರದಲ್ಲಿ 'ಜೇಡರ' - 'ದೇವರ' ವಿಶೇಷಣಗಳ ದಾಸಿಮಯ್ಯ ಇಬ್ಬರಲ್ಲ; ಒಬ್ಬನೇ – ಎಂದೂ ಒಪ್ಪಿಕೊಳ್ಳಬಹುದಿತ್ತು.

'ಬಸವಪೂರ್ವ ಯುಗದ ವಚನಕಾರರು' ಎಂಬ ಲೇಖನದಲ್ಲಿ ವಿದ್ವಾಂಸರಾದ ಡಾ॥ ಎಂ. ಚಿದಾನಂದ ಮೂರ್ತಿಯವರು ಜೇಡರ ದಾಸಿಮಯ್ಯನ ವಚನಗಳಲ್ಲಿ ಉಲ್ಲೇಖಿತರಾದ ಮಾದಾರ ಚೆನ್ನಯ್ಯ, ಡೋಹರ ಕಕ್ಕಯ್ಯ, ಕೊಂಡಗುಳಿ ಕೇಶಿರಾಜ ಮುಂತಾದವರ ಕಾಲವನ್ನು ಚರ್ಚಿಸುತ್ತ ಚೆನ್ನಯ್ಯ - ಕಕ್ಕಯ್ಯ - ಶಂಕರ - ದಾಸಿಮಯ್ಯ ಮತ್ತು ದುಗ್ಗಳೆಯರ ವಚನಗಳಲ್ಲಿ ಬಸವಾದಿ ಶರಣರ ಉಲ್ಲೇಖವಿರುವುದನ್ನು ಮುಖ್ಯವಾಗಿರಿಸಿಕೊಂಡು ಸುಮಾರು ಕ್ರಿ.ಶ. ೧೦೪೦ಕ್ಕಿಂತ




ಹಿಂದೆ ಜೀವಿಸಿದ್ದ ದಾಸಿಮಯ್ಯ ಸುಮಾರು ೧೧೬೦ರಲ್ಲಿದ್ದ ಬಸವಣ್ಣನವರನ್ನು ಸ್ಮರಿಸುವುದು ಅಸಾಧ್ಯವೆಂದು ಕಲ್ಪಿಸಿಕೊಂಡು ಇಬ್ಬರು ದಾಸಿಮಯ್ಯರನ್ನು ಊಹಿಸುತ್ತಾರೆ (ಡಾ॥ ಎಂ. ಚಿದಾನಂದಮೂರ್ತಿ - ಲಿಂಗಾಯತ ಅಧ್ಯಯನಗಳು, ಪು. ೩೧-೩೨). ಡಾ॥ ಎಂ. ಚಿದಾನಂದ ಮೂರ್ತಿಯವರ ಈ ಊಹೆಯು ಕಾಲದ ಕಟ್ಟಳೆಯಲ್ಲಿ ದೇವರ ದಾಸಿಮಯ್ಯನ ಜೀವಿತ ಕಾಲವನ್ನು ಗುರುತಿಸುವ ತೊಡಕಿನಲ್ಲಿ ಸಿಕ್ಕು, ಸಾಕಷ್ಟು ಆಕರ ದಾಖಲೆಗಳ ಕೊರತೆ ಕಾರಣವಾಗಿ ಅದು ಸಾಧ್ಯವಾಗದೆ, ಅದನ್ನು ಪರಿಹರಿಸಿಕೊಳ್ಳಲು ಇಬ್ಬರು ದಾಸಿಮಯ್ಯನವರನ್ನು ಕಲ್ಪಿಸಿಕೊಂಡಿರುವಂತೆ ತೋರುತ್ತಿದ್ದು, ಅವರ ಈ ಕಲ್ಪನೆ ವಾಸ್ತವವೆನಿಸುವುದಿಲ್ಲ. ಕ್ರಿ.ಶ. ಸುಮಾರು ೧೦೪೦ರ ಹಿಂದೆ ಜೀವಿಸಿದ್ದ ದಾಸಿಮಯ್ಯ ಕ್ರಿ.ಶ. ಸುಮಾರು ೧೧೨೦ರವರೆಗೆ ಬದುಕಿರಲೂಬಹುದು ಎಂದು ಊಹಿಸುವುದು ಸಮಂಜಸವೆಂದು ತೋರುವುದಿಲ್ಲ. ದಾಸಿಮಯ್ಯನ ವಚನಗಳಲ್ಲಿ ಉಲ್ಲೇಖಗೊಂಡಿರುವ ಚೆನ್ನಯ್ಯ-ಕಕ್ಕಯ್ಯ-ಕೊಂಡಗುಳಿ ಕೇಶಿರಾಜ ಮುಂತಾದವರು ದಾಸಿಮಯ್ಯನಿಗಿಂತ ವಯಸ್ಸಿನಲ್ಲಿ ಕಿರಿಯವರಾಗಿದ್ದು, ಬಸವನ ಕಾಲದವರೆಗೆ ಬಾಳಿರಬಹುದೆಂದು ಊಹಿಸುವುದೇ ಹೆಚ್ಚು ವಾಸ್ತವವೆನಿಸುತ್ತದೆ. ಬಸವಪೂರ್ವಯುಗದ ಬಹುತೇಕ ಶರಣರ ವಚನಗಳ ವಚನಾಂತ್ಯದಲ್ಲಿ ಇಷ್ಟ ದೈವದ ಅಂಕಿತಕ್ಕಿಂತ ಮೊದಲು ಉಲ್ಲೇಖಗೊಳ್ಳುವ ಬಹುತೇಕ ಶರಣರ ಹೆಸರುಗಳು ಇತಿಹಾಸ ಪ್ರಜ್ಞೆ ದೃಷ್ಟಿಯಿಂದ ಮುಗ್ಧರೂ ಮತ್ತು ಧಾರ್ಮಿಕತೆಯ ದೃಷ್ಟಿಯಿಂದ ಭಾವುಕರೂ ಆದ ಲಿಪಿಕಾರರಿಂದ ಉಂಟಾಗಿರಬಹುದಾದ ಸ್ಖಾಲಿತ್ಯದ ಉಕ್ತಿಗಳಾಗಿ ತೋರುತ್ತವೆ. ಅವುಗಳನ್ನೇ ಮುಖ್ಯವಾಗಿಟ್ಟುಕೊಂಡು ಶರಣರ ಕಾಲವನ್ನು ನಿರ್ಧರಿಸುವುದು ಸೂಕ್ತವೆನಿಸಲಾರದು. ಮಾದಾರ ಚೆನ್ನಯ್ಯ - ಡೋಹರ ಕಕ್ಕಯ್ಯ - ಶಂಕರ ದಾಸಿಮಯ್ಯ - ದುಗ್ಗಳೆಯರ ವಚನಗಳ ಅಂತ್ಯದಲ್ಲಿರುವ ಬಸವಾದಿ ಶರಣರ ಉಲ್ಲೇಖಗಳು ಪ್ರಾಯಶಃ ಲಿಪಿಕಾರರಿಂದ ಸೇರ್ಪಡೆಗೊಂಡ ಸ್ಖಾಲಿತ್ಯ ಕಾರಣವಾಗಿ ಉಕ್ತಗೊಂಡಿರುವುವೆಂದರೆ ಅತಿಶಯವೆನಿಸಲಾರದು.

ದೇವರ ದಾಸಿಮಯ್ಯ - ಜೇಡರ ದಾಸಿಮಯ್ಯ ಇಬ್ಬರೂ ಬೇರೆ ಬೇರೆ ವ್ಯಕ್ತಿಗಳು ಎಂದು ಊಹಿಸಿರುವ ಡಾ॥ ಎಚ್. ದೇವೀರಪ್ಪ ಮತ್ತು ಪ್ರೊ॥ ಆರ್. ರಾಚಪ್ಪನವರ ಊಹೆಗಳು ಕೂಡ ಆಕರ ದಾಖಲೆಗಳ ಕೊರತೆಯಿಂದ ಬಳಲುತ್ತಿದ್ದು, ಅವು ಕೂಡ ಸಂದೇಹಾತ್ಮಕ ಊಹೆಗಳಾಗಿವೆ. ವಿದ್ವಾಂಸರಾದ ಪ್ರೊ॥ ಆರ್. ರಾಚಪ್ಪನವರು 'ದಾಸಿಮಯ್ಯಗಳು' ಎಂಬ ತಮ್ಮ ಲೇಖನದಲ್ಲಿ ದೇವರ ದಾಸಿಮಯ್ಯ - ಜೇಡರ ದಾಸಿಮಯ್ಯ ಇಬ್ಬರೂ ಭಿನ್ನರೆಂದು ಅಭಿಪ್ರಾಯ ಪಟ್ಟಿರುವುದು (ಪ್ರೊ॥ ಆರ್. ರಾಚಪ್ಪ - ವಚನಾನುಭವ, ಪು. ೩೨-೪೪) ಕೇವಲ ಕಲ್ಪಿತ ಕತೆಯನ್ನಾಧರಿಸಿದ ಸಂದೇಹಾತ್ಮಕ ಊಹೆಯಿಂದಲೇ ಹೊರತು ಸಮುಚಿತ ಸಾಕ್ಷ್ಯಾಧಾರಗಳಿಂದಲ್ಲ. ಶರಣೆ ದುಗ್ಗಳೆಯ ವಚನಗಳಲ್ಲಿ ಬಸವಣ್ಣ, ಚೆನ್ನಬಸವಣ್ಣ, ಪ್ರಭುದೇವರ ಉಲ್ಲೇಖಗಳು ಕಂಡುಬರುವುದಕ್ಕೆ ಪ್ರಾಯಶಃ ಲಿಪಿಕಾರರಿಂದ ಉಂಟಾದ ಸ್ಖಾಲಿತ್ಯವು ಕಾರಣವೇ ಹೊರತು ವಾಸ್ತವವೆನಿಸುವುದಿಲ್ಲ.

ಮೇಲಿನ ಚರ್ಚೆಯಿಂದ ಈ ಕೆಳಗಿನ ಅಂಶಗಳನ್ನು ಸ್ಪಷ್ಟಪಡಿಸಬಹುದು :

೧) ದಾಸಿಮಯ್ಯನ ಕಾಲದಿಂದ ಸು. ೧೯೭೦ರ ದಶಕದವರೆಗೆ ವಚನಕಾರರಿಗಾಗಲಿ, ಕವಿಗಳಿಗಾಗಲಿ 'ದೇವರ' - 'ಜೇಡರ' ಎಂಬ ವಿಶೇಷಣಗಳು ಒಬ್ಬನೇ ದಾಸಿಮಯ್ಯನಿಗೆ ಅನ್ವಯಿಸುತ್ತವೆಂಬುದರಲ್ಲಿ ಸಂದೇಹವಿಲ್ಲ.

೨) ಹಿರಿಯ ಸಂಶೋಧಕರಾದ ಡಾ॥ ಫ. ಗು. ಹಳಕಟ್ಟಿ, ಡಾ॥ ಆರ್. ಸಿ. ಹಿರೇಮಠ, ಡಾ॥ ಎಲ್. ಬಸವರಾಜು, ಡಾ॥ ಎಸ್. ಶ್ರೀಕಂಠಶಾಸ್ತ್ರಿ, ಎಂ. ಗೋವಿಂದ ಪೈ, ಪ್ರೊ॥ ಸೀತಾರಾಮ ಜಾಗೀರದಾರ ಮುಂತಾದವರು ದಾಸಿಮಯ್ಯನನ್ನು ಕುರಿತು ಬಹಳಷ್ಟು ಚರ್ಚಿಸಿರುವರಾದರೂ ಈ ಬಗ್ಗೆ ಸಂದೇಹ ಅವರಿಗಿಲ್ಲದಿರುವುದು ಗಮನಾರ್ಹ.

೩) 'ದೇವರ' - 'ಜೇಡರ' ಎಂಬ ವಿಶೇಷಣಗಳು ಮುದನೂರಿನ ದಾಸಿಮಯ್ಯನಿಗೆ ಸಂಬಂಧಿಸಿವೆ. ಈ ಬಗ್ಗೆ ದಾಸಿಮಯ್ಯನ ಕಾಲದಿಂದ ೧೯೭೦ರ ದಶಕದವರೆಗೆ ಯಾವುದೇ ಸಂದೇಹಗಳಿರಲಿಲ್ಲ.

೪) ಕಾಲ ಗುರುತಿಸುವ ತೊಡಕಿಗೆ ಸಿಲುಕಿದ ಕೆಲವರು ಸಂಶೋಧಕರು, ಸಂದೇಹಪಟ್ಟು ಇಬ್ಬರು ದಾಸಿಮಯ್ಯರನ್ನು ಕಲ್ಪಿಸಿಕೊಳ್ಳುವ ಪ್ರಕ್ರಿಯೆಗೆ ತೊಡಗಿದ್ದು, ಕ್ರಿ.ಶ. ಸುಮಾರು ೧೯೭೦ರಿಂದೀಚೆಗೆ ಮಾತ್ರ. ಆದರೆ ಇವರ ವಾದಕ್ಕೆ ಗಟ್ಟಿಯಾದ ಪುರಾವೆಗಳಿಲ್ಲದೆ ಇದುವರೆಗೂ ಅವು ಕೇವಲ ಊಹೆಗಳಾಗಿಯೇ ಉಳಿದಿವೆ.

ಒಟ್ಟಾರೆಯಾಗಿ, ಸಂಶೋಧನೆಯ ಉದ್ದೇಶ ಸತ್ಯದ ಶೋಧನೆಯೇ ಆಗಿದ್ದು, ಅದು ದೇವರ ದಾಸಿಮಯ್ಯ - ಜೇಡರ ದಾಸಿಮಯ್ಯ ಕುರಿತ ವಿಚಾರದಲ್ಲಿ ಇಬ್ಬರೂ ಬೇರೆ ಬೇರೆ ವ್ಯಕ್ತಿಗಳೆಂಬುದು ಕೇವಲ ಊಹೆಯಷ್ಟೆ.

**ಡಾ॥ ರಾಮರೆಡ್ಡಿ ಎಸ್. ರಡ್ಡೇರ**
ಸಹಾಯಕ ಪ್ರಾಧ್ಯಾಪಕರು, ಆರ್.ಟಿ.ಇ.ಎಸ್. ಕಲಾ, ವಿಜ್ಞಾನ ಮತ್ತು ವಾಣಿಜ್ಯ ಮಹಾವಿದ್ಯಾಲಯ, ರಾಣೇಬೆನ್ನೂರು - ೫೮೧ ೧೧೫

# ಕನ್ನಡಕ್ಕೊಂದು ಕನ್ನಡ ಕಾವ್ಯಮೀಮಾಂಸೆ ಮತ್ತು ಪ್ರೊ॥ ಕಿ. ರಂ. ನಾಗರಾಜ

**ಡಾ॥ ಕಾ. ವೆಂ. ಶ್ರೀನಿವಾಸಮೂರ್ತಿ**

ಕನ್ನಡದ ಶೈಕ್ಷಣಿಕ ವಲಯದಲ್ಲಿ ಕನ್ನಡ ಛಂದಸ್ಸು, ಕನ್ನಡ ಭಾಷಾ ವಿಜ್ಞಾನ ಮುಂತಾದ ಪರಿಕಲ್ಪನೆಗಳು ಪ್ರತ್ಯೇಕ ಜ್ಞಾನಶಾಖೆಗಳಾಗಿ ಅಸ್ತಿತ್ವ ಪಡೆದಿವೆ. ಹಿಂದೆ ಕನ್ನಡ ಭಾಷೆಯಲ್ಲಿ ನಿರ್ವಚನಗೊಳ್ಳುತ್ತಿದ್ದರೂ ಇವು ಸಂಸ್ಕೃತದ ಪ್ರಭಾವದಿಂದ ಮುಕ್ತಿ ಹೊಂದಿರಲಿಲ್ಲ. ಆದ್ದರಿಂದ ಸಂಸ್ಕೃತದ ಪಾಠಗಳನ್ನೇ ಕನ್ನಡಕ್ಕೂ ಬಹುತೇಕ ಆರೋಪಿಸಿ ಹೇಳಲಾಗುತ್ತಿತ್ತು. ಈ ಪರಿಪಾಠ ಇಂದಿಗೂ ಪೂರ್ಣವಾಗಿ ತಪ್ಪಿಲ್ಲ. ಆದರೂ ಇಂದು ಈಗಾಗಲೇ ಪ್ರಸ್ತಾಪಿಸಿರುವಂತೆ ಪ್ರತ್ಯೇಕವಾಗಿ ಕನ್ನಡ ಛಂದಸ್ಸು, ಕನ್ನಡ ಭಾಷಾ ವಿಜ್ಞಾನ ಎಂಬುವುದು ರೂಪುಗೊಂಡು, ಅವನ್ನು ಯಥಾವತ್ತಾಗಿ ಶೈಕ್ಷಣಿಕ ವಲಯದಲ್ಲಿ, ವಿಶೇಷವಾಗಿ ಕಾಲೇಜು ಮತ್ತು ವಿಶ್ವವಿದ್ಯಾಲಯದ ಪಠ್ಯಕ್ರಮದಲ್ಲಿ ನೆಲೆಗೊಳಿಸಲಾಗಿದೆ. ಇಂತಹ ನೆಲೆ ಕನ್ನಡದ ಕಾವ್ಯಮೀಮಾಂಸೆಗೆ ಯಾಕೆ ದಕ್ಕಿಲ್ಲ ಎಂಬ ಪ್ರಶ್ನೆ ಮೂಡುತ್ತದೆ.



ಕನ್ನಡಕ್ಕೊಂದು ಪ್ರತ್ಯೇಕ ಐಡೆಂಟಿಟಿ ಸಾವಿರಾರು ವರ್ಷಗಳಿಂದ ಇದೆ. ಇದರ ಭಾಗವಾಗಿ ಶ್ರೀಮಂತ ಸಾಹಿತ್ಯ ರಚನೆಯೂ ಆಗಿದೆ. ಇಂತಹ ಸಾಹಿತ್ಯ ಸೃಷ್ಟಿಗೆ ಹಿನ್ನೆಲೆಯಾಗಿ ಕಾವ್ಯಮೀಮಾಂಸೆಯೊಂದು ಇದ್ದಿರಲೇಬೇಕು. ಆದರೆ ಈ ಸಂಬಂಧದ ಪೂರ್ಣರೂಪದ ಮೂರ್ತ ಕೃತಿಗಳು ಅಲ್ಲೊಂದು ಇಲ್ಲೊಂದು ಸಿಗುತ್ತವೆ. ಉದಾಹರಣೆಗೆ, 'ಕವಿರಾಜಮಾರ್ಗ'. ಇಂತಹ ಒಂದೆರಡು ಕಥೆಗಳು ಸಮಸ್ತ ಕನ್ನಡ ಸಾಹಿತ್ಯ ಸೃಷ್ಟಿಯನ್ನು ರೂಪಿಸಿವೆಯೇ ಎಂಬ ಪ್ರಶ್ನೆಗೆ ಇಲ್ಲ ಎಂದೇ ಹೇಳಬೇಕಾಗುತ್ತದೆ. ಕಾರಣ, ಕಾವ್ಯಮೀಮಾಂಸೆಯೆಂಬುದು ಕವಿಗಳಿಗೆ ಮಾರ್ಗಸೂಚಿಯಲ್ಲ. ಇದರಂತೆಯೇ ನಡೆದವರು ದೊಡ್ಡ ಕವಿಗಳಾದ ನಿದರ್ಶನಗಳೂ ಇಲ್ಲ. ಹಾಗಾಗಿ ಕಾವ್ಯದ ಸಂದರ್ಭಕ್ಕೆ ಕಾವ್ಯಮೀಮಾಂಸೆ ಎಂಬುದು ಸಾಪೇಕ್ಷವಷ್ಟೆ.

ಏನೇ ಆದರೂ ಕನ್ನಡ ಸಾಹಿತ್ಯವು ಕಾಲದಿಂದ ಕಾಲಕ್ಕೆ, ಪ್ರಕಾರದಿಂದ ಪ್ರಕಾರಕ್ಕೆ, ಕವಿಯಿಂದ ಕವಿಗೆ, ಶಾಸ್ತ್ರಕಾರನಿಂದ ಶಾಸ್ತ್ರಕಾರನಿಗೆ ವೈವಿಧ್ಯಮಯವಾಗಿ ಬೆಳೆದಿದೆ. ಇದಕ್ಕೆ ಮುಖಗಳು ಅಸಂಖ್ಯ. ಇದು ಜಂಗಮರೂಪಿ. ಹಾಗಾಗಿ ಇದನ್ನು ಹಿಂಬಾಲಿಸುತ್ತಿರುವ ಅಥವಾ ಮುನ್ನಡೆಸುತ್ತಿರುವ ಕಾವ್ಯ ಮೀಮಾಂಸೆಯೂ ಸ್ಥಾವರವಲ್ಲ.

ಹೀಗೆ ಕಾವ್ಯದ ಗರ್ಭದಲ್ಲಿಯೇ ಕಾವ್ಯಮೀಮಾಂಸೆ ಅರಳಿದೆ. ಇಂತಹ ಕಾವ್ಯಮೀಮಾಂಸೆಗೆ ಲಕ್ಷ್ಯ ಕೃತಿಗಳಾಗಿ ಒಟ್ಟು ಕೃತಿಗಳನ್ನು ಪರಿಭಾವಿಸಬೇಕು. ಇದಕ್ಕೆ ಹೊರತಾದ ಇನ್ನೊಂದು ನೆಲೆಯಲ್ಲಿ ಕಾವ್ಯದ ವಿವಿಧ ತತ್ವಗಳಾದ ಕವಿ, ಸಹೃದಯ, ವಿಮರ್ಶಕ, ಪ್ರತಿಭೆ, ವ್ಯುತ್ಪತ್ತಿ ಮುಂತಾದುವು ಕವಿಯೋ, ಲಾಕ್ಷಣಿಕನೋ ತನ್ನ ಕೃತಿಯನ್ನು ಕುರಿತು ನೀಡುವ ಹೇಳಿಕೆಗಳು ತನ್ನ ಕಾವ್ಯದ ಮೀಮಾಂಸೆಯನ್ನೇ ಮೂಡಿಸುತ್ತವೆ ಎಂದು ಹೇಳುವಂತಿಲ್ಲ. ಕಾರಣ, ಇವು ಈ ಕವಿ ಅಥವಾ ಲಾಕ್ಷಣಿಕನು ಆದರ್ಶ ಕಾವ್ಯವನ್ನು ಕುರಿತ ಹೇಳಿಕೆಗಳಾಗಿರುವ ಸಾಧ್ಯತೆಯೇ ಹೆಚ್ಚಾಗಿರುತ್ತದೆ. ಆದ್ದರಿಂದ ಇಂತಹ ಹೇಳಿಕೆಗಳಿಂದಲೇ ಕನ್ನಡ ಕಾವ್ಯಮೀಮಾಂಸೆಯನ್ನು ಕಟ್ಟುವುದು ಉಚಿತ ಎನಿಸದು. ಆದ್ದರಿಂದ ಇಂತಹ ಹೇಳಿಕೆ ಮತ್ತು ಕೃತಿಯಾಂತರ್ಗತ ಮೀಮಾಂಸೆಯ ದ್ರವ್ಯದಿಂದ ಕಾವ್ಯಮೀಮಾಂಸೆಯನ್ನು ಕಟ್ಟುವುದು ಸೂಕ್ತವೆನ್ನಿಸುತ್ತದೆ. ಈ ತಾತ್ವಿಕ ನೆಲೆಯಲ್ಲಿ ಕನ್ನಡ ಕಾವ್ಯಮೀಮಾಂಸೆಯನ್ನು ಕಟ್ಟುವ ಪ್ರಯತ್ನ ನಡೆದಿರುವುದನ್ನು ಕಳೆದ ನೂರು ವರ್ಷಗಳಿಂದ ಕಾಣಲು ಸಾಧ್ಯವಿದೆ.

ಬಹುಮುಖೀ ನೆಲೆಯಲ್ಲಿ ಪ್ರೊ॥ ಕಿ. ರಂ. ಅವರು ಕನ್ನಡ ಕಾವ್ಯ ಮೀಮಾಂಸೆಯನ್ನು ಮಂಡಿಸುವ ಪ್ರಯತ್ನವನ್ನು ಮಾಡುತ್ತಾರೆ. ಇದಕ್ಕೆ ಪೂರಕವಾಗಿ ವಿಭಿನ್ನ ನೆಲೆಗಳಲ್ಲಿ  ಅನೇಕ ವಿದ್ವಾಂಸರು, ವಿಶೇಷವಾಗಿ ವಿಶ್ವವಿದ್ಯಾಲಯಗಳಲ್ಲಿ ಈ ಸಂಬಂಧದ ಪಾಠ ಹೇಳುತ್ತ ಬಂದಿರುವ ಪ್ರಾಧ್ಯಾಪಕರು ಕೃತಿಗಳನ್ನು ರಚಿಸಿದ್ದಾರೆ. ಆದರೂ ನನ್ನ ತಿಳುವಳಿಕೆಯ ಮಿತಿಯಲ್ಲಿ ಇದನ್ನು ಸಹ ಈಗಾಗಲೇ ಪ್ರಸ್ತಾಪಿಸಿರುವಂತೆ ಕನ್ನಡ ಛಂದಸ್ಸಿನಂತೆ ಕನ್ನಡ ಭಾಷಾ ವಿಜ್ಞಾನದಂತೆ 'ಕನ್ನಡ ಕಾವ್ಯ ಮೀಮಾಂಸೆ' ಎಂದು ಕಾವ್ಯಮೀಮಾಂಸೆಯ ಅಥವಾ ತೌಲನಿಕ ಕಾವ್ಯಮೀಮಾಂಸೆಯ ಅಥವಾ ಭಾರತೀಯ ಕಾವ್ಯ ಮೀಮಾಂಸೆಯ ಅವಿಭಾಜ್ಯ ಅಂಗವೆಂಬಂತೆ ಯಾಕೆ ಪ್ರತಿಷ್ಠಾಪಿಸಲಾಗಲಿಲ್ಲ ಎಂಬ ಪ್ರಶ್ನೆಯನ್ನು ಮತ್ತೊಮ್ಮೆ ಮುಂದುಮಾಡುತ್ತಿದ್ದೇನೆ. ಇಂತಹ ಪ್ರಯತ್ನವನ್ನು, ಅಂದರೆ 'ಕನ್ನಡ ಕಾವ್ಯಮೀಮಾಂಸೆ'ಯನ್ನು ಹೀಗೆ ಕಾವ್ಯಮೀಮಾಂಸೆಯ ಪ್ರತ್ಯೇಕ ಜ್ಞಾನಶಾಖೆಯನ್ನಾಗಿ ಬೆಂಗಳೂರು ವಿಶ್ವವಿದ್ಯಾಲಯ ಕನ್ನಡ ಅಧ್ಯಯನ ಕೇಂದ್ರವು ತನ್ನ ಎಂ.ಎ. ಕನ್ನಡದ ಪಠ್ಯಕ್ರಮವನ್ನಾಗಿ ಮಾಡಿತು. ಇದು ಆದದ್ದು ೧೯೯೮ರಲ್ಲಿ. ಇದರ ಒತ್ತಾಸೆಯಾಗಿ ಕಿ.ರಂ. ಅವರಿದ್ದರು.

ಹಿಂದೆ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಎ. ಆರ್.  ಕೃಷ್ಣಶಾಸ್ತ್ರಿಗಳ ಕಾಲದಲ್ಲಿ 'ಅಲಂಕಾರಶಾಸ್ತ್ರ' ಎಂಬ ಹೆಸರಿನಲ್ಲಿ ಕಾವ್ಯಮೀಮಾಂಸೆಯ ಬೋಧನೆ ನಡೆದಿತ್ತು. ಇದು ತೀನಂಶ್ರೀ, ಕುವೆಂಪು ಅವರ ಕಾಲದಲ್ಲಿ 'ಕಾವ್ಯಮೀಮಾಂಸೆ' ಎಂದಾಯಿತು. ಆನಂತರದ ಕಾಲಘಟ್ಟದಲ್ಲಿ ತೌಲನಿಕ ಕಾವ್ಯಮೀಮಾಂಸೆ, ಭಾರತೀಯ ಮತ್ತು ಪಾಶ್ಚಾತ್ಯ ಕಾವ್ಯಮೀಮಾಂಸೆ ಎಂಬ ಪರಿಭಾಷೆ, ಪರಿಕಲ್ಪನೆಗಳಲ್ಲಿ ಇದು ಬೆಳೆಯಿತು. ಆದರೆ ಈ ಹಂತದಲ್ಲಿ ಈ ವಿವಿಧ ಕಾವ್ಯಮೀಮಾಂಸೆಗಳ ತತ್ವಗಳು ನೆಲೆ ಪಡೆದಿರುವ ಕನ್ನಡ ಕಾವ್ಯವನ್ನು ಅನುಲಕ್ಷಿಸಿ, ಕಾವ್ಯಮೀಮಾಂಸೆಯನ್ನು ಚರ್ಚಿಸಲಾಗುತ್ತಿತ್ತು. ಆದರೆ ಈ ಹಂತದಲ್ಲಿ ಈ ಪ್ರಬಂಧದ ಆರಂಭದಲ್ಲಿ ಪ್ರಸ್ತಾಪಿಸಿದಂತಹ ಕನ್ನಡ ಛಂದಸ್ಸು, ಕನ್ನಡ ಭಾಷಾವಿಜ್ಞಾನದಂತಹ ಕನ್ನಡ ಕಾವ್ಯ/ಸಾಹಿತ್ಯ ಮೀಮಾಂಸೆಯೆಂಬ ಜ್ಞಾನಶಾಖೆಯೊಂದು ಯಾಕೆ ಅಸ್ತಿತ್ವ ಪಡೆಯಲಿಲ್ಲ ಎಂಬ ಪ್ರಶ್ನೆ ಸಹಜವಾಗಿ ಹುಟ್ಟುತ್ತದೆ. ಈ ಪ್ರಶ್ನೆಗೆ ಉತ್ತರ ರೂಪದಲ್ಲಿ ಸಂಸ್ಕೃತ

ಮತ್ತು ಕನ್ನಡ ಕಾವ್ಯತತ್ವಗಳ ನಡುವೆ ಸ್ಪಷ್ಟ ಗೆರೆ ಎಳೆಯಲು ಸಾಧ್ಯವಾಗದ ಸ್ಥಿತಿಯನ್ನು ನೋಡ ಬಹುದು. ಆದರೂ ಪಂಡಿತ ಪ್ರೇರಣೆ ಮತ್ತು ಅದೇ ಪಂಡಿತರನ್ನು ಗುರಿಯನ್ನಾಗಿ ಹೊಂದಿದ ಸಂಸ್ಕೃತ ಸಾಹಿತ್ಯ ಮತ್ತು ಅದರ ಮೀಮಾಂಸೆ ಜನರ ಪ್ರೇರಣೆ ಮತ್ತು ಜನರನ್ನು ಗುರಿಯನ್ನಾಗಿ ಹೊಂದಿದ ಕನ್ನಡ ಕಾವ್ಯ ಮತ್ತು ಅದರ ಮೀಮಾಂಸೆಯಲ್ಲಿ ಒಂದಷ್ಟು ಪ್ರತ್ಯೇಕವಾಗಿ ಗುರುತಿಸಲು ಸಾಧ್ಯ ವಿತ್ತೇನೋ ಎನ್ನಿಸುತ್ತದೆ. ಇಂತಹ ಪ್ರಯತ್ನಗಳು ಅಂದು ನಡೆದಿವೆ; ಇಂದಿಗೂ ನಡೆಯುತ್ತ ಬಂದಿದೆ. ಏನೇ ಆದರೂ ಈ ಬಗೆಯ ಸಾಹಿತ್ಯ ಸೃಷ್ಟಿ ಪ್ರತ್ಯೇಕ ವಾಗಿ ರಚನೆಗೊಳ್ಳುತ್ತಿದ್ದರೂ ಇದನ್ನು ಆಧರಿಸಿ 'ಕನ್ನಡ ಕಾವ್ಯಮೀಮಾಂಸೆ' ಎಂಬ ಜ್ಞಾನಶಾಖೆ ಯಂತೂ ಕನ್ನಡವನ್ನು ಉಪಸರ್ಗವನ್ನಾಗಿ ಹೊಂದಿದ ಸಾಹಿತ್ಯ, ಸಂಸ್ಕೃತಿಯ ಇತರೆ ಜ್ಞಾನಶಾಖೆಗಳಂತೆ ಮೂಡಿಲ್ಲ. ಇದು ಶೈಕ್ಷಣಿಕ ರಂಗದ ಕತೆ.

ಇನ್ನು ಸಾಹಿತ್ಯ ರಂಗದಲ್ಲಿ ಕನ್ನಡ ಕಾವ್ಯ ಮೀಮಾಂಸೆಯನ್ನು ಸ್ವೋಪಜ್ಞವಾಗಿ ಕಟ್ಟುವ ಪ್ರಯತ್ನವು ಕಳೆದ ನೂರು ವರ್ಷಗಳಿಂದ ಅಲ್ಲಲ್ಲಿ ನಡೆದಿರುವುದನ್ನು ನಾವು ಚಾರಿತ್ರಿಕವಾಗಿ ಗುರುತಿಸಬೇಕು.




ಇಲ್ಲಿ ಮೊದಲಿಗೆ ಮಾಸ್ತಿಯವರು ತಮ್ಮ 'ಸಾಹಿತ್ಯ ವಿಮರ್ಶೆಯ ಕಾರ್ಯ' ಮುಂತಾದ ಲೇಖನಗಳನ್ನು ಒಳಗೊಂಡ ವಿಮರ್ಶೆಯ ಮೊದಲ ಸಂಪುಟದ ಅನೇಕ ಲೇಖನಗಳಲ್ಲಿ ಕನ್ನಡ ಕಾವ್ಯಮೀಮಾಂಸೆಯ ಉತ್ತಮ ಕವಿ, ಉತ್ತಮನಲ್ಲದ ಕವಿ, ಸಹೃದಯ, ವಿಮರ್ಶಕ ದೃಷ್ಟಿ ಮುಂತಾದ ತತ್ವಗಳನ್ನು ಕನ್ನಡ ಸಂಸ್ಕೃತಿಯ ಭಿತ್ತಿಯನ್ನು ಹಿನ್ನೆಲೆಯನ್ನಾಗಿಟ್ಟುಕೊಂಡು ತಮ್ಮ ವಿಚಾರಗಳನ್ನು ಮಂಡಿಸುತ್ತ ಹೋಗುತ್ತಾರೆ. ಅಂತೆಯೇ 'ಬಡತನವು ಸಾಹಿತ್ಯದ ವಸ್ತುವೇಕಾಗಿದೆ ?' ಎಂಬ ಲೇಖನದಲ್ಲಿ ಬೇಂದ್ರೆ ಯವರು ಯಾವಾಗ ವಸ್ತುಕ ಕಾವ್ಯಗಳು ಹುಟ್ಟುತ್ತವೆ ಮತ್ತು ವರ್ಣಕ ಕಾವ್ಯಗಳ ಉಕ್ಕು ಯಾವಾಗ ಹೆಚ್ಚು ಎಂಬುದನ್ನು ಸಂಸ್ಕೃತಿಯ ಸಂದರ್ಭದ ಹಿನ್ನೆಲೆಯಲ್ಲಿ ಚರ್ಚಿಸುತ್ತಾರೆ.

ಹೀಗೆ ನವೋದಯ ಸಂದರ್ಭದ ಅನೇಕ ಲೇಖಕರು ತಮ್ಮ ಕಾಲದ ಹಾಗೂ ತಮ್ಮ ಪೂರ್ವಕಾಲದ ಸಾಹಿತ್ಯ ಸೃಷ್ಟಿಗೆ ಹಿನ್ನೆಲೆಯಾಗಿದ್ದ ಹಾಗೂ ಈ ಸಾಹಿತ್ಯ ಸೃಷ್ಟಿಯೊಳಗೆ ಅಂತರ್ಗತವಾಗಿದ್ದ ಬಹುಮುಖೀ ಕಾವ್ಯ ತತ್ವವನ್ನು ಅನಾವರಣಗೊಳಿಸುತ್ತ ಹೋಗುತ್ತಾರೆ. ಇಂತಹ ಅನಾವರಣ ಪ್ರಗತಿಶೀಲ, ನವ್ಯ, ದಲಿತ-ಬಂಡಾಯ, ಸ್ತ್ರೀವಾದ ಮುಂತಾದ ಎಲ್ಲ ಪಂಥಗಳ ಸಂದರ್ಭದಲ್ಲಿಯೂ ಆಗಿದೆ, ಭವಿಷ್ಯದಲ್ಲಿಯೂ ಮುಂದುವರೆಯುತ್ತದೆ. ಈ ಚಾರಿತ್ರಿಕ ಮತ್ತು ತಾತ್ವಿಕ ಧಾರೆಯಲ್ಲಿ ಪ್ರೊ॥ ಕಿ. ರಂ. ನಾಗರಾಜ ಅವರಿಗೆ ಸಹ ಮಹತ್ವದ ಸ್ಥಾನವಿದೆ.

ಕನ್ನಡ ಕಾವ್ಯಮೀಮಾಂಸೆಯೆಂಬುದು ಮೂರು ಧಾರೆಗಳಲ್ಲಿ ಕಟ್ಟಲ್ಪಟ್ಟಿದೆ ಎಂದು ಭಾವಿಸಿದ್ದೇನೆ. ಅವೆಂದರೆ :

೧. ಲಕ್ಷಣದ ನೆಲೆ : ಇಲ್ಲಿ 'ಕವಿರಾಜಮಾರ್ಗ' ಮುಂತಾದ ಒಂದೆರಡು ಕೃತಿಗಳಿವೆ.

೨. ಹೇಳಿಕೆಗಳ ನೆಲೆ : ಇಲ್ಲಿ ಶ್ರೀವಿಜಯ, ಪಂಪನಿಂದ ಇಲ್ಲಿಯವರೆಗಿನ ಕವಿ – ಸಾಹಿತಿಗಳು ತಮ್ಮ ಕೃತಿಗಳ ಸಂದರ್ಭದಲ್ಲಿ ತಮಗೆ ಕಾಡಿದ ವಿವಿಧ ಕಾವ್ಯತತ್ವಗಳನ್ನು ಕುರಿತು ನೀಡಿದ ಹೇಳಿಕೆಗಳಿವೆ.

೩. ಲಕ್ಷ್ಯದ ನೆಲೆ : ಇಲ್ಲಿ ಒಟ್ಟು ಸಾಹಿತ್ಯ ರಾಶಿಯಿದೆ. ಇದರಲ್ಲಿ ಉತ್ತಮ ಮತ್ತು ಉತ್ತಮವಲ್ಲದ ಎಲ್ಲ ಬಗೆಯ ಸಾಹಿತ್ಯ ಕೃತಿಗಳಿವೆ.

ಮೇಲ್ಕಂಡ ಮೂರು ನೆಲೆಗಳನ್ನು ಕ್ರಮಾನುಗತವಾಗಿ ಸಂಘಟಿಸಿ, ವಿವರಿಸಿದ ಕ್ರಮವೊಂದಿದೆ. ಇಲ್ಲಿ ಈಗಾಗಲೇ ಪ್ರಸ್ತಾಪಿಸ್ಪಟ್ಟ ಮಾಸ್ತಿ, ಬೇಂದ್ರೆ ಮೊದಲಾದವ ರೊಂದಿಗೆ ಆಧುನಿಕ ಸಂದರ್ಭದ ಎಲ್ಲ ಸಾಹಿತ್ಯ ಪಂಥಗಳ ಸಂದರ್ಭದಲ್ಲಿ ತಮ್ಮ ತಮ್ಮ ಸಾಹಿತ್ಯ ಪಂಥಗಳನ್ನು ವಿವಿಧ ಬರಹಗಾರರು ಮಂಡಿಸಿದ ಲೇಖನಗಳಿವೆ. ಈ ಲೇಖನಗಳನ್ನು ದಾಟಿದ ನೆಲೆಯಲ್ಲಿ ಅಂದರೆ ಪೂರ್ಣ ಪ್ರಮಾಣದಲ್ಲಿ ಪುಸ್ತಕವನ್ನೇ ಬರೆದ ನೆಲೆಯಲ್ಲಿ ಜಿ. ಎಸ್. ಶಿವರುದ್ರಪ್ಪ, ಹಿ. ಶಿ. ರಾಮಚಂದ್ರೇಗೌಡ, ವೀರಣ್ಣ ದಂಡೆ, ಎಂ. ಎಸ್. ಹಿರೇಮಠ ಮುಂತಾದವರು ಕ್ರಮವಾಗಿ ಬರೆದ 'ಕನ್ನಡ ಕವಿಗಳ ಕಾವ್ಯ ಕಲ್ಪನೆ', 'ಜನಪದ ಕಾವ್ಯಮೀಮಾಂಸೆ', 'ಕನ್ನಡ ಕಾವ್ಯ ಮೀಮಾಂಸೆ', ಮುಂತಾದ ಕೃತಿಗಳಿವೆ. ಈ ಭಾಗ ದಲ್ಲಿಯೇ ಪ್ರಸ್ತುತವಾದ ಪ್ರೊ॥ ಕಿ. ರಂ. ನಾಗರಾಜ ಅವರ ಬರಹಗಳಿವೆ. ಈ ದಿಶೆಯಲ್ಲಿ ಅವರ 'ಜಾನಪದ ಮತ್ತು ಆಧುನಿಕ ಸಾಹಿತ್ಯ', 'ಕನ್ನಡ ಕಾವ್ಯ ಪರಂಪರೆ; ಸಂಸ್ಕೃತ ಕಾವ್ಯಮೀಮಾಂಸೆ' (ಸಂಬಂಧ - ಸಂಘರ್ಷದ ನೆಲೆಗಳು), 'ಕನ್ನಡ ಕಾವ್ಯ ರಚನಾ ಪರಂಪರೆಯ ವಿಶಿಷ್ಟತೆ' ಮುಂತಾದ ಲೇಖನಗಳನ್ನು ಗಮನಿಸಬಹುದು.

'ಜಾನಪದ ಮತ್ತು ಆಧುನಿಕ ಸಾಹಿತ್ಯ' ಎಂಬ ತಮ್ಮ ಬರಹದಲ್ಲಿ ಕಿ.ರಂ. ಅವರು ಶಿಷ್ಟ ಮತ್ತು ಅಶಿಷ್ಟ ಸಾಹಿತ್ಯದ ನಡುವೆ ಇರುವ ಗೆರೆ ಅತ್ಯಂತ ತೆಳುವಿನದು ಎಂದು ಭಾವಿಸುತ್ತಾರೆ. ಇದಕ್ಕೆ ಪೂರಕವಾಗಿ ಗ್ರಾಮೀಣ ಸಂಸ್ಕೃತಿಯಲ್ಲಿ ಮಹತ್ವದ ಭಾಗವಾಗಿ ಬೆಸೆದುಕೊಂಡಿರುವ ವಚನಕಾರರು, ಹರಿಹರ, ರಾಘವಾಂಕ, ಕುಮಾರವ್ಯಾಸ, ಕೀರ್ತನ ಕಾರರು, ಲಕ್ಷ್ಮೀಶ, ಸರ್ವಜ್ಞ ಮುಂತಾದವರನ್ನು ಉಲ್ಲೇಖಿಸುತ್ತಾರೆ. ಅಲ್ಲದೆ ಶಿಶುನಾಳ ಶರೀಫ, ನಾಗಲಿಂಗಯತಿ, ಸರ್ಪಭೂಷಣ ಶಿವಯೋಗಿ, ಬಂಡೆ ಗವಿಸಿದ್ಧ, ಗೋವಿಂದ ಭಟ್ಟ ಮುಂತಾದ ಅಸಂಖ್ಯ ಅನುಭಾವಿ ಕವಿಗಳು ಪ್ರಾದೇಶಿಕ ಸಂಸ್ಕೃತಿಯ ಆಂತರ್ಯದಲ್ಲಿ ಜೀವಂತವಾಗಿ ಸೇರಿಕೊಂಡಿರುವುದನ್ನು ಗುರುತಿಸುತ್ತಾರೆ. ಇಂಥವರ ರಚನೆಗಳು ವಿವಿಧ ವಾಚನ ಸಂಪ್ರದಾಯಗಳನ್ನು ನಿರ್ಮಿಸಿರುವುದನ್ನು ಸಂಸ್ಕೃತಿಯ ಸಂದರ್ಭದಲ್ಲಿ ಪ್ರಸ್ತಾಪಿಸುತ್ತಾರೆ. ಇಂತಹ ಅನೇಕ ಮಹತ್ವದ ಕೃತಿಗಳು ಅನಕ್ಷರಸ್ಥರ ಸಂಸ್ಕೃತಿಯ ಬಗೆಗೆ ಗಾಢವಾದ ತಿಳುವಳಿಕೆಯಿಂದ ಕೂಡಿವೆ ಎಂಬ ನಿಲುವಿಗೆ ಬರುತ್ತಾರೆ. ಅಂತೆಯೇ ಇಂತಹ ಅನೇಕ ಕವಿಗಳ ರಚನೆಗಳು ಕನ್ನಡ ಕಾವ್ಯ ಪರಂಪರೆ ಮತ್ತು ಜನಪದ (ಜನಪ್ರಿಯ) ಪರಂಪರೆಯ ಸೃಜನಶೀಲ ಒಪ್ಪಂದವೆಂದು ವ್ಯಾಖ್ಯಾನಿಸುತ್ತಾರೆ. ಮುಂದುವರಿದ ಇನ್ನೊಂದು ನೆಲೆಯಲ್ಲಿ ಜನಪದ ಅಭಿವ್ಯಕ್ತಿಯು ಪ್ರಾಚೀನವೂ ಅಲ್ಲ, ಹೊಸದೂ ಅಲ್ಲ, ಅದು ಸದ್ಯಕಾಲೀನ ಎಂದು ಜನಪದ ರಚನೆಗಳ ಕುರಿತು ವಾಖ್ಯಾನಿಸುತ್ತಾರೆ.

ಹೀಗೆ ಕನ್ನಡದ ದೇಸಿ ಕಾವ್ಯ, ಜನಪದ ಮತ್ತು ಜನಪ್ರಿಯ ಕಾವ್ಯ ಮುಂತಾದ ಕಾವ್ಯಕೃತಿಗಳಿಗೆ ಇರುವ ಸಾಂಸ್ಕೃತಿಕ ಹಿನ್ನೆಲೆಯನ್ನು ನಿರ್ವಹಿಸುತ್ತ ಇದರೊಳಗೆ ಅಂತರ್ಗತ ವಾಗಿರುವ ಕನ್ನಡ ಕಾವ್ಯತತ್ವವನ್ನು ರೂಪಿಸುವ ಪ್ರಯತ್ನವನ್ನು ಕಿ. ರಂ. ಅವರು ಇಲ್ಲಿ ಮಾಡುತ್ತಾರೆ. ಇಂಥದೇ ಪ್ರಯತ್ನವು ಕನ್ನಡದ ಶಿಷ್ಟ ಅಥವಾ ಮಾರ್ಗಸಾಹಿತ್ಯ ಎಂದು ಗುರುತಿಸಬಹುದಾದ ಸಾಹಿತ್ಯವನ್ನು ಮುಖ್ಯವಾಗಿ ಅನುಲಕ್ಷಿಸಿ 'ಕನ್ನಡ ಕಾವ್ಯ ಪರಂಪರೆ; ಸಂಸ್ಕೃತ ಕಾವ್ಯಮೀಮಾಂಸೆ' (ಸಂಬಂಧ ಸಂಘರ್ಷ ನೆಲೆಗಳು) ಎಂಬ ಬರಹದಲ್ಲಿ ಕಾಣುತ್ತದೆ. ಇದನ್ನು ಹೀಗೆ ಪರಿಕಲ್ಪನಾತ್ಮಕವಾಗಿ ವಿವರಿಸಬಹುದು :

* ಕಾವ್ಯಮೀಮಾಂಸೆಯ ಮಿತಿಯ ಪ್ರತಿಪಾದನೆ ಇಲ್ಲಿದೆ. ಇದು ಕಾವ್ಯಗಳ ಮಾರ್ಗದರ್ಶಿ ಅಲ್ಲ; ಅಂತೆಯೇ ಓದುಗರ ಕೈಪಿಡಿಯೂ ಅಲ್ಲ.
* ಇಂತಹ ಕಾವ್ಯಮೀಮಾಂಸೆಯ ಅಸಂಖ್ಯ ಕೃತಿಗಳ ರಚನಾ ನೆಲೆಗಳನ್ನು ಕ್ರಮಬದ್ಧವಾಗಿ ಸಂಘಟಿಸಿ, ವಿವರಿಸುವ ಪ್ರಯತ್ನವನ್ನು ಮಾಡುತ್ತದೆ.
* ಒಂದು ಕೃತಿಗೆ ಅನೇಕರಿಂದ ಅನೇಕ ಓದುಗಳು, ಕೆಲವೊಮ್ಮೆ ಒಬ್ಬನಿಂದಲೇ ಅನೇಕ ಓದುಗಳು ಇರುತ್ತವೆ. ಅಂತೆಯೇ ಕಾಲದ ಅವಸ್ಥಾಂತರದಲ್ಲಿ, ಭಿನ್ನ ಶಾಖೆಗಳ ಬೆಳವಣಿಗೆಯಲ್ಲಿ ಈ ಓದು ವ್ಯತ್ಯಸ್ತವಾಗುತ್ತದೆ.
* ಇಂತಹ ಕಾವ್ಯತತ್ವ ವೈವಿಧ್ಯಮಯ. ಉದಾಹರಣೆಗೆ, ಕಾವ್ಯವನ್ನು ಕುರಿತಂತೆ ಕಾವ್ಯತತ್ವ, ಕಾದಂಬರಿಯನ್ನು ಕುರಿತಂತೆ ಕಾದಂಬರಿತತ್ವ, ಹೀಗೆ ಇದು ವಿವಿಧ ಸಾಹಿತ್ಯ ಪ್ರಕಾರಗಳಿಗೆ ವಿಸ್ತರಿಸುತ್ತ ಹೋಗುತ್ತದೆ. ಅಂತೆಯೇ ಪಂಥಗಳನ್ನು ಅನುಲಕ್ಷಿಸಿ ನವೋದಯ ತತ್ವ, ನವ್ಯತತ್ವ, ಪ್ರಗತಿಶೀಲತತ್ವ, ದಲಿತ – ಬಂಡಾಯ ತತ್ವ, ದಲಿತತ್ವ, ಸ್ತ್ರೀತತ್ವ ಹೀಗೆ ಇದರ ಸಾಲು ಸಹ ಬೆಳೆಯುತ್ತದೆ.

* ಇಂತಹ ಕಾವ್ಯಮೀಮಾಂಸೆ ಸ್ಥಾವರವಲ್ಲ; ಎಲ್ಲ ಜ್ಞಾನಶಾಖೆಗಳಂತೆ ಸೃಜನಶೀಲತೆಯ ನಿರಂತರತೆ ಇದಕ್ಕೆ ಕಾರಣ.
* ಇಂತಹ ಕಾವ್ಯಮೀಮಾಂಸೆ ಎರಡು ನೆಲೆಗಳಲ್ಲಿ ಕಟ್ಟಲ್ಪಡುತ್ತದಾದರೂ ಮುಖ್ಯವಾಗಿ ಇದು ಕಾವ್ಯಾಂತರ್ಗತ ಕಾವ್ಯತತ್ವಗಳ ನೆಲೆಯಲ್ಲೇ ಆಗುವುದು ಸೂಕ್ತ. ಇದು ಕಾವ್ಯವನ್ನು ಲಕ್ಷ್ಯದ ನೆಲೆಯಲ್ಲಿ ಕಾವ್ಯಮೀಮಾಂಸೆಯ ಕೃತಿಯನ್ನಾಗಿ ಗ್ರಹಿಸುವ ಕ್ರಮ.
* ಈ ನೆಲೆಯಲ್ಲಿ ಕಾಣುವ ಕನ್ನಡ ಕಾವ್ಯಮೀಮಾಂಸೆ, ಕನ್ನಡ ಕಾವ್ಯ ಮತ್ತು ಕನ್ನಡ ಸಂಸ್ಕೃತಿ ಆಳದಲ್ಲಿ ಪ್ರತ್ಯೇಕವಲ್ಲ.
* ಸಂಸ್ಕೃತ ಕಾವ್ಯಕ್ಕೆ ಹೋಲಿಸಿದರೆ ಕನ್ನಡ ಕಾವ್ಯವು ಪ್ರಕಾರ, ಸಂವೇದನೆ, ಲಯ ಮುಂತಾದ ಅನೇಕ ನೆಲೆಗಳಲ್ಲಿ ಹೆಚ್ಚು ವೈವಿಧ್ಯಮಯವಾದುದಾಗಿದೆ. ಇದಕ್ಕೆ ಕಾರಣ ಇದಕ್ಕೆ ಹಿನ್ನೆಲೆಯಾಗಿದ್ದ ಜನಸಂಸ್ಕೃತಿ. ಈ ಕೊರತೆ ಸಂಸ್ಕೃತ ಕಾವ್ಯಕ್ಕಿದೆ. ಹಾಗಾಗಿ ಬಹುಮುಖೀ ಕನ್ನಡ ಕಾವ್ಯದ ನಿರ್ವಚನ, ಮೀಮಾಂಸೆ ಸಂಸ್ಕೃತಿಯ ಹಿನ್ನೆಲೆಯಲ್ಲೇ ಆಗಬೇಕು, ಅದರ ಪ್ರವೇಶ ಸಂಸ್ಕೃತದ ಮೂಲಕವೇ ಆಗಬೇಕು ಎಂಬ ಧೋರಣೆಯನ್ನು ಕೈಬಿಡುವುದು ಉಚಿತ.

ಹೀಗೆ ಕನ್ನಡ ಕಾವ್ಯಪರಂಪರೆ ಮತ್ತು ಸಂಸ್ಕೃತ ಕಾವ್ಯ ಮೀಮಾಂಸೆಯ ನಡುವೆ ಇರುವ ಅಂತರವನ್ನು ಮುಖ್ಯವಾಗಿ ಇಲ್ಲಿ ತೋರುವ ಮೂಲಕ ಕನ್ನಡ ಕಾವ್ಯ ಮೀಮಾಂಸೆಯ ಸಾಧ್ಯತೆಗಳನ್ನು, ಅದನ್ನು ರೂಪಿಸಿಕೊಳ್ಳ ಬೇಕಾದ ಕ್ರಮ ಮತ್ತು ಜರೂರನ್ನು ಕಿ. ರಂ. ಇಲ್ಲಿ ಮಂಡಿಸುತ್ತಾರೆ. ಈ ನಿಟ್ಟಿನಲ್ಲಿ ಅವರ ಮತ್ತೊಂದು ಮುಖ್ಯ ಬರಹ 'ಕನ್ನಡ ಕಾವ್ಯ ರಚನಾ ಪರಂಪರೆಯ ವಿಶಿಷ್ಟತೆ'. ಇಲ್ಲಿ ಅವರು ಕನ್ನಡ ಕಾವ್ಯ ಮತ್ತು ಅದರ ಮೀಮಾಂಸೆ ಸಂಸ್ಕೃತಕ್ಕಿಂತ ಹೇಗೆ ಭಿನ್ನ ಎಂಬ ನೆಲೆಗಳನ್ನು ಪರಾಮರ್ಶಿಸುತ್ತಾರೆ.

ಮೊದಲಿಗೆ, ಸೃಜನಶೀಲತೆಯ ನೆಲೆಯಲ್ಲಿ ಪೂರ್ವ ಪುರಾಣದ ಕರ್ತೃ ಜಿನಸೇನಾಚಾರ್ಯರಿಗಿಂತ ಪಂಪ ಹೇಗೆ ಮಿಗಿಲು ಎಂಬುದನ್ನು ಸೋದಾಹರಣವಾಗಿ ವಿವರಿಸುತ್ತಾರೆ. ಹೀಗಾಗಿ ಸಂಸ್ಕೃತದ ನೆರಳನ್ನಾಗಿ ಕನ್ನಡವನ್ನು ನೋಡುವ ಪ್ರಮೇಯವಿಲ್ಲ ಎಂಬುದನ್ನು ಪ್ರತಿಪಾದಿಸುತ್ತಾರೆ. ಮುಂದುವರಿದ ಹಂತದಲ್ಲಿ ಸಂಸ್ಕೃತದ ಸಾಹಿತ್ಯಕ್ಕೆ ಜನಸಂಸ್ಕೃತಿಯ ಹಿನ್ನೆಲೆ ಇಲ್ಲ, ಆದ್ದರಿಂದ ಇಲ್ಲಿಯ ರಚನೆಗಳು ಕನ್ನಡದ ಸಂದರ್ಭದಲ್ಲಿ ಕೇವಲ ವಿದ್ವದೀಯ ರಚನೆಗಳಷ್ಟೆ. ಇವುಗಳ ವರ್ಣನೆ – ನಿರೂಪಗಳಲ್ಲಿ ಏರಿಳಿತಗಳಾಗಲೀ, ಮಾತಿನ ಧ್ವನಿ ಸೂಕ್ಷ್ಮಗಳಾಗಲೀ ಕಾಣುವುದು ಸಾಧ್ಯವಿಲ್ಲ. ಈ ನೆಲೆಯಲ್ಲಿ ಮೂಡಿದ ಅನೇಕ ಸಂಸ್ಕೃತದ ರಚನೆಗಳು ಪೆಡಸುತನದಿಂದ ಕೂಡಿವೆ. ಇದಕ್ಕೆ ವಿರುದ್ಧ ಗತಿಯ ಕ್ರಿಯಾಶೀಲತೆ ಪಂಪ, ಹರಿಹರ, ಕುಮಾರವ್ಯಾಸ, ಲಕ್ಷ್ಮೀಶ, ಚಾಮರಸ, ಮುಂತಾದ ಕವಿಗಳ ಹಾಗೂ ಜನಪದ ಸಾಹಿತ್ಯ, ವಚನ, ಕೀರ್ತನೆಯಂತಹ ರಚನೆಗಳಲ್ಲಿದೆ ಎಂಬುದನ್ನು ಪ್ರಸ್ತಾಪಿಸುತ್ತಾರೆ. ಅಲ್ಲದೆ ಈ ರಚನೆಗಳ ಒಳಗೆ, ''ಹಠಾತ್ ಮುನ್ನಡೆ, ಹಿಂಜರಿತ, ಮೇಲಿಂದ ಮೇಲೆ ಕಾಣಿಸಿಕೊಳ್ಳುವ ಉತ್ಸಾಹಮಯ ಆರಂಭ...'' ಹೀಗೆ ಮಾತಾನಾಡುತ್ತ ಹೋಗುತ್ತಾರೆ. ಕೊನೆಯ ಹಂತದಲ್ಲಿ, ''ಪ್ರಾದೇಶಿಕ ಸಂಸ್ಕೃತಿಯನ್ನು ವಿನಾಶಗೊಳಿಸುತ್ತಿರುವ ಪ್ರಭಾವಗಳನ್ನು ವಿರೋಧಿಸುವುದು ಕನ್ನಡ ಕವಿತೆಯ ಮುಖ್ಯ ಆಶಯವಾಗಿದೆ'', ಎನ್ನುತ್ತಾರೆ.

ಹೀಗೆ ಕನ್ನಡ ಕಾವ್ಯದ ಸ್ವಂತಿಕೆಯ ನೆಲೆಗಳನ್ನು ಕಿ.ರಂ. ಅವರು ಮಂಡಿಸುತ್ತ ಕನ್ನಡ ಕಾವ್ಯ ಮೀಮಾಂಸೆಯನ್ನು ಕಟ್ಟುವ ಮೂರ್ತ ನೆಲೆಗಳನ್ನು ತೋರುತ್ತಾರೆ. ಇಲ್ಲಿಯ ಬರಹಕ್ಕೆ ಒಟ್ಟು ಕನ್ನಡ ಕಾವ್ಯವನ್ನು ತಾತ್ವಿಕವಾಗಿ ವಿಮರ್ಶಿಸುವ ಆಯಾಮವು ಪ್ರಾಪ್ತವಾಗಿದೆ. ಇದನ್ನು ಇನ್ನಷ್ಟು ಪರಿಕಲ್ಪನಾತ್ಮಕವಾಗಿ ಹೀಗೆ ನೋಡಬಹುದೆನ್ನಿಸುತ್ತದೆ :

* ಕನ್ನಡ ಕಾವ್ಯ ಮತ್ತು ಸಂಸ್ಕೃತಿಗಳ ನಿಯತ ಸಂಬಂಧದಲ್ಲಿ ಕನ್ನಡ ಚಿಂತನೆ ವಿಕಾಸಗೊಂಡಿದೆ. ಇದು ಸಾಹಿತ್ಯ ಮತ್ತು ಸಂಸ್ಕೃತಿ ಚಿಂತನೆ ಎಂಬುದನ್ನು ಪ್ರತ್ಯೇಕವಾಗಿ ಹೇಳಬೇಕಿಲ್ಲ.
* ಕನ್ನಡ ಕಾವ್ಯ ಮತ್ತು ಸಂಸ್ಕೃತಿ ಆಳದಲ್ಲಿ ಪ್ರತ್ಯೇಕವಲ್ಲ. ಇವೆರಡೂ ಪರಸ್ಪರ ಪೂರಕ ಮತ್ತು ನಿಯತ ಸಂಬಂಧವನ್ನು ಸ್ಥಾಪಿಸಿಕೊಂಡು ಬಂದಿರುವುದು ವಾಸ್ತವವಾಗಿದೆ. ಇಂತಹ ಸಂಸ್ಕೃತಿ ಮತ್ತು ಕಾವ್ಯ ಕಾಲದಿಂದ ಕಾಲಕ್ಕೆ ಸಂಕೀರ್ಣವೋ, ಸರಳವೋ ಹಿನ್ನಡೆಯೋ, ಮುನ್ನಡೆಯೋ ಆಗಿ ವೈವಿಧ್ಯತೆಯನ್ನು ಸಾಧಿಸಿದೆ. ಆದ್ದರಿಂದಲೇ ಕನ್ನಡದ ಸಂಸ್ಕೃತಿಗೆ ಆಳ ಮತ್ತು ಅಗಲ ಹಾಗೂ ಬಣ್ಣ ಮತ್ತು ಮುಖಗಳು ಅಸಂಖ್ಯ. ಅಂಥವುಗಳ ಒಡಲಲ್ಲಿ ಹುಟ್ಟುವ ಕಾವ್ಯಕ್ಕೂ ಸಹ ಅದೇ ಗತಿ; ಅದೇ ಸ್ಥಿತಿ. ಇದು ಕನ್ನಡ ಸಂಸ್ಕೃತಿ, ಕಾವ್ಯ ಮತ್ತು ಇದರ ಮೀಮಾಂಸೆಯ ಅನನ್ಯತೆಯಾಗಿದೆ.
* ಇಂತಹ ಅನನ್ಯತೆ ಜನಮೂಲದಲ್ಲಿ ಸಾಧ್ಯವಾಗಿದೆ. ಇದು ಸಂಸ್ಕೃತಕ್ಕೆ ಸಾಧ್ಯವಾಗಿಲ್ಲ, ಕಾರಣ, ಸಂಸ್ಕೃತಕ್ಕೆ ಈ ಬಗೆಯ ಜನತೆಯ, ನೆಲದ ಸೊಗಡಿನ ಹಾಗೂ ಅದರ ಗತಿಶೀಲತೆಯ ಹಿನ್ನೆಲೆಯಿಲ್ಲ. ಆದ್ದರಿಂದ ಕನ್ನಡ ಕಾವ್ಯದ ಬಣ್ಣ, ವಯ್ಯಾರಗಳೇ ಬೇರೆ; ಸಂಸ್ಕೃತದ ಬಣ್ಣ, ವಯ್ಯಾರಗಳೇ ಬೇರೆ.
* ಆದರೂ ಸಂಸ್ಕೃತವು ಸಾಂಸ್ಥಿಕ ಧರ್ಮಕ್ಕೆ, ಪ್ರಭುತ್ವದ ಅಧಿಕಾರ ಶಕ್ತಿಗೆ ಹತ್ತಿರ. ಕನ್ನಡವು ಇದರ ಸೆಳೆತದಲ್ಲಿ ಇದ್ದರೂ ಇದು ವಿಶೇಷವಾಗಿ ಜನತೆಯ ಸೂಜಿಗಲ್ಲಿಗೆ ಆಕರ್ಷಿತವಾಗಿತ್ತು.




ಹೀಗೆ ಬಹುಮುಖೀ ನೆಲೆಯಲ್ಲಿ ಪ್ರೊ|| ಕಿ. ರಂ. ಅವರು ಕನ್ನಡ ಕಾವ್ಯಮೀಮಾಂಸೆಯನ್ನು ಮಂಡಿಸುವ ಪ್ರಯತ್ನವನ್ನು ಮಾಡುತ್ತಾರೆ. ಇದಕ್ಕೆ ಪೂರಕವಾಗಿ ವಿಭಿನ್ನ ನೆಲೆಗಳಲ್ಲಿ ಅನೇಕ ವಿದ್ವಾಂಸರು, ವಿಶೇಷವಾಗಿ ವಿಶ್ವವಿದ್ಯಾಲಯಗಳಲ್ಲಿ ಈ ಸಂಬಂಧದ ಪಾಠ ಹೇಳುತ್ತ ಬಂದಿರುವ ಪ್ರಾಧ್ಯಾಪಕರು ಕೃತಿಗಳನ್ನು ರಚಿಸಿದ್ದಾರೆ. ಆದರೂ ನನ್ನ ತಿಳುವಳಿಕೆಯ ಮಿತಿಯಲ್ಲಿ ಇದನ್ನು ಸಹ ಈಗಾಗಲೇ ಪ್ರಸ್ತಾಪಿಸಿರುವಂತೆ ಕನ್ನಡ ಛಂದಸ್ಸಿನಂತೆ ಕನ್ನಡ ಭಾಷಾ ವಿಜ್ಞಾನದಂತೆ 'ಕನ್ನಡ ಕಾವ್ಯಮೀಮಾಂಸೆ' ಎಂದು ಕಾವ್ಯಮೀಮಾಂಸೆಯ ಅಥವಾ ತೌಲನಿಕ ಕಾವ್ಯಮೀಮಾಂಸೆಯ ಅಥವಾ ಭಾರತೀಯ ಕಾವ್ಯ ಮೀಮಾಂಸೆಯ ಅವಿಭಾಜ್ಯ ಅಂಗವೆಂಬಂತೆ ಯಾಕೆ ಪ್ರತಿಷ್ಠಾಪಿಸಲಾಗಲಿಲ್ಲ ಎಂಬ ಪ್ರಶ್ನೆಯನ್ನು ಮತ್ತೊಮ್ಮೆ ಮುಂದುಮಾಡುತ್ತಿದ್ದೇನೆ. ಇಂತಹ ಪ್ರಯತ್ನವನ್ನು, ಅಂದರೆ 'ಕನ್ನಡ ಕಾವ್ಯಮೀಮಾಂಸೆ'ಯನ್ನು ಹೀಗೆ ಕಾವ್ಯ ಮೀಮಾಂಸೆಯ ಪ್ರತ್ಯೇಕ ಜ್ಞಾನಶಾಖೆಯನ್ನಾಗಿ ಬೆಂಗಳೂರು ವಿಶ್ವವಿದ್ಯಾಲಯ ಕನ್ನಡ ಅಧ್ಯಯನ ಕೇಂದ್ರವು ತನ್ನ ಎಂ.ಎ. ಕನ್ನಡದ ಪಠ್ಯಕ್ರಮವನ್ನಾಗಿ ಮಾಡಿತು. ಇದು ಆದದ್ದು ೧೯೯೮ರಲ್ಲಿ, ಇದರ ಒತ್ತಾಸೆಯಾಗಿ ಕಿ.ರಂ. ಅವರಿದ್ದರು. ಈ ಪಠ್ಯಕ್ರಮದಲ್ಲಿ ಸುಮಾರು ಏಳು ಅಧ್ಯಾಯಗಳಿದ್ದವು. ಇದನ್ನು ಹೀಗೆ ಗುರುತಿಸುವುದು ಚಾರಿತ್ರಿಕವಾಗಿ ಮುಖ್ಯ ಎಂದು ನನಗೆ ಅನ್ನಿಸುತ್ತದೆ. ಕಾರಣ, ಈ ಜ್ಞಾನಶಾಖೆ ಅನೇಕರಿಂದ ಅನೇಕ ಕಾಲಗಳಲ್ಲಿ ಕಿ. ರಂ. ಅವರನ್ನು ಸಹ ಮುಖ್ಯವಾಗಿ ಒಳಗೊಂಡು ಬೆಳೆದು ಬಂದಿದ್ದರೂ ಅದನ್ನು ಅಧಿಕೃತವಾಗಿ ಮತ್ತು ವಿಸ್ತಾರವಾದ ನೆಲೆಯಲ್ಲಿ, ಮೊದಲಿಗೆ, ಶೈಕ್ಷಣಿಕ ಪರಿಧಿಯಲ್ಲಿ ಪಠ್ಯಕ್ರಮವನ್ನಾಗಿ ಮಾಡಿದ ಶ್ರೇಯಸ್ಸು ಬೆಂಗಳೂರು ವಿಶ್ವವಿದ್ಯಾಲಯ ಕನ್ನಡ ಅಧ್ಯಯನ ಕೇಂದ್ರ ಮತ್ತು ಇದರ ಭಾಗವಾದ ಪ್ರೊ|| ಕಿ. ರಂ. ಅವರಿಗೆ ಚಾರಿತ್ರಿಕವಾಗಿ ಸಲ್ಲಬೇಕು ಎನಿಸುತ್ತದೆ. ಆ ಸಂದರ್ಭದಲ್ಲಿ ಇಲ್ಲಿಯ ನಾಲ್ಕು ಹೆಜ್ಜೆಗಳು ಮುಂದೆ ಅನೇಕ ಹೆಜ್ಜೆಗಳಾಗುತ್ತವೆ ಎಂದು ನಾನು ಭಾವಿಸಿದ್ದೇನೆ. ಆದರೆ ದುರದೃಷ್ಟವಶಾತ್ ಮುಂದಿನ ಆರೇಳು ವರ್ಷಗಳಲ್ಲಿ ಈ ನಾಲ್ಕು ಹೆಜ್ಜೆಗಳ ದಾರಿ ಮೊದಲನೆಯ ಹೆಜ್ಜೆಗೇ ಹಿನ್ನಡೆಯನ್ನು ತೋರಿ ನಿಂತಿತು.

ಇಂದು ಕನ್ನಡ ಕಾವ್ಯಮೀಮಾಂಸೆ ಕನ್ನಡ ಸಾಹಿತ್ಯದ ಇತರೆ ಜ್ಞಾನಶಾಖೆಗಳಂತೆ ಸ್ವತಂತ್ರವಾಗಿ ಬೆಳೆದು ನಿಲ್ಲುವುದಕ್ಕೆ ಅಗತ್ಯವಾದ ದ್ರವ್ಯ ಅನೇಕ ವಿದ್ವಾಂಸರಿಂದ ಸಿದ್ಧಗೊಂಡಿದೆ. ಈ ನಿಟ್ಟಿನಲ್ಲಿ ಕ್ರಿಯಾಶೀಲ ಹೆಜ್ಜೆಗಳು ಇಲ್ಲಿಯ ಪೂರ್ವಸೂರಿಗಳಿಗೆ ಅರ್ಥಪೂರ್ಣ ಗೌರವ ತರುವುದು ಮಾತ್ರವಲ್ಲದೆ ಭಾರತದ ಪ್ರಜಾಸತ್ತಾತ್ಮಕ ಒಕ್ಕೂಟ ವ್ಯವಸ್ಥೆಯಲ್ಲಿ ಕನ್ನಡವೆಂಬ ಸ್ವೋಪಜ್ಞ ಅಸ್ಮಿತೆಯನ್ನು ಇಟ್ಟುಕೊಂಡು ಬದುಕುತ್ತಿರುವ ನಮ್ಮ ನೆಲೆಗೂ ಬೌದ್ಧಿಕ ಘನತೆಯನ್ನು ತರುತ್ತದೆ.

**ಡಾ|| ಕಾ. ವೆಂ. ಶ್ರೀನಿವಾಸಮೂರ್ತಿ**
ಸಹ ಪ್ರಾಧ್ಯಾಪಕ, ಸ್ನಾತಕೋತ್ತರ ಕೇಂದ್ರ
ಬೆಂಗಳೂರು ವಿಶ್ವವಿದ್ಯಾಲಯ, ಕೋಲಾರ - ೫೬೩ ೧೦೧

# ಮಸ್ಕಲ್ ಗ್ರಾಮದ ಎರಡು ಪ್ರಾಚೀನ ವೀರಗಲ್ಲುಗಳು



ಪ್ರಾಚೀನ ವೀರಗಲ್ಲು : ಮಸ್ಕಲ್, ಹಿರಿಯೂರು ತಾ॥
ಕಾಲ ಕ್ರಿ. ಶ. ಸು. ೧೩ನೇ ಶತಮಾನ.

ಹಿರಿಯೂರು ತಾಲೂಕಿನ ಮಸ್ಕಲ್ ಗ್ರಾಮದಲ್ಲಿ ನೀರಿನ ಆಸರೆಗಾಗಿ ಬೃಹತ್ತಾದ ಕೆರೆ ಇದೆ. ಊರಿನಲ್ಲಿ ಹಿಂದೆ ಒಂದು ಕೋಟೆ ಇದ್ದು, ಈಗ ಮುಖ್ಯದ್ವಾರದ ಅವಶೇಷ ಭಾಗ ಮಾತ್ರ ಉಳಿದಿದೆ. ಈ ಕೋಟೆಯನ್ನು ಪಾಳೆಯಗಾರರು ನಿರ್ಮಿಸಿರುವರೆಂದು ಸ್ಥಳೀಯರು ಹೇಳುತ್ತಾರೆ.

ಇಲ್ಲಿನ ಗ್ರಾಮದೇವತೆಯಾದ ಕರಿಯಮ್ಮನ ಗುಡಿಯ ಆವರಣದ ಒಳಗೆ ಗೋಡೆಗೆ ಹೊಂದಿಕೊಂಡಂತೆ ಎರಡೂ ಕಡೆಗಳಲ್ಲಿ ಎರಡು ಪ್ರಾಚೀನ ವೀರಗಲ್ಲುಗಳಿವೆ. ಬಲಗಡೆಯ ವೀರಗಲ್ಲನ್ನು ಸಿಸ್ಟ್ ಕಲ್ಲಿನಿಂದ ಮಾಡಲಾಗಿದ್ದು, ಇದರಲ್ಲಿ ವೀರನೊಬ್ಬನೇ ಪ್ರಧಾನವಾಗಿ ಚಿತ್ರಣಗೊಂಡಿದ್ದಾನೆ. ಈತ ತನ್ನ ಬಲಕೈನಿಂದ ಬಾಣವನ್ನು ತನ್ನ ಶಿರದ ಮೇಲಕ್ಕೆ ಬರುವಂತೆ ಎತ್ತಿಹಿಡಿದಿದ್ದು, ಎಡಕೈನಿಂದ ಉದ್ದನೆಯ ಬಿಲ್ಲನ್ನು ಹಿಡಿದಿದ್ದಾನೆ. ಮುಡಿಯನ್ನು ವಸ್ತ್ರದಿಂದ ಸುತ್ತಿದ್ದು ಬಲತೋಳಿನ ಕಡೆಗೆ ಇಳಿಬಿದ್ದ ಸುಂದರ ಜಡೆ ಇದೆ. ವಿಶಾಲವಾದ ನೇತ್ರಗಳು ಮತ್ತು ಮೀಸೆ ವೀರತನದ ರೌದ್ರತಾಭಾವವನ್ನು ವ್ಯಕ್ತಪಡಿಸುತ್ತದೆ.

ಕಿವಿಗಳಲ್ಲಿ ಓಲೆಯಂತಹ ಆಭರಣಗಳಿವೆ. ಕೊರಳಿನಲ್ಲಿ ಎರಡು ಎಳೆಯ ಸರ ಮಾತ್ರವಿದ್ದು, ತೋಳು, ಮುಂಗೈ ಮತ್ತು ಕಾಲುಗಳಲ್ಲಿ ಕಡಗಗಳಿವೆ. ನಡುವಿನಿಂದ ಕೆಳಗೆ ಹಾಕಿರುವ ವೀರಗಚ್ಚೆಯು ಮೇಲಿನ ತೋಳುಗಳಿಂದ ಇಳಿಬಿದ್ದಿದೆ. ನಡುವಿನಲ್ಲಿ ಬಿಚ್ಚುಗತ್ತಿಯೂ ಇದೆ. ವೀರ ತನ್ನ ಶತ್ರುಗಳ ಜೊತೆ ಬಿಲ್ಲು ಬಾಣಗಳಿಂದ ಹೋರಾಡಿ ಹತನಾಗಿದ್ದಾನೆ. ಮೇಲೆ ಚಂದ್ರ-ಸೂರ್ಯರ ಕೆತ್ತನೆಗಳು ಇದ್ದು, ಇದು ಕ್ರಿ.ಶ. ಸುಮಾರು ೧೩ನೇ ಶತಮಾನಕ್ಕೆ ಸೇರುತ್ತದೆ.



ಕೋಟೆಯ ಹೆಬ್ಬಾಗಿಲು, ಮಸ್ಕಲ್, ಹಿರಿಯೂರು ತಾಲ್ಲೂಕು

ಎಡಭಾಗದಲ್ಲಿ ಇರುವ ಎರಡನೆಯ ವೀರಗಲ್ಲು ಸಿಸ್ಟ್ ಕಲ್ಲಿನ ನಿರ್ಮಾಣವೇ ಆಗಿದ್ದು, ಇದರಲ್ಲಿಯೂ ಮಡಿದ ವೀರನ ಚಿತ್ರಣವೇ ಪ್ರಧಾನವಾಗಿದೆ. ಶಿಲೆಯ ಮೇಲಿನ ಭಾಗದಲ್ಲಿ ಚಿತ್ರವನ್ನು ಕೆತ್ತಿದ್ದು ತ್ರಿಕೋನಾಕೃತಿಯ ಒಳಗೆ ಚಿತ್ರವಿದೆ. ವೀರನು ಎತ್ತಿದ ಬಲಗೈನಿಂದ ಬಾಣವನ್ನು ಹಿಡಿದುಕೊಂಡಿದ್ದು ಎಡಗೈನಿಂದ ದಪ್ಪನೆಯ ಬಿಲ್ಲನ್ನು ಹಿಡಿದಿದ್ದಾನೆ.



ಪ್ರಾಚೀನ ವೀರಗಲ್ಲು : ಮಸ್ಕಲ್, ಹಿರಿಯೂರು ತಾ॥
ಕಾಲ ಕ್ರಿ. ಶ. ಸು. ೧೨ನೇ ಶತಮಾನ.

ಶಿರದಲ್ಲಿ ಕಟ್ಟಿದ ಮುಡಿ ಇದ್ದು ಒರಟಾದ ಜಡೆ ತೋಳಿನ ಹಿಂದೆ ಇಳಿಬಿದ್ದಿದೆ. ಶಾಂತ ಮುಖಭಾವವಿರುವ ಈ ವೀರನ ಕಿವಿಗಳಲ್ಲಿ ಓಲೆಗಳಿದ್ದು, ಕೊರಳಲ್ಲಿ ಹಾರದ ಜೊತೆಗೆ ಪದಕವಿದೆ. ಕೈ, ತೋಳು ಮತ್ತು ಕಾಲುಗಳಲ್ಲಿ ಕಡಗಗಳು ಇವೆ. ನಡುವಿನಲ್ಲಿ ಬಿಚ್ಚುಗತ್ತಿ ಇದ್ದು, ವೀರಗಚ್ಚೆಯ ವಸ್ತ್ರ ಭುಜಗಳಿಂದ ಇಳಿಬಿದ್ದಿದೆ. ಇಲ್ಲಿಯ ವೀರನೂ ಶತ್ರುಗಳ ಜೊತೆ ಹೋರಾಡಿ ಮಡಿದಿದ್ದಾನೆ. ಅದರ ಸ್ಮಾರಕವೇ ಈ ವೀರಗಲ್ಲು ಆಗಿದ್ದು, ಕ್ರಿ.ಶ. ಸುಮಾರು ೧೩ನೇ ಶತಮಾನಕ್ಕೆ ಈ ವೀರಗಲ್ಲು ಸೇರುತ್ತದೆ. ಒಂದೇ ಪರಂಪರೆಯ ಶಿಲ್ಪಿಗಳು ಈ ವೀರಗಲ್ಲನ್ನು ಕೆತ್ತಿರುವುದು ಗಮನಾರ್ಹ.

ಚಿತ್ರಲೇಖನ : **ಡಾ॥ ಮುತ್ತುರಾಜು**
ಜವಾಹರ್ ನವೋದಯ ವಿದ್ಯಾಲಯ
ಉಡುವಳ್ಳಿ - ೫೭೭ ೫೯೮
ಹಿರಿಯೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ




# ನ್ಯಾನೋ ವೈದ್ಯಕೀಯ : ಏನು ನಿರೀಕ್ಷಿಸಬಹುದು?

೯ ಡಿಸೆಂಬರ್, ೧೯೭೯. ಮನುಕುಲದ ಆರೋಗ್ಯ ಇತಿಹಾಸದಲ್ಲಿ ಒಂದು ಮೈಲಿಗಲ್ಲು! ಅದು ವಿಶ್ವ ಆರೋಗ್ಯ ಸಂಸ್ಥೆಯು ನಮ್ಮ ಜಗತ್ತು ಸಿಡುಬು ಮುಕ್ತವಾಗಿದೆ ಎಂದು ಅಧಿಕೃತವಾಗಿ ಘೋಷಿಸಿದ ದಿನ. ಅನಾದಿಕಾಲದಿಂದ ಮನುಕುಲವನ್ನು ಕಾಡುತ್ತಿದ್ದ ಸಿಡುಬು ವೈರಸ್ ಶಾಶ್ವತವಾಗಿ ನಮ್ಮ ನೈಜ ಪರಿಸರದಿಂದ ಮರೆಯಾಗಿಹೋಗಿತ್ತು. ಇದು ಸೋಂಕು ರೋಗಗಳ ವಿರುದ್ಧ ಮಾನವ ಸಾಧಿಸಿದ ಒಂದು ಮಹಾನ್ ವಿಜಯ. ಕೇವಲ ಒಂದು ವೈರಸ್ಸನ್ನು ನಿವಾರಿಸಿದ್ದಕ್ಕೆ ಬೀಗುವ ಈ ಮನುಷ್ಯ ನಾಳೆ ಈ ಭೂಮಿಯ ಮೇಲೆ ಇರುವ ಎಲ್ಲ ರೋಗಕಾರಕಗಳನ್ನು ಹಾಗೂ ಅವುಗಳಿಂದ ಸಂಭವಿಸುವ ಸೋಂಕು ರೋಗಗಳನ್ನು ನಿವಾರಿಸಬಲ್ಲವನಾದರೆ... ಹೇಗಿರಬಹುದು !

ಅಂತಹ ದಿನದ ಭರವಸೆಯನ್ನು ನೀಡುತ್ತಿದೆ ನ್ಯಾನೋ ವಿಜ್ಞಾನ !

ನ್ಯಾನೋ ವಿಜ್ಞಾನದಲ್ಲಿರುವ 'ನ್ಯಾನೋ' ಶಬ್ದದ ಬಗ್ಗೆ ಮೊದಲು ನಾವು ತಿಳಿದುಕೊಳ್ಳಬೇಕು. ಇದೊಂದು ಮುಂಪ್ರತ್ಯಯ (ಪ್ರಿಫಿಕ್ಸ್). ಮೆಟ್ರಿಕ್ ವ್ಯವಸ್ಥೆಯ ಸಂಖ್ಯಾ ವಾಚಕ ೧೦$^{-೯}$ ಅಥವಾ ೦.೦೦೦೦೦೦೦೦೧. ಇದನ್ನು ಮತ್ತಷ್ಟು ವಿಶದವಾಗಿ ತಿಳಿದುಕೊಳ್ಳಲು ಪ್ರಯತ್ನಿಸೋಣ. ಒಂದು ಸೆಂ.ಮೀ. ಎಂದರೆ ಒಂದು ಮೀಟರಿನ ೧/೧೦೦ ಭಾಗ. ಒಂದು ಮಿ.ಮಿ. ಎನ್ನುವುದು ಒಂದು ಮೀಟರಿನ ೧/೧೦೦೦ ಭಾಗ. ಒಂದು ನ್ಯಾನೋ ಮೀಟರ್ (ಎನ್.ಎಂ.) ಎನ್ನುವುದು ಒಂದು ಮೀಟರಿನ ಹತ್ತು ಕೋಟಿಯ ಒಂದು ಭಾಗ.

ನ್ಯಾನೋ ಮೀಟರನ್ನು ನಾವು ಖಂಡಿತ ಬರಿಗಣ್ಣಿನಿಂದ ನೋಡಲು ಸಾಧ್ಯವಿಲ್ಲ. ಇದು ಪರಮಾಣು ಲೋಕದ ಅಳತೆಯ ಮಾನ. ಒಂದು ಪರಮಾಣುವು ೦.೧ ನ್ಯಾನೋ ಮೀಟರ್ ಇರುತ್ತದೆ. ಪರಮಾಣುವಿನ ಒಳಗಡೆ ಇರುವ ಬೀಜವು ೦.೦೦೦೦೧ ಎನ್.ಎಂ. ಇರುತ್ತದೆ.

ನಮ್ಮ ಮನೆಯನ್ನು ನಾವು ಇಟ್ಟಿಗೆಗಳಿಂದ ಕಟ್ಟಿದ್ದೇವೆ. ಪ್ರಕೃತಿಯು ನಮ್ಮ ದೇಹವನ್ನು ಜೀವಕೋಶಗಳೆಂಬ ಇಟ್ಟಿಗೆಗಳಿಂದ ನಿರ್ಮಿಸಿದೆ. ಜೀವಕೋಶವನ್ನು ಬೃಹತ್ ಅಣುಗಳು (ಮ್ಯಾಕ್ರೊ ಮಾಲಿಕ್ಯೂಲ್ಸ್) ನಿರ್ಮಿಸುತ್ತವೆ. ಈ ಬೃಹತ್ ಅಣುಗಳು ಪರಮಾಣುಗಳನ್ನು ರೂಪಿಸುತ್ತವೆ. ನ್ಯಾನೋ ವಿಜ್ಞಾನದಲ್ಲಿ ನಾವು ಪರಮಾಣುಗಳನ್ನು ಇಟ್ಟಿಗೆಗಳಂತೆ ಬಳಸಿ, ನಮಗೆ ಬೇಕಾದ ವಸ್ತುವನ್ನು ನಾವೇ ನಿರ್ಮಿಸಿಕೊಳ್ಳಬಹುದು. ನ್ಯಾನೋ ವಿಜ್ಞಾನವನ್ನು ಬಳಸಿಕೊಂಡು ನಾವು ನಿರ್ಮಿಸುವ ಯಂತ್ರವೇ ಮುಂತಾದ ನಾನಾ ವಸ್ತುಗಳನ್ನು 'ನ್ಯಾನೋ ತಂತ್ರಜ್ಞಾನ' (ನ್ಯಾನೋ ಟೆಕ್ನಾಲಜಿ) ಎಂದು ಕರೆಯಬಹುದು. ಈ ನ್ಯಾನೋ ತಂತ್ರಜ್ಞಾನವನ್ನು ಬಳಸಿಕೊಂಡು ನಾವು ರೂಪಿಸುವ ಔಷಧಗಳು, ವೈದ್ಯಕೀಯ ಸಾಧನಗಳು ಹಾಗೂ ಚಿಕಿತ್ಸೆಯು ನ್ಯಾನೋ ವೈದ್ಯಕೀಯ (ನ್ಯಾನೋ ಮೆಡಿಸಿನ್) ಎಂದೆನಿಸಿಕೊಳ್ಳುತ್ತದೆ.

ನ್ಯಾನೋ ವೈದ್ಯಕೀಯ ಎನ್ನುವುದು ಭವಿಷ್ಯದ ವೈದ್ಯಕೀಯ. ಸಾಂಪ್ರದಾಯಿಕ ವೈದ್ಯಕೀಯಕ್ಕಿಂತ ಪೂರ್ಣ ಭಿನ್ನವಾದದ್ದು. ಸಾಂಪ್ರದಾಯಿಕ ವೈದ್ಯಕೀಯ 'ಚಿಕಿತ್ಸೆಯೇ ಇಲ್ಲದ ರೋಗಗಳು' ಎಂದು ಕೈಚೆಲ್ಲಿ ಕುಳಿತಿರುವ ರೋಗಗಳಿಗೂ ಚಿಕಿತ್ಸೆಯನ್ನು ಒದಗಿಸುವ ಭರವಸೆಯನ್ನು ನೀಡಿರುವ ಅದ್ಭುತ ವೈದ್ಯಕೀಯ ! ಇದರ ಭವ್ಯ ಭವಿಷ್ಯವನ್ನು ಮನಗಂಡ ಅಮೆರಿಕದ 'ನ್ಯಾಶನಲ್ ಇನ್ಸ್ಟಿಟ್ಯೂಟ್ ಆಫ್ ಹೆಲ್ತ್' ಎಂಬ ಸಂಸ್ಥೆ ನ್ಯಾನೋ ವೈದ್ಯಕೀಯದ ಮೇಲೆ ಅಪಾರ ಹಣವನ್ನು ಹೂಡಿದೆ. ೨೦೦೫ರಲ್ಲಿ ಒಂದು ಪಂಚವಾರ್ಷಿಕ ಯೋಜನೆಯನ್ನು ರೂಪಿಸಿ ಅಮೆರಿಕದಾದ್ಯಂತ ನಾಲ್ಕು ನ್ಯಾನೋ ವೈದ್ಯಕೀಯ ಸಂಶೋಧನಾ ಕೇಂದ್ರಗಳನ್ನು ಸ್ಥಾಪಿಸಿದೆ. ಯೂರೋಪಿನ ಮುಂದುವರಿದ ರಾಷ್ಟ್ರಗಳೂ ಈ ಕ್ಷೇತ್ರದಲ್ಲಿ ದಡಬಡಿಸಿ ಮುನ್ನಡೆಯಲಾರಂಭಿಸಿವೆ. ಜಗತ್ತಿನಾದ್ಯಂತ ನ್ಯಾನೋ ತಂತ್ರಜ್ಞಾನವನ್ನು ಆಧರಿಸಿ ೧೩೦ ಕಡೆಗಳಲ್ಲಿ ಸಂಶೋಧನೆಗಳು ನಡೆಯುತ್ತಿವೆ. ಈಗ ನ್ಯಾನೋ ವೈದ್ಯಕೀಯದ ಸುಮಾರು ೩೮ ಉತ್ಪನ್ನಗಳು ಲಭ್ಯ. ಅವು ಭಾರತವನ್ನು ತಲುಪಲು ಹೆಚ್ಚು ಕಾಲ ಬೇಕಿಲ್ಲ.

**ಡಾ॥ ನಾ. ಸೋಮೇಶ್ವರ**

ನ್ಯಾನೋ ತಂತ್ರಜ್ಞಾನದ ಪ್ರಥಮ ಲಾಭವನ್ನು ಔಷಧ ಉದ್ಯಮ ಪಡೆಯುತ್ತಿದೆ ಎನ್ನುವುದು ನಿಜ. ಸಾಂಪ್ರದಾಯಿಕ ಔಷಧ ವಿಜ್ಞಾನದಲ್ಲಿ ತಲೆನೋವನ್ನು ಕಡಿಮೆ ಮಾಡಲೆಂದು ಮಾತ್ರೆಯನ್ನು ತಿಂದರೆ, ಅದು ಮೊದಲು ಹೊಟ್ಟೆಗೆ ಹೋಗುತ್ತದೆ. ಹೊಟ್ಟೆಯಲ್ಲಿ ಕರಗಿ ರಕ್ತವನ್ನು ಸೇರುತ್ತದೆ. ರಕ್ತಪರಿಚಲನೆಯ ಮೂಲಕ ಇಡೀ ದೇಹದಾದ್ಯಂತ ಸಂಚರಿಸುತ್ತ ತಲೆಗೂ ಹೋಗುತ್ತದೆ. ತಲೆನೋವನ್ನು ಕಡಿಮೆ ಮಾಡುತ್ತದೆ. ನೋವು ಇರುವುದು ತಲೆಯಲ್ಲಿ! ಆದರೆ ಔಷಧವು ಇಡೀ ದೇಹದಲ್ಲಿರುವ ಎಲ್ಲ ಅಂಗಗಳಿಗೆ ಯಾಕೆ ಹೋಗಬೇಕು ?

ಸ್ತನದಲ್ಲಿ ಕ್ಯಾನ್ಸರ್ ಗಂತಿ ಬೆಳೆಯುತ್ತಿದೆ. ಹಾಗಾಗಿ ಕ್ಯಾನ್ಸರ್ ರೋಧಕ ಔಷಧವು ಸ್ತನ ಕ್ಯಾನ್ಸರ್ ಗಂತಿಯನ್ನು ಮಾತ್ರ ಹೋಗಿ ತಲುಪಬೇಕು. ಆದರೆ ಈಗ ನಾವು ತೆಗೆದುಕೊಳ್ಳುವ ಔಷಧಗಳು ಕ್ಯಾನ್ಸರ್ ಗಂತಿಯನ್ನು ತಲುಪುತ್ತವೆಯೋ ಇಲ್ಲವೋ ತಿಳಿಯದು. ಆದರೆ ದೇಹದ ಉಳಿದ ಎಲ್ಲ ಅಂಗಗಳನ್ನು ತಲುಪುತ್ತವೆ. ಉದಾಹರಣೆಗೆ, ಕ್ಯಾನ್ಸರ್ ಔಷಧವು ನಮ್ಮ ದೇಹದಲ್ಲಿ ಇರುವ ಎಲ್ಲ ರೋಮಕೂಪಗಳನ್ನು ತಲುಪುತ್ತದೆ.

ಅವುಗಳನ್ನು ನಾಶಪಡಿಸುತ್ತದೆ ಹಾಗೂ ಅಲ್ಲಿರುವ ಎಲ್ಲ ಕೂದಲನ್ನು ಉದುರಿಸುತ್ತದೆ. ಇದುವೇ ಪಾರ್ಶ್ವ ಪರಿಣಾಮ ಅಥವಾ ಅನಗತ್ಯ ಹಾಗೂ ಅನಪೇಕ್ಷಿತ ಪರಿಣಾಮ. ಕೆಲವು ಸಲ ಈ ಪಾರ್ಶ್ವ ಪರಿಣಾಮವೇ ಅಪಾಯಕಾರಿಯಾಗಿ ಪರಿಣಮಿಸಿ ಕೊನೆಗೆ ಜೀವಹಾರಕವಾಗಬಹುದು. ಪ್ರತಿವರ್ಷ ಸುಮಾರು ೬೫ ಬಿಲಿಯನ್ ಡಾಲರುಗಳಷ್ಟು ಮೊತ್ತ ಇದಕ್ಕಾಗಿ ಖರ್ಚಾಗುತ್ತಿದೆ.

ಇಂದು ಎಕ್ಸ್-ರೇ, ಸಿ.ಟಿ.ಸ್ಕ್ಯಾನ್, ಎಂ.ಆರ್.ಐ, ಫಂಕ್ಷನಲ್ ಪಾಸಿಟ್ರಾನ್ ಎಮಿಷನ್ ಟೋಮಾಗ್ರಫಿ ಮುಂತಾದ ತಂತ್ರಜ್ಞಾನಗಳು ನಮ್ಮ ದೇಹದ ಒಳಗಿನ ಅಂಗಾಂಗಗಳನ್ನು ವೀಕ್ಷಿಸುವ 'ಮೂರನೆಯ ಕಣ್ಣನ್ನು' ನೀಡಿವೆ. ಇದು ನಮಗೆಲ್ಲ ತಿಳಿದಿರುವ ಅಂಶ. ಆದರೆ ನಮ್ಮ ನೋಟವು ಅಂಗಕ್ಕೆ ಮಾತ್ರ ಸೀಮಿತ. ಅಂಗದ ಒಳಗಿರುವ ಜೀವಕೋಶದ ರೂಪುರೇಷೆಗಳ ಚಿತ್ರವನ್ನು ಗ್ರಹಿಸುವುದು ಸದ್ಯಕ್ಕೆ ಅಸಾಧ್ಯ.

ಕ್ಯಾನ್ಸರ್ ರೋಗವನ್ನು ನಾವು ಮೊದಲು ಪತ್ತೆ ಹಚ್ಚಬೇಕು. ನಂತರ ರೋಗ ಎಷ್ಟರಮಟ್ಟಿಗೆ ಬಲಿತಿದೆ ಎಂಬುದನ್ನು ತಿಳಿಯಬೇಕು ಆನಂತರ ಆ ರೋಗವನ್ನು ಔಷಧ, ಶಸ್ತ್ರಚಿಕಿತ್ಸೆ ಇಲ್ಲವೆ ವಿಕಿರಣಗಳ ನೆರವಿನಿಂದ ಗುಣಪಡಿಸಬೇಕು.

ನ್ಯಾನೋ ವೈದ್ಯಕೀಯದಲ್ಲಿಯೂ ಹೆಚ್ಚೂ ಕಡಿಮೆ ಇದೇ ತಂತ್ರವನ್ನು ಬಳಸುವರು. ನಾನೋ ವೈದ್ಯಕೀಯದಲ್ಲಿ ಬಳಸುವ ತಪಾಸಣೆ ಹಾಗೂ ಚಿಕಿತ್ಸೆಗಳೆಲ್ಲ ನ್ಯಾನೋ ಗಾತ್ರದಲ್ಲಿರುತ್ತವೆ. ಅಂದರೆ ಅವು ೧೦-೧೦೦ ಎನ್.ಎಂ. ಗಾತ್ರದಷ್ಟಿರುತ್ತವೆ. ಸಾಂಪ್ರದಾಯಿಕ ಔಷಧಗಳೆಲ್ಲ ದೊಡ್ಡ ದೊಡ್ಡ ಅಣುಗಳು. ಇವು ಜೀವಕೋಶದ ಒಳಗೆ ಸುಲಭವಾಗಿ ಹೋಗಲಾರವು. ಆದರೆ ನ್ಯಾನೋ ರೂಪದ ಔಷಧಗಳು ಅತ್ಯಂತ ಪುಟ್ಟ ಗಾತ್ರದಲ್ಲಿರುವ ಕಾರಣ ಇವು ಜೀವಕೋಶದ ಒಳಗೆ ಸುಲಭವಾಗಿ ನುಸುಳಬಲ್ಲವು.

ಕ್ಯಾನ್ಸರ್ ಚಿಕಿತ್ಸೆಯ ವಿವಿಧ ಹಂತಗಳನ್ನು ಗಮನಿಸೋಣ.

ಮೊದಲು ಕ್ಯಾನ್ಸರ್‌ಅನ್ನು ಪತ್ತೆ ಹಚ್ಚುವಿಕೆ :

ಕ್ಯಾನ್ಸರನ್ನು ಪತ್ತೆ ಹಚ್ಚಲು 'ಕ್ವಾಂಟಂ ಡಾಟ್ಸ್' ರೂಪುಗೊಂಡಿವೆ. ಕ್ವಾಂಟಂ ಡಾಟ್ಸ್ ನ್ಯಾನೋ ಕಣಗಳ ವೈದೃಶ್ಯ ವಸ್ತುಗಳು (ನ್ಯಾನೋ ಪಾರ್ಟಿಕಲ್ ಕಾಂಟ್ರಾಸ್ಟ್ ಏಜಂಟ್). ನ್ಯಾನೋ ವೈದೃಶ್ಯ ವಸ್ತುವನ್ನು ನಮ್ಮ ರಕ್ತನಾಳದ ಒಳಗೆ ಚುಚ್ಚಿದಾಗ ಅವು ನಿರ್ದಿಷ್ಟ ಅಂಗದ ಒಳಗೆ ಹೋಗಿ, ಅಲ್ಲಿರುವ ಜೀವಕೋಶಗಳನ್ನು ಪ್ರವೇಶಿಸಿ ಸಾಂದ್ರೀಕೃತವಾಗುತ್ತವೆ. ಉದಾಹರಣೆ : ಕ್ಯಾಡ್ಮಿಯಂ ಸೆಲೆನೈಡ್. ಇವು ಕ್ಯಾನ್ಸರ್ ಗಂತಿಯಲ್ಲಿ ವಿಶೇಷವಾಗಿ ಸಂಗ್ರಹವಾಗುತ್ತವೆ. ಅತಿನೇರಳೆ ಕಿರಣಗಳನ್ನು ಹಾಯಿಸಿದಾಗ ಇವು ಹೊಳೆಯುತ್ತವೆ. ಆಗ ಇವನ್ನು ಸೂಕ್ತ ಎಂ.ಆರ್.ಐ. ಮುಂತಾದ ಸಾಧನದಿಂದ ಪತ್ತೆ ಹಚ್ಚಿ ಚಿತ್ರೀಕರಿಸಬಹುದು. ರೋಗ ಎಷ್ಟು ಬಲಿತಿದೆ ಎನ್ನುವುದನ್ನು ತಿಳಿಯಬಹುದು.

ಯಾವ ನ್ಯಾನೋ ಕಣವು ಯಾವ ಅಂಗದಲ್ಲಿ ಹೆಚ್ಚು ಸಾಂದ್ರವಾಗುತ್ತದೆ ಎಂಬುದು ಕುತೂಹಲಕರ ವಿಷಯ. ಈ ಕಣಗಳಿಗೆ ನಿಗದಿತ ವಿದ್ಯುದಾವೇಗವನ್ನು (ಎಲೆಕ್ಟ್ರಿಕ್ ಚಾರ್ಜ್) ಆರೋಪಿಸುವುದರ ಮೂಲಕ ನಿರ್ದಿಷ್ಟ ಅಂಗದಲ್ಲಿ ಶೇಖರವಾಗುವಂತೆ ಮಾಡಬಹುದು. ಧನಾವೇಶದ ಸ್ವರ್ಣಕಣಗಳು (ಪಾಸಿಟಿವ್ಲಿ ಚಾರ್ಜ್ಡ್ ಗೋಲ್ಡ್ ನ್ಯಾನೋ ಪಾರ್ಟಿಕಲ್ಸ್) ಯಾವಾಗಲೂ ಮೂತ್ರಪಿಂಡಗಳಲ್ಲಿ ಸಂಗ್ರಹವಾಗುತ್ತವೆ. ಅದೇ ಋಣಾವೇಶ ಸ್ವರ್ಣಕಣಗಳು ಹೆಚ್ಚಿಗೆ ಯಕೃತ್ತು ಹಾಗೂ ಗುಲ್ಮಗಳಲ್ಲಿ ಸಂಗ್ರಹವಾಗುತ್ತವೆ. ಈ ಬಗ್ಗೆ ಇನ್ನೂ ಅಧ್ಯಯನ ನಡೆಯಬೇಕಿದೆ.

ಸಾಂಪ್ರದಾಯಿಕ ಕ್ಯಾನ್ಸರ್ ಚಿಕಿತ್ಸೆಯಲ್ಲಿ ಬಳಸುವ ಔಷಧಗಳ ಅಣುವಿನ ಗಾತ್ರ ಬಹಳ ದೊಡ್ಡದು. ಹಾಗಾಗಿ ಈ ಔಷಧಗಳನ್ನು ನ್ಯಾನೋ ಮಟ್ಟಕ್ಕೆ ಇಳಿಸಬೇಕು. ಇಳಿಸಿದ ನಂತರ ಅವನ್ನು ನಿರ್ದಿಷ್ಟ ಅಂಗದ ನಿರ್ದಿಷ್ಟ ಜೀವಕೋಶದೊಳಗೆ ನುಸುಳುವಂತೆ ಮಾಡಬೇಕು. ಇದಕ್ಕೆ ವಿಜ್ಞಾನಿಗಳು ಎರಡು ತಂತ್ರಜ್ಞಾನಗಳನ್ನು ರೂಪಿಸಿರುವರು. ಚಿನ್ನದ ಕರಟದೊಳಗೆ (ಗೋಲ್ಡ್ ಶೆಲ್ಸ್) ನ್ಯಾನೋ ಗಾತ್ರದ ಔಷಧವನ್ನು ಇರಿಸುವುದು ಒಂದು. ಇಲ್ಲವೇ ಲಿಪಿಡ್ ಅಥವಾ ಪಾಲಿಮರ್‌ಗಳನ್ನು ನ್ಯಾನೋ ಗಾತ್ರಕ್ಕೆ ಇಳಿಸಿ, ಅವುಗಳಿಗೆ ಔಷಧದ ಅಣುಗಳನ್ನು, ಎಂಜಿನ್ನಿಗೆ ಜೋಡಿಸುವ ಬೋಗಿಗಳಂತೆ ಜೋಡಿಸಿ, ಜೀವಕೋಶದ ಒಳಗೆ ಹೋಗಲು ಅನುವು ಮಾಡಿಕೊಡುವುದು ಇನ್ನೊಂದು. ಏಕೆಂದರೆ ಬಹಳಷ್ಟು ರೋಗಗಳು ಜೀವಕೋಶದ ಒಳಗೆ ಹುಟ್ಟುತ್ತವೆ. ಹಾಗಾಗಿ ರೋಗಪೀಡಿತ ಮೊಳಕೆ ಒಡೆಯುತ್ತಿರುವ ಸ್ಥಳಕ್ಕೆ ಹೋಗಿ, ಅದನ್ನು ಬುಡಸಮೇತ ಕಿತ್ತೆಸೆಯುವುದು ಹೆಚ್ಚು ಸೂಕ್ತವೆನಿಸುತ್ತದೆ.

ಇಂತಹ ನ್ಯಾನೋ ವಾಹನಗಳಲ್ಲಿ ಸಾಗುವ ಔಷಧಗಳು ನಿಗದಿತ ಸ್ಥಳವನ್ನು ಮಾತ್ರ ತಲುಪುತ್ತವೆ. ಹಾಗಾಗಿ ಪಾರ್ಶ್ವ ಪರಿಣಾಮಗಳು ಕಡಿಮೆ. ಔಷಧಗಳು ಎಷ್ಟು ಹೊತ್ತು ನಮ್ಮ ದೇಹದಲ್ಲಿ ಇರಬೇಕು ಎನ್ನುವುದನ್ನು ಪೂರ್ವಭಾವಿಯಾಗಿ ನಿರ್ಧರಿಸಬಹುದು. ಹಾಗಾಗಿ ಬೇಗ ದೇಹದಿಂದ ಹೊರ ವಿಸರ್ಜಿತವಾಗುವ ಔಷಧಗಳನ್ನು ಹೆಚ್ಚು ಕಾಲ ನಿಲ್ಲುವಂತೆ ಮಾಡಬಹುದು. ಅನಗತ್ಯವಾಗುವಷ್ಟು ಹೆಚ್ಚು ಕಾಲ ದೇಹದಲ್ಲಿ ಉಳಿದು ಪಾರ್ಶ್ವಪರಿಣಾಮವನ್ನು ಉಂಟು ಮಾಡುವ ಔಷಧಗಳನ್ನು ಬೇಗ ದೇಹದಿಂದ ಹೊರ ಹೋಗುವಂತೆಯೂ ಮಾಡಬಹುದು.

ಭವಿಷ್ಯದ ನ್ಯಾನೋ ಕ್ಯಾನ್ಸರ್ ಚಿಕಿತ್ಸೆಯ ಸ್ಥೂಲರೂಪ ಈ ಕೆಳಕಂಡಂತೆ ಇರುತ್ತದೆ :

* ಮೊದಲ ಹಂತದಲ್ಲಿ ಕ್ವಾಂಟಂ ಡಾಟ್ಸ್‌ಗಳನ್ನು ಕಳುಹಿಸಿ ರೋಗವನ್ನು ನಿಯಂತ್ರಿಸುವುದು.
* ಎರಡನೆಯ ಹಂತದಲ್ಲಿ ಕ್ಯಾನ್ಸರ್‌ಅನ್ನು ನಿಗ್ರಹಿಸಬಲ್ಲ ಸೂಕ್ತ ನ್ಯಾನೋ ಕ್ಯಾನ್ಸರ್ ಔಷಧವನ್ನು ರಕ್ತನಾಳದ ಮೂಲಕ ಚುಚ್ಚುವುದು.
* ಮೂರನೆಯ ಹಂತದಲ್ಲಿ ಈ ನ್ಯಾನೋ ಕ್ಯಾನ್ಸರ್ ಔಷಧವು ನಿರ್ದಿಷ್ಟ ಕ್ಯಾನ್ಸರ್ ಗಂತಿಯೊಳಗೆ ಸಂಗ್ರಹವಾಗಿರುವುದನ್ನು ಪತ್ತೆ ಹಚ್ಚುವುದು.
* ಆನಂತರ ಆ ಔಷಧವು ಜಾಗೃತವಾಗಿ ಕ್ಯಾನ್ಸರನ್ನು ನಿರ್ನಾಮವಾಗುವಂತೆ ಮಾಡುವುದು.

ಕ್ಯಾನ್ಸರ್ ರೋಗವನ್ನು ಪತ್ತೆಹಚ್ಚಲು ಕ್ವಾಂಟಂ ಡಾಟ್ಸ್‌ಗಳನ್ನು ಕಳುಹಿಸುವಾಗ ಅವುಗಳ ಜೊತೆಯಲ್ಲಿಯೇ ಕ್ಯಾನ್ಸರ್ ಔಷಧಗಳನ್ನೂ ಸಹ ಏಕೆ ಕಳುಹಿಸಬಾರದು ? – ಈ ಬಗ್ಗೆ ಸಂಶೋಧನೆ ನಡೆಯುತ್ತಿದೆ.

**ಕಾನ್ಜಿಯಸ್ ಆರ್.ಎಫ್. ಚಿಕಿತ್ಸೆ**

ಜಾನ್ ಎಸ್. ಕಾನ್ಜಿಯಸ್ (ಮಾರ್ಚ್ ೧, ೧೯೪೪ - ಫೆಬ್ರವರಿ ೧೮, ೨೦೦೯) ಎಂಬ ಅಮೆರಿಕದ









ಕಾನ್ಜಿಯಸ್ ಜೆ. ಎಸ್.

ಇಂಜಿನಿಯರ್ ಯಾವುದೇ ರೀತಿಯ ಶಸ್ತ್ರಚಿಕಿತ್ಸೆಯಿಲ್ಲದೆ, ಯಾವುದೇ ರೀತಿಯ ಔಷಧವಿಲ್ಲದೆ ಎಲ್ಲ ರೀತಿಯ ಕ್ಯಾನ್ಸರುಗಳನ್ನು ಗುಣಪಡಿಸುವ ತಂತ್ರಜ್ಞಾನವನ್ನು ರೂಪಿಸಿದನು. ಅದು ಕಾನ್ಜಿಯಸ್ ಆರ್.ಎಫ್. ಚಿಕಿತ್ಸೆ ಎಂದು ವಿಶ್ವದಲ್ಲಿ ಖ್ಯಾತವಾಗಿದೆ.

- ✳ ಚಿನ್ನ ಅಥವಾ ಕಾರ್ಬನ್ ನ್ಯಾನೋ ಕಣಗಳನ್ನು ದೇಹದ ಒಳಗೆ ಚುಚ್ಚುವುದು.
- ✳ ನಿಗದಿತ ಗಂತಿಯಲ್ಲಿ ಶೇಖರವಾಗಿರುವುದನ್ನು ಖಚಿತ ಪಡಿಸಿಕೊಳ್ಳುವುದು.
- ✳ ನಂತರ ನಿರ್ದಿಷ್ಟ ರೇಡಿಯೊ ಅಲೆಗಳನ್ನು ಕ್ಯಾನ್ಸರ್ ಗಂತಿಯ ಮೇಲೆ ಹಾಯಿಸುವುದು.
- ✳ ಗಂತಿಯಲ್ಲಿರುವ ನ್ಯಾನೋ ಚಿನ್ನದ ಕಣಗಳು ರೇಡಿಯೋ ಅಲೆಗಳನ್ನು ಹೀರಿಕೊಳ್ಳುತ್ತವೆ. ಬಿಸಿಯಾಗುತ್ತವೆ. ಕ್ಯಾನ್ಸರ್ ಜೀವಕೋಶಗಳು ಒಂದೊಂದಾಗಿ ನಾಶವಾಗುತ್ತವೆ.
- ✳ ಆರೋಗ್ಯವಂತ ಜೀವಕೋಶಗಳಿಗೆ ಯಾವುದೇ ಹಾನಿಯಾಗುವುದಿಲ್ಲ.

ಈ ಚಿಕಿತ್ಸೆ ಪ್ರಾಯೋಗಿಕವಾಗಿ ಯಶಸ್ವಿಯಾಗಿದೆ. ಆದರೆ ಇದು ಸಾರ್ವಜನಿಕರ ಉಪಯೋಗಕ್ಕೆ ಲಭ್ಯವಿಲ್ಲ.

ರೈಸ್ ವಿಶ್ವವಿದ್ಯಾಲಯದ ಪ್ರೊ|| ಜೆನಿಫರ್ ವೆಸ್ಟ್ ಅವರು ೧೨೦ ನ್ಯಾನೋ ಮೀಟರ್ ಗಾತ್ರದ ಚಿನ್ನದ ಕರಟವನ್ನು ರೂಪಿಸಿರುವರು. ಇವುಗಳ ಮೇಲೆ ಪ್ರತಿ ಕಾಯಗಳನ್ನು ಅಥವಾ ಪೆಪ್ಟೈಡುಗಳನ್ನು ಲೇಪಿಸಿ, ಗಂತಿಯ ಒಳಗೆ ಸೇರುವಂತೆ ಮಾಡುವರು. ಈ ಚಿನ್ನದ ಕರಟಗಳು ಗಂತಿಯಲ್ಲಿ ಸಾಂದ್ರೀಕೃತವಾದ ಮೇಲೆ ಹೊರಗಿನಿಂದ ಒಂದು ಇನ್‌ಫ್ರಾ ರೆಡ್ ಲೇಸರ್‌ಅನ್ನು ಹಾಯಿಸುವರು. ಈ ಲೇಸರ್ ಕಿರಣವು ಆರೋಗ್ಯಕರ ಭಾಗಗಳಿಗೆ ಯಾವುದೇ ರೀತಿಯ ತೊಂದರೆಯನ್ನುಂಟುಮಾಡದೆ ಗಂತಿಯಲ್ಲಿರುವ ಚಿನ್ನದ ಕರಟಗಳನ್ನು ಮಾತ್ರ ಬಿಸಿ ಮಾಡುತ್ತದೆ. ಶಾಖಕ್ಕೆ ಕ್ಯಾನ್ಸರ್ ಕೋಶ ಕರಗಿ ನಾಶವಾಗುತ್ತದೆ.


ಪ್ರೊ|| ಜೆನಿಫರ್ ವೆಸ್ಟ್

ಇಂದು ಶಸ್ತ್ರಚಿಕಿತ್ಸೆಯನ್ನು ಮಾಡಿದ ನಂತರ ಛೇದಿಸಿದ ಸ್ನಾಯುಗಳನ್ನು ಒಟ್ಟುಗೂಡಿಸಲು ಹೊಲಿಗೆ ಹಾಕುತ್ತೇವೆ. ಇತ್ತೀಚಿನ ದಿನಗಳಲ್ಲಿ ಎಲ್ಲೆಲ್ಲಿ ಸಾಧ್ಯವೋ ಅಲ್ಲಿ ವಿಶೇಷವಾದ ಕ್ಲಿಪ್‌ಗಳನ್ನು ಹಾಕುತ್ತಾರೆ. ನ್ಯಾನೋ ಶಸ್ತ್ರಚಿಕಿತ್ಸೆಯಲ್ಲಿ ಹೊಲಿಗೆಯೂ ಇರುವುದಿಲ್ಲ, ಕ್ಲಿಪ್‌ಗಳೂ ಇರುವುದಿಲ್ಲ.

ನಮ್ಮ ದೇಹದಲ್ಲಿ ಅತ್ಯಂತ ಸಂಕೀರ್ಣವಾದ ಅಂಗವೆಂದರೆ ಮಿದುಳು, ಮಿದುಳುಬಳ್ಳಿ ಹಾಗೂ ಪಾರ್ಶ್ವ ನರಗಳನ್ನು ಒಳಗೊಂಡ ನರಮಂಡಲ. ನರಮಂಡಲಕ್ಕೆ ಸಂಬಂಧಿಸಿದ ಬಹಳಷ್ಟು ರೋಗಗಳಿಗೆ ಪ್ರಸ್ತುತ ಪರಿಣಾಮಕಾರಿ ಚಿಕಿತ್ಸೆಯಿಲ್ಲ. ಆದರೆ ನ್ಯಾನೋ ತಂತ್ರಜ್ಞಾನವು ಅಂತಹ ಚಿಕಿತ್ಸೆಯನ್ನು ನನಸು ಮಾಡುವ ಭರವಸೆಯನ್ನು ನೀಡಿದೆ. ನ್ಯಾನೋ ಸ್ವರೂಪದ ಸಾಧನಗಳನ್ನು ರೂಪಿಸುವುದು, ಅವನ್ನು ನಮ್ಮ ಮಿದುಳಿನಲ್ಲಿ ಅಗತ್ಯ ಕಂಡ ಕಡೆ ಸ್ಥಾಪಿಸುವುದು, ಆ ಸಾಧನಗಳನ್ನು ಹೊರಗಿರುವ ಕಂಪ್ಯೂಟರುಗಳಿಂದ ನಿಯಂತ್ರಿಸಿ,




ಮಿದುಳಿನಲ್ಲಿ ಅಗತ್ಯ ಬದಲಾವಣೆಗಳನ್ನು ತರುವುದು. ಮೇಲುನೋಟಕ್ಕೆ ಇದು ಯಾವುದೇ ವೈಜ್ಞಾನಿಕ ಕಥೆಯೊಂದರ ಹಾಗೆ ಕಾಣುತ್ತದೆ. ಆದರೆ ಇದು ವಾಸ್ತವವಾಗುವ ದಿನಗಳು ಬಹಳ ದೂರವಿಲ್ಲ.

ಲಕ್ವಪೀಡಿತನ ದೇಹದ ಅರ್ಧಭಾಗವು ನಿಶ್ಚೇಷ್ಟಿತ. ಆಲ್ಜೈಮರ್ ರೋಗಿಯ ನರಕೋಶಗಳು ದಿನೇ ದಿನೇ ನಶಿಸುತ್ತಿರುತ್ತವೆ. ಮಲ್ಟಿಪಲ್ ಸ್ಕ್ಲೀರೋಸಿಸ್, ಎಮಯೋಟ್ರೋಫಿಕ್ ಲ್ಯಾಟರಲ್ ಸ್ಕ್ಲೀರೋಸಿಸ್ ಮುಂತಾದ ನರರೋಗಗಳು ವ್ಯಕ್ತಿಯ ಬದುಕನ್ನು ಅರ್ಥಹೀನವಾಗಿಸುತ್ತವೆ. ಇವೆಲ್ಲವನ್ನು ನಿಯಂತ್ರಿಸುವ ಅಥವಾ ಗುಣಪಡಿಸುವ ಭರವಸೆಯನ್ನು ನ್ಯಾನೋ ವೈದ್ಯಕೀಯ ನೀಡುತ್ತಿದೆ. ಆದರೆ ಒಂದು ಸಲ ತಣ್ಣಗೆ ಕುಳಿತು ಯೋಚಿಸಿದಾಗ ಇದು ಹೇಳುವಷ್ಟು ಸುಲಭದ ಕೆಲಸವಲ್ಲ ಎನ್ನುವುದು ವೇದ್ಯವಾಗುತ್ತದೆ.

'ಸ್ಟಾರ್ ಟ್ರೆಕ್' ಎಂಬ ಇಂಗ್ಲಿಷ್ ಧಾರಾವಾಹಿಯನ್ನು ನೋಡಿದವರಿಗೆ 'ರೆಪ್ಲಿಕೇಟರ್ಸ್'ಗಳ ಬಗ್ಗೆ ತಿಳಿದಿರುತ್ತದೆ. ಇವು ನ್ಯಾನೋ ಯಂತ್ರಗಳು. ತಮ್ಮ ಹಾಗೆ ಅಸಂಖ್ಯ ನ್ಯಾನೋ ಯಂತ್ರಗಳನ್ನು ಬಿಡುವಿಲ್ಲದಂತೆ, ಬೇಸರ ಇಲ್ಲದಂತೆ, ತಪ್ಪಿಲ್ಲದಂತೆ ಹಾಗೂ ಕಾಲಕ್ಕೆ ಸರಿಯಾಗಿ



ನಿರ್ಮಿಸುತ್ತವೆ ರೋಬೋಗಳು. ಈ ರೋಬೋಗಳ ಸಹಾಯದಿಂದ ಈ ಜಗತ್ತಿನಲ್ಲಿರುವ ಎಲ್ಲ ವಸ್ತುಗಳನ್ನು ನಾವು ತಯಾರಿಸಬಹುದು. ವಜ್ರದಿಂದ ಹಿಡಿದು ಅನ್ನಾಂ ಚಹದವರೆಗೆ ನಮಗೇನು ಬೇಕು ಅವನ್ನು ಪಡೆದುಕೊಳ್ಳಬಹುದು.

ಇಂತಹ ರೋಬೋಗಳು ವೈದ್ಯಕೀಯ ಕ್ಷೇತ್ರದಲ್ಲಿ ಹಿಂದೆಂದೂ ಕೇಳಿರದಂತಹ ಚಿಕಿತ್ಸೆಯ ಭರವಸೆಯನ್ನು ನೀಡುತ್ತಿವೆ. ಪೂರ್ವಯೋಜಿತ, ಕಾರ್ಯನಿಯೋಜಿತ ರೋಬೋಗಳಿರುವ ದ್ರವವನ್ನು ರೋಗಿಯು ಕುಡಿದರೆ ಸಾಕು !

* ರೋಬೋಗಳು ದೇಹದಲ್ಲಿ ಹರಡಿರುವ ಏಡ್ಸ್ ವೈರಸ್ಸುಗಳನ್ನು ಹುಡುಕಿ ಕೊಲ್ಲುತ್ತವೆ.
* ಹಾಗೆಯೇ ಗುಳೇ ಹೊರಟ ಕ್ಯಾನ್ಸರ್ ಕಣಗಳು (ಸೆಕಂಡರೀಸ್) ನಮ್ಮ ದೇಹದಲ್ಲಿ ಎಲ್ಲಿ ಬಚ್ಚಿಟ್ಟುಕೊಂಡಿದ್ದರೂ ಸರಿ, ಅವನ್ನು ಹುಡುಕಿಕೊಂಡುಹೋಗಿ ಕೊಲ್ಲುತ್ತವೆ.
* ಸ್ತನ ಚಿಕ್ಕದು ಎಂದು ಸಿಲಿಕಾನ್ ಚೀಲಗಳನ್ನು ಅಳವಡಿಸಿಕೊಳ್ಳುವುದು ಅಥವಾ ಸ್ತನ ತೀರಾ ದೊಡ್ಡದಾಯಿತೆಂದು ಚಿಕ್ಕದಾಗಿಸಿಕೊಳ್ಳುವುದು ಅಪರೂಪವೇನಲ್ಲ. ಇನ್ನು ಮುಂದೆ ಈ ಕೆಲಸವನ್ನು ರೋಬೋಗಳೇ ನಿರ್ವಹಿಸಲಿವೆ. ನಿಮಗೆ ಬೇಕಾದಂತಹ ಅಂಗಾಂಗಗಳನ್ನು – ಕಣ್ಣು, ಕಿವಿ, ಮೂಗು, ತುಟಿ ನೀವೇ 'ಮೇಡ್ ಟು ಆರ್ಡರ್' ಆಗಿ ಪಡೆಯಬಹುದು.
* ವೃದ್ಧಾಪ್ಯವನ್ನು ಮುಂದೂಡಬಹುದು.

ನ್ಯಾನೋ ರೋಬೋಗಳು ನೋಡಲು ಹೇಗೆ ಕಾಣುತ್ತವೆ ಎಂಬ ಪ್ರಶ್ನೆಗೆ ನಿಖರ ಉತ್ತರ ನೀಡಲು ಸಾಧ್ಯವಿಲ್ಲ. ಏಕೆಂದರೆ ನಮ್ಮ ಅಗತ್ಯಕ್ಕೆ ತಕ್ಕ ಹಾಗೆ ಕೆಲಸ ಮಾಡಬಲ್ಲ ನ್ಯಾನೋ ರೋಬೋಗಳನ್ನು ನಾವು ಇನ್ನೂ ನಿರ್ಮಿಸಿಲ್ಲ. ಆದರೆ 'ನೀಲನಕ್ಷೆ' ಸಿದ್ಧವಾಗಿದೆ.




ನಮ್ಮ ಒಡಲ ರಕ್ತಪ್ರವಾಹದಲ್ಲಿ ಚಲಿಸುವ ನ್ಯಾನೋ ರೋಬೋಗಳು ೦.೫-೩ ಮೈಕ್ರಾನ್ ಉದ್ದವಿದ್ದರೆ, ನಮ್ಮ ಸ್ನಾಯುಗಳಲ್ಲಿ ಚಲಿಸುವ ನ್ಯಾನೋ ರೋಬೋಗಳು ೫೦-೧೦೦ ಮೈಕ್ರಾನ್ ಉದ್ದವಿರಬಹುದು. ನಮ್ಮ ಅನ್ನನಾಳ ಹಾಗೂ ವಾಯುನಾಳಗಳಲ್ಲಿ ಚಲಿಸುವ ನ್ಯಾನೋ ರೋಬೋಗಳು ಇನ್ನೂ ದೊಡ್ಡದಿರುತ್ತವೆ. ಒಂದೊಂದು ರೋಗವನ್ನು ನಿಗ್ರಹಿಸಲು ಒಂದೊಂದು ನ್ಯಾನೋ ರೋಬೋವನ್ನು ನಿರ್ಮಿಸುವ ಸಾಧ್ಯತೆ ಇರುವ ಕಾರಣ, ವೈವಿಧ್ಯಮಯ ಗಾತ್ರ, ಆಕೃತಿಯ ನ್ಯಾನೋ ರೋಬೋಗಳು ರೂಪುಗೊಳ್ಳಲಿವೆ.

ಕೆಲವು ಮೂಲ ಮಾದರಿಗಳು ನಿರ್ಮಾಣವಾಗಿವೆ. ಉದಾಹರಣೆಗೆ 'ರೆಸ್ಪಿರೋಸೈಟ್' ಎಂಬ ಹೆಸರನ್ನು ಹೊತ್ತಿರುವ, ಕೆಂಗಣ (ಕೆಂಪು ರಕ್ತ ಕಣ)ದ ಹಾಗೆ ಕೆಲಸ ಮಾಡುವ ನ್ಯಾನೋ ರೋಬೋ ಬಂದಿದೆ.

ವೈದ್ಯರು ಈ ಕೆಂಗಣ ನ್ಯಾನೋ ರೋಬೋಗಳನ್ನು ತಮ್ಮ ನಿಯಂತ್ರಣದಲ್ಲಿ ಇಟ್ಟುಕೊಳ್ಳಬಲ್ಲರು. ಅಲ್ಟ್ರಾಸೌಂಡ್‌ನಂತಹ ಅಲೆಗಳನ್ನು ಬಳಸಿ, ನಮ್ಮ ದೇಹದಲ್ಲಿರುವ ಎಲ್ಲಾ ಕೆಂಗಣ ನ್ಯಾನೋ ರೋಬೋಗಳನ್ನು ಕೆಲಸ ನಿಲ್ಲಿಸಿ ಸುಪ್ತಾವಸ್ಥೆಯನ್ನು ತಲುಪುವಂತೆ ಆಜ್ಞೆಯನ್ನು ನೀಡಬಹುದು, ಹಾಗೆಯೇ ಸುಪ್ತವಾಗಿರುವ ನ್ಯಾನೋ ರೋಬೋಗಳನ್ನು ಜಾಗೃತವಾಗುವಂತೆಯೂ ಮಾಡಬಹುದು.

ಇಂಜೆಕ್ಷನ್ ಮೂಲಕ ದೇಹದ ಒಳಗೆ ರವಾನಿಸಿದ ನ್ಯಾನೋ ರೋಬೋಗಳನ್ನು ಸುರಕ್ಷಿತವಾಗಿ ಹೇಗೆ ಹೊರ ತೆಗೆಯುತ್ತಾರೆ ?



ನ್ಯಾನೋ ರೋಬೋಗಳನ್ನು ನಿರ್ಮಿಸುವಾಗಲೇ ಅವನ್ನು ದೇಹದಿಂದ ಹೊರಗೆ ಹೇಗೆ ವಿಸರ್ಜಿಸಬೇಕು ಎಂಬುದರ ನಿರ್ಣಯವೂ ಆಗಿರುತ್ತದೆ. ನ್ಯಾನೋ ರೋಬೋಗಳನ್ನು ನಮ್ಮ ದೈನಂದಿನ ಮಲ ಮೂತ್ರಗಳ ಮೂಲಕವೇ ವಿಸರ್ಜನೆಯಾಗುವಂತಹ ಪ್ರಯತ್ನ ನಡೆಯುತ್ತದೆ. ಆದರೆ ಎಲ್ಲ ರೋಬೋಗಳನ್ನು ಹೀಗೆ ನಿವಾರಿಸುವುದು ಸಾಧ್ಯವಾಗದು. ಕೆಲವು ನ್ಯಾನೋ ರೋಬೋಗಳನ್ನು ಇಂದಿನ 'ಫೆರೆಸಿಸ್'ನಂತಹ ವಿಧಾನದಿಂದ ಬೇರ್ಪಡಿಸಬೇಕಾಗುತ್ತದೆ.

ಜಗತ್ತಿನಲ್ಲಿ ಯಾವುದೇ ವೈದ್ಯಕೀಯವೂ ೧೦೦ಕ್ಕೆ ೧೦೦ರಷ್ಟು ಸುರಕ್ಷಿತವಲ್ಲ. ನ್ಯಾನೋ ವೈದ್ಯಕೀಯವೂ ಸಹ ೧೦೦ಕ್ಕೆ ೧೦೦ರಷ್ಟು ಸುರಕ್ಷಿತವಾಗಲಾರದು. ಇದುವರೆಗೂ ನಾವು ಯಾರೂ ನಿರೀಕ್ಷಿಸದ ರೀತಿಯ ಪಾರ್ಶ್ವಪರಿಣಾಮಗಳು ಅಥವಾ ತೊಡಕುಗಳು ಕಂಡು ಬರಬಹುದು. ವಿಜ್ಞಾನಿಗಳೇನೋ ಸಂಭವ ಸಾಧ್ಯತೆಯ ಎಲ್ಲ ರೀತಿಯ ತೊಡಕುಗಳನ್ನು ಲೆಕ್ಕಕ್ಕೆ ತೆಗೆದುಕೊಂಡು ಅವುಗಳಿಗೆ ನಿವಾರಣೆ ಇಲ್ಲವೇ ಪರಿಹಾರೋಪಾಯಗಳನ್ನು ರೂಪಿಸುತ್ತಿದ್ದಾರೆ. ಆದರೂ ಸಹ ಅನಿರೀಕ್ಷಿತ ಸಮಸ್ಯೆಗಳನ್ನು ನಿರೀಕ್ಷಿಸಬೇಕಾಗುತ್ತದೆ.

ಭವಿಷ್ಯವು ನಿಜಕ್ಕೂ ಭವ್ಯವಾಗಿದೆ. ಇಂದು ಜಗತ್ತಿನಾದ್ಯಂತ ಕಂಡುಬರುತ್ತಿರುವ ಸೋಂಕುರೋಗಗಳು ನಿವಾರಣೆಯಾಗಲಿವೆ. ನಾನಾ ರೋಗ ರುಜಿನಗಳಿಂದ ಆಗುತ್ತಿರುವ ನೋವು ಮರೆಯಾಗಲಿದೆ. ಮಾನವನ ಆಯಸ್ಸು, ಬುದ್ಧಿಮತ್ತೆ ಹಿಂದೆಂದೂ ಕಾಣದಷ್ಟು ಪ್ರಮಾಣದಲ್ಲಿ ಹೆಚ್ಚಲಿದೆ.

**ಡಾ|| ನಾ. ಸೋಮೇಶ್ವರ**
ಡಿ/೫, ೧೮೬,'ಜನನಿ', ೪೦೭ ಎಸ್‌ಎಫ್‌ಎಸ್, ೨ನೇ ಮುಖ್ಯರಸ್ತೆ, ೩ನೇ ಅಡ್ಡರಸ್ತೆ
ಯಲಹಂಕ ನ್ಯೂ ಟೌನ್, ಜಿಕೆವಿಕೆ ಪೋಸ್ಟ್, ಬೆಂಗಳೂರು - ೫೬೦ ೦೬೪

ಪಿ. ಬಿ. ಪ್ರಸನ್ನ




# ನೆಲೆ

''ವಾಯ್... ಭಟ್ರೇ... ನಿಮ್ಮ ಹೆಸ್ರು ಈ ಲಿಸ್ಟಿನಲ್ಲೇ ಇಲ್ಲ. ನೀವು ಬದುಕಿಯೇ ಇಲ್ಲ ಅಂತ ಹೇಳ್ತಾ ಉಂಟು ಈ ಲಿಸ್ಟ್.''

''ಯಾವ ಬೋಳೀಮಗ ಹೇಳಿದ್ದು ನಾನು ಸತ್ತಿದ್ದೇನೆ ಅಂತ ? ಒಂದು ವರ್ಷ ಊರು ಬಿಟ್ಟು ಹೋದ್ರೆ ಸತ್ತ ಹಾಗೆ ಲೆಕ್ಕವಾ ? ನಾನು ಓಟು ಹಾಕಿಯೇ ತೀರುವವ. ನಾನು, ನನ್ನ ಹೆಂಡ್ತಿ ಅಷ್ಟು ದೂರದಿಂದ ಅದಕ್ಕೆಂತಲೇ ಬಂದಿದ್ದೇವೆ.''

''ಅದು ಆಗುದಿಲ್ಲ ಭಟ್ರೇ... ನಿಮ್ಮ ಹೆಂಡ್ತಿಯ ಹೆಸ್ರನ್ನೂ ಹೊಡ್ದುಹಾಕಿದ್ದಾರೆ. ಅವ್ರು ಸಾ ಸತ್ತ ಹಾಗೆಯೇ ಲೆಕ್ಕ. ಯೆಂತ ಮಾಡ್ಳಿಕ್ಕೂ ಆಗುದಿಲ್ಲ, ರೂಲ್ಸು ಇರುವುದೇ ಹಾಗೆ.''

''ಬದುಕಿದ್ದವ್ರನ್ನು ಸತ್ತಿದ್ದಾರೆ ಅಂತ ಹೇಳುವುದು ಯಾವ ಬೊಜ್ಜದ ರೂಲ್ಸು ನಿಮ್ಮದು ? ನಾನು ಓಟು ಹಾಕಿಯೇ ಸಿದ್ದ.''

''ನೋಡಿ... ಜಾಸ್ತಿ ಪಿರಿಪಿರಿ ಮಾಡಿ ನಂಗೆ ಮಂಡೆ ಬಿಸಿ ಮಾಡ್ಬೇಡಿ. ಜನ್ರ ಕ್ಯೂ ಉದ್ದ ಆಗ್ತಾ ಉಂಟು. ಹೆಚ್ಚು ಚೊರೆ ಮಾಡದೆ ವಾಪಾಸ್ ಹೋಗಿ, ಇಲ್ಲಾಂತಾದ್ರೆ ಪೊಲೀಸಿನವನ ಹತ್ರ ಹೇಳಿ ಆಚೆ ಕಳಿಸ್ಬೇಕಾಗ್ತದೆ.''

ಇದಿಷ್ಟು ಓಟಿನ ದಿವ್ಸ ಪೊಲ್ಯ ಸರ್ಕಾರಿ ಶಾಲೆಯ ಮತಗಟ್ಟೆಯಲ್ಲಿ ಪೊಲ್ಯದ ಗೋವಿಂದ ಭಟ್ರು ಅಲಿಯಾಸ್ ಗೋಯಿಂದ ಭಟ್ರಿಗೂ ಅಲ್ಲಿನ ಪಿಆರ್‌ಓಗೂ ನಡ್ದ ಡೈಲಾಗು. ಗೋಯಿಂದ ಭಟ್ರಿಗೆ ಗಾಯದ ಮೇಲೆ ಬರೆ ಎಳ್ದ ಹಾಗೆ ಆಗಿತ್ತು. ಗರ್ವದಿಂದ ಧುಮುಗುಡ್ತಾ ಮನೆಗೆ ವಾಪಾಸ್ ಬಂದ್ರು. ದಾರಿಯಲ್ಲಿ ಸಿಕ್ಕಿದವ್ರತ್ರ ಓಟ್ ಹಾಕ್ಲಿಕ್ಕೆ ಹೋದಾಗ ಆದ ಇನ್ಸಲ್ಟಿನ ಬಗ್ಗೆ ಹೇಳ್ಳಿಕ್ಕೆ ನೋಡಿದ್ರು. ಆದ್ರೆ ಯಾರೂ ಭಟ್ರ ಮಾತನ್ನು ಕಿವಿಗೆ ಹಾಕೊಳ್ಳೇ ಇಲ್ಲ. ಹಿಂದೆಲ್ಲ ಹೆಜ್ಜೆ ಹೆಜ್ಜೆಗೆ ನಮಸ್ಕಾರ ಕೊಡ್ತಿದ್ದ ಊರಿನವ್ರು ತನ್ನನ್ನು ಕಣ್ಣೆತ್ತಿಯೂ ನೋಡದೆ ಇರುವುದನ್ನು ಕಂಡು ಭಟ್ರಿಗೆ ಕಂಡಾಬಟ್ಟೆ ಆಶ್ಚರ್ಯ ಆಯ್ತು.

ಈ ಗೋಯಿಂದ ಭಟ್ರು ಯಾರು ? ಅವ್ರು ಯೆಂತಕ್ಕೆ ಊರು ಬಿಟ್ಟು ಹೋದ್ರು ? ಯೆಂತಕ್ಕೆ ವಾಪಾಸ್ ಬಂದ್ರು ಅನ್ನೂದನ್ನು ಮೊದ್ಲು ಹೇಳ್ತೇನೆ. ನಂತ್ರ ಎಂತ ಆಯ್ತು ಅಂತ ಆಮೇಲೆ ಹೇಳ್ತೇನೆ.

ಪೊಲ್ಯದಲ್ಲಿ ಒಂದು ಮಠ ಉಂಟು. ಅದಕ್ಕೆ ನಾಗಮಠ ಅಂತ ಕರೀತಾರೆ. ಹೆಸ್ರೇ ಹೇಳುವ ಹಾಗೆ ನಾಗ ಅಲ್ಲಿ ಮೈನ್ ದೇವ್ರು. ಆದ್ರೆ ಅಲ್ಲಿ ಮಠ ಇಲ್ಲ. ಸುಮಾರು ಅರ್ಧ ಎಕ್ರೆ ಪ್ರದೇಶದಲ್ಲಿ ಒತ್ತೊತ್ತಾಗಿ ಬೆಳ್ದ ಮರಗಳು ಇರುವ ಬನ ಉಂಟು. ಅದ್ರ ಮಧ್ಯ ತುಂಬ ನಾಗನ ಕಲ್ಲುಗಳು ಉಂಟು. ಅಲ್ಲೇ ಸೈಡಿಗೆ ರಕ್ತೇಶ್ವರಿ, ನಂದಿಗೋಣ, ಗುಳಿಗ ಮೊದಲಾದ ಭೂತಗಳ ಫ್ಯಾಮಿಲಿಯೇ ಉಂಟು. ನಾಗಬನವನ್ನು ಭೂತಗಳು ಕಾಪಾಡ್ತವೆ ಅಂತ ನಂಬಿಕೆ ಉಂಟು. ರಾತ್ರಿ ಹೊತ್ತು ನೀವು ಯಾರಾದ್ರೂ ಆ ಬದಿಗೆ ಹೋದ್ರೆ ಗೆಜ್ಜೆ ಸೌಂಡು, ಹೆಂಗಸ್ರು ನೆಗ್ಯಾಡಿದ ಸೌಂಡು ಎಲ್ಲ ಕೇಳಿಬರ್ತದೆ. ಹಾಗಾಗಿ ರಾತ್ರಿ ಯಾರೂ ಸಾ ಆ ದಿಕ್ಕಿಗೆ ತಲೆ ಹಾಕಿ ಮಲ್ಗುದಿಲ್ಲ.

ಬನದ ನಾಗನೂ ಸಾಮಾನ್ಯದವ ಅಲ್ಲ. ಮಕ್ಕಳಾಗದೆ ಇದ್ದವ್ರಿಗೆ ಮಕ್ಕಳನ್ನು ಕೊಡುವವ. ಚರ್ಮರೋಗ ಎಂಥಾದ್ದೂ ಇದ್ರೆ ಅವ್ರಿಗೆ ತನು ಎರ್ದ್ರೆ ಆಯ್ತು. ಎಲ್ಲ ರೋಗ ಮಂಗಮಾಯ. ಇಂಥ ನಾಗನ ಕಾರ್ಣಿಕ ಎಲ್ಲ ಕಡೆ ಫೇಮಸ್ ಆಗಿತ್ತು. ಪರ ಊರಿನಿಂದ ತುಂಬ ಜನ ಆ ಬನದಲ್ಲಿ ಪೂಜೆ ಮಾಡಿಸ್ಲಿಕ್ಕೆ ಬರ್ತಿದ್ರು. ಆ ಬನದ ಪೂಜೆಯನ್ನು ವಂಶಪಾರಂಪರ್ಯದಿಂದ ಮಾಡ್ತಾ ಬಂದವ್ರು ಗೋಯಿಂದ ಭಟ್ರು. ಬನ ಅವ್ರದ್ದೇ ಆಸ್ತಿ. ಪೂಜೆಗೆ ಯಾರೇ ಬರ್ಲಿ ತಮ್ಮ ಮನೆಗೆ ಪ್ರೀತಿಯಿಂದ ಕರ್ಕೊಂಡು ಹೋಗಿ ಬೇಕಾದ ವ್ಯವಸ್ಥೆ ಮಾಡಿಸ್ತಿದ್ರು. ಭಕ್ತರು ಕೊಟ್ಟಿದ್ದನ್ನು ಪ್ರೀತಿಯಿಂದ ತಕ್ಕೊಳ್ತಿದ್ರು. ಯಾವಾಗ ನೋಡಿದ್ರೂ ಅವ್ರ ಮನೆಯಲ್ಲಿ ಜನ ತಪ್ತಾ ಇರ್ಲಿಲ್ಲ. ಒಳ್ಳೆ ಮಠದ ಹಾಗೆ ಜನ ಬರ್ತಾ ಇದ್ದದ್ರಿಂದ ಅವ್ರ ಮನೆ ಮತ್ತು ಬನ ಇರುವ ಒಟ್ಟು ಜಾಗವನ್ನು ಊರಿನವ್ರು ನಾಗಮಠ ಅಂತ ಕರೀಲಿಕ್ಕೆ ಸುರು ಮಾಡಿದ್ರು. ಕಡೆಗೆ ಅದೇ ಹೆಸ್ರು ಉಳೀತು. ಭಟ್ರ ಹೆಂಡತಿ ಸೀತಕ್ಕ ಕೂಡ ಒಳ್ಳೆ ಪಾಪದ ಹೆಂಗಸು. ಬಂದವ್ರಿಗೆ ಸಂತೋಷದಿಂದ ಬೇಯಿಸಿ ಹಾಕ್ತಿದ್ರು. ಭಟ್ರಿಗೆ ಸರ್ಕಾರಿ ನಿಯಮದ ಹಾಗೆ ಒಂದು ಗಂಡು, ಒಂದು ಹೆಣ್ಣು! ದೊಡ್ಡವ ಬೆಂಗ್ಳೂರಲ್ಲಿ ಸಾಫ್ಟ್‌ವೇರ್ ಇಂಜಿನಿಯರ್. ಹೆಂಡ್ತಿ, ಮಗು ಸ್ವಂತ ಮನೆ ಹೀಗೆ ಆರಾಮವಾಗಿದ್ದ. ಮಗಳ್ಗೂ ಮದ್ವೆ ಆಗಿ ಬೊಂಬ್ಯಾಯಲ್ಲಿ ಆರಾಮವಾಗಿದ್ಲು. ಅವ್ಳ ಗಂಡನೂ ದೊಡ್ಡ ಇಂಜಿನಿಯರ್ ಆಗಿದ್ದ.

ಹೀಗಿದ್ದ ಭಟ್ರಿಗೆ ಕಾಲಾದಿಕಾಲಕ್ಕೆ ಕಷ್ಟಗಳು ಬರ್ಲಿಕ್ಕೆ ಸುರುವಾಯ್ತು. ಭಟ್ರೇನೋ ತಕ್ಕ ಮಟ್ಟಿಗೆ ಗಟ್ಟಿಮುಟ್ಟಾಗಿದ್ರು. ಆದ್ರೆ ಸೀತಕ್ಕನಿಗೆ ಮಾತ್ರ ತೊಂದ್ರೆ ಸುರುವಾಯ್ತು. ಕೈ ತುರಿಸ್ಲಿಕ್ಕೆ ಸುರುವಾಯ್ತು. ಡಾಕ್ಟ್ರತ್ರ ಕೇಳಿದ್ದಕ್ಕೆ ಕೊಟ್ಟಿಗೆ ಕೆಲ್ಸ ಮಾಡ್ಬೇಡಿ ಅಂದ್ರು. ಇದ್ರಿಂದಾಗಿ ದನ ಕರು ಮಾರ್ಬೇಕಾಗಿ ಬಂತು. ಕೈ ತುರ್ಸುದು ಹೆಚ್ಚಾಯ್ತೇ ಶಿವಾಯಿ ಕಡಿಮೆ ಆಗ್ಲಿಲ್ಲ. ಅಲ್ಲಿ ಇಲ್ಲಿ ಮದ್ದು ಮಾಡಿದ್ರು. ಬನದ ದೇವ್ರಿಗೆ ಹರಕೆ ಒಪ್ಪಿಸಿದ್ರು. ಆದ್ರೂ ನಾಗ ವಾಸಿ ಮಾಡ್ಳೇ ಇಲ್ಲ. ಸಾಲದ್ದಕ್ಕೆ ಬಚ್ಚಲಲ್ಲಿ ಒಂದು ಸರ್ತಿ ಜಾರಿಬಿದ್ದು ಸೀತಕ್ಕನ ಕಾಲು ಸಾ ಫ್ರ್ಯಾಕ್ಚರ್ ಆಯ್ತು. ಅಮ್ಮ ಅಪ್ಪ ಕಷ್ಟಪಡುದು ಮಕ್ಳಿಗೆ ನೋಡ್ಳಿಕ್ಕಾಗ್ಲಿಲ್ಲ.

''ನೀವು ಇಲ್ಲಿದ್ದು ಒದ್ದಾಡುದು ಸಾಕು. ನಿಮ್ಮ ಕಷ್ಟ ನಮ್ಗೆ ನೋಡ್ಳಿಕ್ಕಾಗುದಿಲ್ಲ. ನೀವು ಇಲ್ಲಿದ್ರೆ ನಿಮ್ಗೆ ತೊಂದ್ರೆ. ಆದಾಗ ಪದೇ ಪದೇ ನಮಿಗೆ ಬರ್ಲಿಕ್ಕೆ ಆಗುದಿಲ್ಲ. ನಮ್ಮೊಟ್ಟಿಗೆ ಬಂದು ಇರಿ. ಒಂದೇ ಕಡೆ ಇದ್ದು ಬೇಜಾರಾದ್ರೆ ಸ್ವಲ್ಪ ದಿನ ಬೆಂಗ್ಳೂರಲ್ಲಿ, ಸ್ವಲ್ಪ ದಿನ ಬೊಂಬ್ಯಾಯಲ್ಲಿ ಇರಿ'' ಅಂತ ಮಗ, ಸೊಸೆ, ಮಗ್ಳು, ಅಳಿಯ ಎಲ್ಲ ಒತ್ತಾಯ ಮಾಡಿದ್ರು. ಭಟ್ರು ಗಂಡ ಹೆಂಡ್ತಿಗೆ ಮಕ್ಳು ಹೇಳುದು ಸರಿ ಅಂತ ಅನಿಸಿತು. ಆದ್ರೆ ನಾಗ ಪೂಜೆ ಪರಂಪರೆಯಿಂದ ಮಾಡಿಕೊಂಡು ಬಂದದ್ದು. ಅದನ್ನು ಬಿಟ್ಟು ಹೇಗೆ ಹೋಗುದು ಅಂತ ಆಲೋಚನೆ ಬಂತು. ಆಗ ಅವ್ರ ಎದ್ರಿಗೆ ಪ್ರತ್ಯಕ್ಷ ಆದವ್ರು ರಾಂ ಭಟ್ರು.

ಈಗ ನಿಮ್ಗೆ ರಾಂ ಭಟ್ರ ಹಿಸ್ಟ್ರಿ ಹೇಳ್ತೇನೆ. ಇವ್ರು ಗೋಯಿಂದ ಭಟ್ರ ಕುಟುಂಬದವ್ರು. ಅಂದ ಕಾಲತ್ತಿಲೆ ಮೆಡ್ರಾಸಿಗೆ ಓಡಿಹೋದವ್ರು. ನಾಕು ವೇದಗಳ ಹೆಸ್ರು ಗೊತ್ತಿರದಿದ್ರೂ ಪುರೋಹಿತ ಅಂತ ಹೆಸ್ರು ಹಾಕ್ಕೊಂಡು ಕಂಡಾಬಟ್ಟೆ ದುಡ್ಡು ಮಾಡಿದವ್ರು. ಮಕ್ಳೆಲ್ಲ ದೊಡ್ಡವರಾದ್ಮೇಲೆ ಇನ್ನು ಮಾಡ್ಳಿಕ್ಕೆ ಎಂತ ಕೆಲ್ಸ ಇಲ್ಲ ಅಂತ ಹೆಂಡ್ತಿಯೊಟ್ಟಿಗೆ ಪೊಲ್ಯಕ್ಕೆ ಬಂದಿದ್ರು. ಬಂದವ್ರಿಗೆ ಒಂದು ನೆಲೆ ಬೇಕಾಗಿತ್ತು. ಸ್ವೈಟಾಗಿ ಗೋಯಿಂದ ಭಟ್ರ ಮನೆಗೆ ಬರೂದಕ್ಕೂ ಅವ್ರು ಮನೆ ಬಿಡುವ ಯೋಚನೆ ಮಾಡಿದ್ದಕ್ಕೂ ಸರೀ ಆಯ್ತು. ''ರಾಮಾ... ಸ್ವಲ್ಪ ದಿವ್ಸದ ಮಟ್ಟಿಗೆ ನಾವು ಮಕ್ಳ ಹತ್ರ ಹೋಗಿ ಬರ್ತೇವೆ. ನೀನು ನಮ್ಮ ಮನೆಯಲ್ಲೇ ಇದ್ದುಕೊಂಡು ನಾಗಪೂಜೆ ನಿತ್ಯ ಮಾಡ್ತಾ ಪ್ರತೀ ಸಂಕ್ರಾಂತಿ ಭೂತಗಳಿಗೆ ತಂಬಿಲ ಮಾಡಿಸ್ತಾ ನೋಡಿಕೊಂಡಿರ್ತೀಯಾ'' ಅಂತ ಕೇಳಿದ್ರು ಭಟ್ರು. ರಾಂ ಭಟ್ರಿಗೆ ಸ್ವರ್ಗಕ್ಕೆ ಮೂರೇ ಗೇಣು. ಅರ್ಧ ಎಕ್ರೆ ಜಾಗದಲ್ಲಿರುವ ವನ, ಅದ್ರ ಪೂಜೆ, ಭಕ್ತರಿಂದ ಬರುವ

ಕಾಣಿಕೆ, ಇರ್ಲಿಕ್ಕೆ ಗೋಯಿಂದಣ್ಣನ ಮನೆ, ಇನ್ನೆಂತ ಬೇಕು ? ''ಓ... ಆಗ್ಲಿ ಗೋಯಿಂದಣ್ಣ... ನೀವು ಹೋಗಿ. ನಾನು ಎಲ್ಲ ನೋಡಿಕೊಳ್ತೇನೆ'' ಅಂದ್ರು. ಹೀಗೆ ಗೋಯಿಂದ ಭಟ್ರು ಗಂಡ ಹೆಂಣ್ತಿ ಪೊಲ್ಯ ಬಿಟ್ಟು ಮಗನ ಹತ್ರಕ್ಕೆ ಬೆಂಗ್ಳೂರಿಗೆ ಹೋದ್ರು.

ಹೋದ ಹೊಸದ್ರಲ್ಲಿ ಎಲ್ಲವೂ ಚೆಂದವಾಗಿಯೇ ಇತ್ತು. ಡೈಲಿ ಭಟ್ರನ್ನು ಮಾತಾಡಿಸ್ಲಿಕ್ಕೆ ನೆಂಟ್ರು ಬರ್ತಾ ಇದ್ರು. ಬಂದವ್ರು ತಮ್ಮ ಮನೆಗೂ ಭಟ್ರನ್ನು ಕರ್ಕೊಂಡು ಹೋಗ್ತಿದ್ರು. ಹೀಗೆ ಎಲ್ಲ ಕಡೆ ಸುತ್ತಾಡ್ತಾ, ಮೊಮ್ಮಗನ ಆಟ ಪಾಠ ನೋಡ್ತಾ ಇರುವಾಗ ದಿನ ಚೆನ್ನಾಗಿಯೇ ಹೋಗ್ತಿತ್ತು. ಆದ್ರೆ ಸೀತಕ್ಕನ ಕೈ ತುರಿಕೆ ಮಾತ್ರ ಕಡಿಮೆ ಆಗ್ಲೇ ಇಲ್ಲ. ದಿನ ದಿನ ಹೆಚ್ಚಾಯ್ತು. ಸೊಸೆಯ ಪಿರಿಪಿರಿಯೂ ಸುರುವಾಯ್ತು. ಯಾರಾದ್ರೂ ಸಂಬಂಧದವ್ರು ಭಟ್ರನ್ನು ಮಾತಾಡ್ಲಿಸ್ಲಿಕ್ಕೆ ಬಂದ್ರೆ, ''ಬಂದವ್ರಿಗೆ ಚಾ, ಕಾಫಿ ಮಾಡುದ್ರಲ್ಲೇ ನನ್ನ ಜೀವಮಾನ ಹೋಯ್ತು. ನಂಗೊಂದು ಗ್ರಾಚಾರ'' ಅಂತೆಲ್ಲ ಬಂದವ್ರಿಗೆ ಕೇಳುವ ಹಾಗೆ ಹೇಳ್ಳಿಕ್ಕೆ ಸುರು ಮಾಡಿದ್ಲು. ಸೀತಕ್ಕನ ಕೈ ಚರ್ಮ ಸತ್ತು ತುರ್ಸಿದಾಗ ತುಂಬ ಉದುರಿ ಬೀಳ್ಳಿಕ್ಕೆ ಸುರುವಾಯ್ತು. ''ಷ್ಯಕ್... ಅತ್ತೆ ತುಂಬ ಗಲೀಜು. ನಂಗೆಂತ ಹೆಲ್ಪ್ ಆಗುದಿಲ್ಲ ಅವ್ರಿಂದ. ಸೇರುಗಟ್ಲೆ ಚರ್ಮದ ಚೂರು ಉದ್ರಿ ಬೀಳ್ತದೆ. ನಂಗೆ ಗೋರಿಗೋರಿ ಸಾಕಾಯ್ತು. ಈ ಕರ್ಮಕ್ಕೆ ಯಾಕೆ ಕರ್ಕೊಂಡು ಬಂದ್ರಿ? ನಮ್ಮ ಮಗುವಿಗೂ ನಾಳೆ ಹಬ್ಬಿದ್ರೆ ಎಂತ ಮಾಡುದು ? ಷ್ಯಕ್...'', ಅಂತ ಎರಡು ಮೂರು ಸಾರಿ ಓಪನ್ನಾಗಿ ಗಂಡನ ಹತ್ರ ಹೇಳಿದ್ಲು. ಅವ ಯೆಂತದೂ ಮಾತಾಡ್ಲಿಲ್ಲ. ತನ್ನ ಕಂಪೆನಿಯ ಸೀನಿಯರ್‌ಗಳು ಮನೆಗೆ ಬಂದಾಗ ಅಸಯ್ಯ ಆಗ್ತದೆ ಅಂತ ಹೇಳಿ ತಾಯಿಯನ್ನು ಒಳಗಿನ ರೂಮಲ್ಲೇ ಕೂತ್ಕೊಳ್ಳಿಸಿದ. ಇದೆಲ್ಲ ಸ್ಫೋಟ ಗೊಂಡದ್ದು ಭಟ್ರ ಮಗಳು ಬಂದಾಗ. ಅವ್ಳು ಅಮ್ಮನನ್ನು ಕತ್ಲೆ ಕೋಣೆಯಲ್ಲಿ ಇಟ್ಟದ್ದನ್ನು ನೋಡಿ, ''ಇದೆಂಥದಣ್ಣ... ಅಮ್ಮನನ್ನು ಹೀಗಾ ನೋಡ್ಕೊಳ್ಳುದು ?'' ಅಂತ ಕೇಳಿದ್ದೇ ತಡ, ''ಹೌದೌದು... ನಾವು ಸರೀ ನೋಡಿಕೊಳ್ತಾ ಇಲ್ಲ ಅಲ್ವಾ ? ನಿಮಗೆ ಅಷ್ಟು ಮೋಕೆ ಇದ್ರೆ ನೀನೇ ಕರ್ಕೊಂಡೋಗಿ ಇಟ್ಟುಕೋ. ನಂಗೂ ಅವ್ರ ಚಾಕ್ರಿ ಮಾಡಿ ಮಾಡಿ ಸಾಕಾಗಿ ಹೋಗಿದೆ'', ಅಂತ ಬಾಯಿ ಬೊಂಬಾಯಿ ಮಾಡಿದ್ಲು ಸೊಸೆ. ಮಗಳಿಗೂ ಸಿಟ್ಟು ಬಂತು. ನಿಂತ ಮೆಟ್ಟಿನಲ್ಲಿ ವಿಮಾನದಲ್ಲಿ ಅಪ್ಪ - ಅಮ್ಮನನ್ನು ಬೊಂಬ್ಬಾಗೆ ಕರ್ಕೊಂಡುಹೋದ್ಲು.

ತಿಂಗಳುಗಟ್ಲೆ ಮದ್ದು ಮಾಡಿದ ಮೇಲೆ ಸೀತಕ್ಕನ ಕೈ ತುರ್ಸುವ ರೋಗ ಸ್ವಲ್ಪ ಕಂಟ್ರೋಲಿಗೆ ಬಂತು. ಬೊಂಬ್ಬಾ ಸೀತಕ್ಕನಿಗೆ ಸ್ವಲ್ಪ ಹಿಡಿಸಿತು. ಆದ್ರೆ ಭಟ್ರು ಚಪ್ಪೆಗಟ್ಟಿದ್ರು. ಏಳನೇ ಅಂತಸ್ತಿನ ಕೋಳಿಗೂಡಿನ ಹಾಗಿರುವ ಮನೆಯಲ್ಲಿ ಸುಮ್ನೆ ಕೂತು ಕೂತು ತಣ್ಣಗಾದ್ರು. ಹೊರಗೆ ಹೋದ್ರೆ ದೇಶ ಗೊತ್ತಿಲ್ಲ. ಭಾಷೆ ಗೊತ್ತಿಲ್ಲ. ಒಂದು ಸರ್ತಿ ಯಾರೋ ಹೇಳಿದ್ರು ಅಂತ ಕೆಳಗಿಳ್ದು ದೇವಸ್ಥಾನಕ್ಕೆ ಹೋಗಿ ದಾರಿ ತಪ್ಪಿಸಿಕೊಂಡು ಎಲ್ರಿಗೂ ತಲೆ ಬಿಸಿ ಮಾಡಿಹಾಕಿದ್ರು. ''ಚಾಪೆಯಿಂದ ಯೇಳ್ಳಿಕ್ಕೆ ಆಗದೇ ಇದ್ದವ್ರಿಗೆ ಯೆಂತಕ್ಕೆ ಬೇಕಾಗಿತ್ತು ಕೆತ್ತೆಬಜೆ'', ಅಂತ ಅಳಿಯ ಬೈದ. ಭಟ್ರಿಗೆ ತಾವು ಊರು ಬಿಟ್ಟಿದ್ದೇ ತಪ್ಪಾಯ್ತು ಅಂತ ಅನ್ನಿಸ್ಲಿಕ್ಕೆ ಸುರುವಾಯ್ತು.

ಭಟ್ರು ರಾಂ ಭಟ್ರಿಗೆ ಆಗಾಗ ಫೋನ್ ಮಾಡ್ತಿದ್ರು. ಒಂದು ಸರ್ತಿ ಫೋನ್ ಮಾಡುವಾಗ ತನ್ನ ಸ್ಥಿತಿಯ ಬಗ್ಗೆ, ಹೆಂಡತಿಯ ಸ್ಥಿತಿಯ ಬಗ್ಗೆ, ಬೇಸರದಿಂದ ಹೇಳಿದ್ರು. ಅದಕ್ಕೆ ರಾಂ ಭಟ್ರು, ''ನಮ್ಮ ನಾಗನದ್ದೇ ಉಪದ್ರ ಇರ್ಬೇಕು. ಯಾವ್ದಕ್ಕೂ ಒಂದು ದರ್ಶನ ಏರ್ಪಾಡು ಮಾಡ್ತೇನೆ. ಅದ್ರಲ್ಲಿ ಎಂತ ನುಡಿಕಟ್ಟು ಆಗ್ತದೇಂತ ನೋಡುವ. ನಾಗ ಹೇಳಿದ ಹಾಗೆ ಮಾಡಿದ್ರೆ ನಿಮ್ಮ ಕಷ್ಟ ಎಲ್ಲ ಪರಿಹಾರ ಆದೀತು ಗೋಯಿಂದಣ್ಣ'', ಅಂತ ಹೇಳಿದ್ರು. ''ಆಯ್ತು ಹಾಗಾದ್ರೆ. ದರ್ಶನ ಮಾಡಿಸು'' ಅಂದ್ರು ಗೋಯಿಂದ ಭಟ್ರು.

ಕೆಲವು ದಿವ್ಸ ಆದ್ಮೇಲೆ ರಾಂ ಭಟ್ರು ಗೋಯಿಂದ ಭಟ್ರಿಗೆ ಫೋನ್ ಮಾಡಿ, ''ಗೋಯಿಂದಣ್ಣ, ದರ್ಶನ ಮಾಡ್ಸಿದೆ. ನಂಗೆ ನೆಲೆ ಇಲ್ಲ. ಕಣ್ಣಿನ ತಂಕ ಹುತ್ತ ಬೆಳ್ದಿದೆ. ಬನ ಎಲ್ಲ ಕಡ್ದು ಒಳ್ಳೆ ನೆಲೆ ಮಾಡಿದ್ರೆ ಕುಟುಂಬದ ಕಷ್ಟ ಎಲ್ಲ ಪರಿಹಾರ ಆಗ್ತದೆ ಅಂತ ನುಡಿಕಟ್ಟಾಗಿದೆ ಗೋಯಿಂದಣ್ಣಾ... ಎಂತಕ್ಕೂ ಇನ್ನು ತಡ ಮಾಡ್ಬಾರ್ದು. ಬೇಗ ಬನದ ಜೀರ್ಣೋದ್ದಾರಕ್ಕೆ ಮೂರ್ತ ನೋಡ್ಬೇಕು'', ಅಂತ ಹೇಳಿದ್ರು.

ಭಟ್ರಿಗೆ ಒಂದು ಸರ್ತಿ ಎದೆ ಝುಗ್ಗಂತ ಹೇಳಿತು. ತಾನು ನಿಷ್ಠೆಯಿಂದ ಪೂಜೆ ಮಾಡಿದ ನಾಗ ಹೀಗೆ ಹೇಳಿದ್ನಲ್ಲಾ ಅಂತ ಬೇಜಾರಾಯ್ತು. ಸೀತಕ್ಕನ ಹತ್ರ ಹೇಳಿದ್ರು. ಅವ್ರಾದ್ರೂ ಯೆಂತ ಹೇಳ್ತಾರೆ ? ''ಯೆಂತಾದ್ರೂ ಆಗ್ಲಿ, ಬೇಗ ಮೂರ್ತ ನೋಡ್ಲಿಕ್ಕೆ ಹೇಳಿ'' ಅಂದ್ರು. ಭಟ್ರ ಮಾತಿನ ಹಾಗೆ ರಾಂ ಭಟ್ರು ಮೂರ್ತ ನೋಡಿ ಇಂಥ ದಿವ್ಸ ಬನ್ನಿ ಅಂತ ಹೇಳಿದ್ರು.

ಹೊರಡುವ ಹಿಂದಿನ ದಿವ್ಸ ಭಟ್ರ ಅಳಿಯ, ''ನಿನ್ನ ಅಪ್ಪ ಬಜೀ ಬೋದಾಳ. ರಾಂ ಮಾವ ಹೇಳಿದ್ದನ್ನು ಸತ್ಯಾಂತಲೇ ನಂಬಿದ್ದಾರೆ. ಬನದಲ್ಲಿ ಲಕ್ಷಾಂತರ ರೂಪಾಯಿ ಬೆಲೆಯ ಮರಗಳು ಉಂಟಂತೆ. ಅವುಗಳನ್ನು ಕಡ್ದ್ರೆ ಒಳ್ಳೆ ಲಾಭ ಉಂಟಂತೆ. ಮಾವ ಒಪ್ಪದೇ ಇದ್ರೆ ಒಪ್ಪಿಸುವ ಜವಾಬ್ದಾರಿ ನಿಂದು ಅಂತ ಆವತ್ತೇ ಹೇಳಿದ್ರು. ಈಗ ಮಾವ ಸುಲಭವಾಗಿ ಒಪ್ಪಿದ್ದು ಒಳ್ಳೇದೇ ಆಯ್ತು. ಮರ ಮಾರಿದ್ರಲ್ಲಿ ಸ್ವಲ್ಪ ಪರ್ಸೆಂಟ್ ಪ್ರಾಫಿಟ್ ನಂಗೆ, ಸ್ವಲ್ಪ ಭಾವನಿಗೆ, ಸ್ವಲ್ಪ ದರ್ಶನದ ಪಾತ್ರಿಗೆ, ಸ್ವಲ್ಪ ರೇಂಜರಿಗೆ ಕೊಡ್ತಾರಂತೆ. ಮೇಜರ್ ಪ್ರಾಫಿಟ್ ಅವ್ರಿಗೇ ಅಂತೆ'' ಅಂತ ಹೇಳುವುದು ಕೇಳಿಸಿತು. ಸಿಡ್ಲು ಹೊಡ್ದ ಹಾಗಾಯ್ತು ಭಟ್ರಿಗೆ. ಆದ್ರೂ ಎಂತದೂ ತೋರಿಸದೆ ಮಗ್ಳು ಅಳಿಯನೊಟ್ಟಿಗೆ ಊರಿಗೆ ಬಂದ್ರು.

ಬೆಳಿಗ್ಗೆ ಊರಿಗೆ ಬಂದು ನೋಡ್ತಾರೆ, ಎಂತ ಹೇಳುದು ? ಉಚ್ಚಿಲದಿಂದ ಪೊಲ್ಯಕ್ಕೆ ಹೋಗುವ ದಾರಿಯಲ್ಲಿ ಅಲ್ಲಲ್ಲಿ 'ನಾಗಮಠಕ್ಕೆ ದಾರಿ' ಅಂತ ಬೋರ್ಡು ಬಿದ್ದಿದೆ. 'ಜೀರ್ಣೋದ್ಧಾರ ಮೂಹೂರ್ತಕ್ಕೆ ಸ್ವಾಗತ' ಅಂತ ಬ್ಯಾನರ್‌ಗಳು. ಎಲ್ಲದ್ರಲ್ಲೂ ರಾಂ ಭಟ್ರ ಫೋಟೋ. ಕೆಳಗೆ 'ಧರ್ಮದರ್ಶಿ, ನಾಗಮಠ' ಅಂತ ಬರ್ದಿದೆ ! ಕಾರ್ಯಕ್ರಮಕ್ಕೆ ಶುಭ ಕೋರುವವರಲ್ಲಿ ಊರಿನ ದೊಡ್ಡ ದೊಡ್ಡ ರೌಡಿಗಳೂ ಇದ್ರು. ಅವ್ರ ಫೋಟೋ ಕೂಡ ಬ್ಯಾನರ್‌ಗಳಲ್ಲಿ ಇತ್ತು. ಮನೆಗೆ ಬರುವ ದಾರಿಯಲ್ಲಿ ಒಬ್ರೇ ಒಬ್ರು, ''ಭಟ್ರೇ, ಯಾವಾಗ ಬಂದ್ರೀ ?'' ಅಂತ ಕೇಳುದು ಬಿಡಿ. ನಗೆ ಸೈತ ಆಡ್ಲಿಲ್ಲ. ಮನೆಗೆ ಬಂದು ನೋಡ್ತಾರೆ, 'ವೇದಮೂರ್ತಿ ರಾಮ ಭಟ್ಟರು' ಅಂತ ದೊಡ್ಡ ಬೋರ್ಡ್ ಬಿದ್ದಿದೆ. ಜೊತೆಗೆ ನಾಗಬನದಲ್ಲಿ ನಡಿಯುವ ಸೇವೆಗಳ ಪಟ್ಟಿ. ಕಡಿಮೆಯ ಸೇವೆ ಅಂದ್ರೆ ಒಂದು ಸಾವಿರದ್ದು ! ಮನೆ ಒಳಗೆ ಬಂದ್ರೆ ಅಲ್ಲಿ ಒಂದಷ್ಟು ರಾಜಕಾರಣಿಗಳು, ಅವ್ರ ಹಿಂಬಾಲಕ್ರು ಒಟ್ರಾಶಿ ಜನ. ಅಷ್ಟು ಹೊತ್ತಿಗೆ ರಾಂ ಭಟ್ರು ನೆಗ್ಯಾಡಿ ಬಂದು, ''ಬಂದ್ರಾ.... ಗೋಯಿಂದಣ್ಣ... ಪ್ರಯಾಣ ಚೆನ್ನಾಗಿ ಆಯ್ತಾ? ಈ ಫಂಕ್ಷನ್ ಗ್ರ್ಯಾಂಡಾಗಿಯೇ ಮಾಡುವಾಂತ ರಾಜಕಾರಣಿಗಳನ್ನು ಎಲ್ಲ ಕರ್ಸಿದ್ದೇನೆ. ಯೆಂತ ಮಾಡುದು, ನಾಗನೇ ನೆಲೆ ಇಲ್ಲಾಂತ ಹೇಳಿದ್ಮೇಲೆ ಯೆಂತ ಮಾಡ್ಲಿಕ್ಕಾಗ್ತದೆ ? ಒಟ್ರಾಶಿ ನೀವೆಲ್ಲ ಬಂದ್ರಲ್ವಾ ? ತುಂಬ ಒಳ್ಳೇದಾಯ್ತು. ಪಾತ್ರಿ ಬರುವ ಹೊತ್ತಾಯ್ತು. ಬೇಗ ಸ್ನಾನ ಮಾಡಿ ಬನ್ನಿ'' ಅಂದ್ರು. ಭಟ್ರಿಗೆ ಗರ್ವ ಏರ್ತಾ ಇತ್ತು. ಅಷ್ಟು ಹೊತ್ತಿಗೆ ಒಬ್ಬ ರಾಜಕಾರಣಿ, ''ಭಟ್ರೇ... ಇವತ್ತು ಓಟು. ಹೇಗೂ ಬಂದಿದ್ದೀರಿ. ಓಟು ಹಾಕಿ ಬನ್ನಿ, ಆಮೇಲೆ ಸ್ನಾನ ಮಾಡಿದ್ರೆ ಆಯ್ತು'' ಅಂದ್ರು. ಭಟ್ರು ಯಾವತ್ತೂ ಓಟು ತಪ್ಪಿಸಿದವ್ರೇ ಅಲ್ಲ. ಫಸ್ಟೇ ಹೋಗಿ ಹಾಕಿ ಬರ್ತಿದ್ರು. ಈ ಸರ್ತಿ ಹೇಗೂ ಬಂದಿದ್ದೇವಲ್ಲ ಅಂತ ಓಟು ಹಾಕ್ಲಿಕ್ಕೆ ಹೋದ್ರೆ ನೀವು ಬದುಕಿಯೇ ಇಲ್ಲ ಅಂತ ವಾಪಾಸ್ ಕಳಿಸಿದ್ರು. ಇದಿಷ್ಟು ಅಲ್ಲಿಯವರೆಗೆ ನಡ್ದ ಕತೆ. ನಂತ್ರ ಯೆಂತ ಆಯ್ತು ಅಂತ ಈಗ ಹೇಳ್ತೇನೆ.

ಭಟ್ರು ಗರ್ವದಿಂದ ಮನೆಗೆ ಬಂದ್ರಾ ? ಸ್ನಾನ ಮಾಡ್ಲಿಕ್ಕೆ ಹೋಗುವ ಮೊದ್ಲು ಅವ್ರಿಗೆ ಎಲೆ ಅಡಿಕೆ ಹಾಕುವ ಅಭ್ಯಾಸ. ಊರು ಬಿಟ್ಟು ಒಂದು ವರ್ಷದಲ್ಲಿ ಆ ಅಭ್ಯಾಸ ತಪ್ಪಿಹೋಗಿತ್ತು. ಈಗ ಊರಿಗೆ ಬಂದವ್ರು ಅದ್ರ ಸುಖ ಅನುಭವಿಸಲಿಕ್ಕೆ ಸುರು ಮಾಡಿದ್ರು. ಅಷ್ಟು ಹೊತ್ತಿಗೆ ಮಗ, ಸೊಸೆ ಬಂದವ್ರು, ''ಹೇಗಿದ್ದೀರಿ ?'' ಅಂತ ಕೇಳಿದ್ರು. ಮಾತೇ ಆಡ್ಲಿಲ್ಲ. ರಾಂ ಭಟ್ರು ಅಲ್ಲಿಗೆ ಬಂದಿದ್ದ ಪಾತ್ರಿಗಳು, ರೇಂಜರ್, ತಾಲ್ಲೂಕ್ ಪಂಚಾಯತ್ ಮೆಂಬರ್‌ಗಳನ್ನು ಗೋಯಿಂದ ಭಟ್ರಿಗೆ ಇಂಟ್ರೊಡ್ಯೂಸ್ ಮಾಡಿದ್ರು. ಅವ್ರು ಕಣ್ಣೆತ್ತಿಯೂ ನೋಡ್ಲಿಲ್ಲ. ಕಡೆಗೆ ರಾಂ ಭಟ್ರು, ''ಗೋಯಿಂದಣ್ಣಾ... ಪ್ರಾರ್ಥನೆಗೆ ಮೂರ್ತ ಹತ್ರ ಬರ್ತಾ ಉಂಟು. ಸ್ನಾನಕ್ಕೆ ಹೋಗಿ'' ಅಂದ್ರು.

''ಯೆಂತ ಪ್ರಾರ್ಥನೆ ?'' ಭಟ್ರು ಕೇಳಿದ್ರು.

''ಯೆಂತ ಹೀಗೆ ಕೇಳ್ತೀರಿ ಗೋಯಿಂದಣ್ಣಾ? ನಾಗಬನದ್ದು... ಜೀರ್ಣೋದ್ಧಾರದ್ದು ?''

''ಯಾರು ಹೇಳಿದ್ದು ಜೀರ್ಣೋದ್ಧಾರ ಆಗ್ಬೇಕೂಂತ ?''

''ಷ್ಯಕ್... ಗೋಯಿಂದಣ್ಣಾ, ಮರ್ಲಾ ನಿಮ್ಗೆ? ನಾಗನೇ ನೆಲೆಯಿಲ್ಲ ಅಂತ ಹೇಳಿದ್ದು... ನಾನೇ ನಿಮ್ಗೆ ಬರ್ಲಿಕ್ಕೆ ಹೇಳಿದ್ದು ಎಲ್ಲ ಮರ್ತುಹೋಯ್ತಾ? ಅರವುಮರವು ಮನಿ ಸುರುವಾಯ್ತಾ ಎಂತ ಕತೆ ?''

''ಬಾಯಿ ಮುಚ್ಚಾ! ಅಧಿಕ ಪ್ರಸಂಗಿ ! ನಾಗನಿಗೆ ನೆಲೆ ಅಂತೆ ನೆಲೆ... ಏನಾ ?... ದೇವ್ರಿಗೇ ಮನೆ ಕಟ್ಟಿಸಿಕೊಡುವಷ್ಟು ಬೆಳ್ದುಬಿಟ್ಟಿಯನಾ ನೀನು ? ನೀನು ಮಾತ್ರ ಅಲ್ಲ, ಇಲ್ಲಿ ಇರುವವರೆಲ್ಲ ಕೇಳಿ. ನಾಗಬನ, ಈ ಮನೆ ನನ್ನ ಪಿತ್ರಾರ್ಜಿತ. ಬನದ್ದು ಒಂದು ಮರ, ಅಲ್ಲ ಒಂದು ಗೆಲ್ಲು ಕಡಿಸ್ಲಿಕ್ಕೂ ಬಿಡುದಿಲ್ಲ. ಎಷ್ಟೇ ಕಷ್ಟ ಬಂದ್ರೂ ಇನ್ನು ನಾನು ಊರು ಬಿಡುವವ ಅಲ್ಲ. ನನ್ನ ನಾಗನಿಗೆ ಅದೇ ಸಾಕು. ನಂಗೆ ಇದೇ ಸಾಕು. ನೀವೆಲ್ಲ ಇಲ್ಲಿಂದ ಹೊರಡ್ಬಹುದು'', ಅಂತ ಬೊಬ್ಬೆ ಹೊಡ್ದವ್ರೇ ಎಲೆ ಅಡಕೆ ರಸ ಉಗುಳಿದ್ರು. ಕೊಡಲಿ ತಕೊಂಡು ಬಂದ್ರು. ರಾಂ ಭಟ್ರ ಹೆಸ್ರಿನ ಬೋರ್ಡು, ಸೇವೆಯ ಲಿಸ್ಟ್ ಇದ್ದ ಬೋರ್ಡ್ ಎಲ್ಲ ತುಂಡು ತುಂಡು ಮಾಡಿದ್ರು. ರೀಪುಗಳನ್ನೆಲ್ಲ ಬಚ್ಚಲಿಗೆ ಹಾಕಿ ನೀರು ಕಾಯಿಸಿಕೊಂಡ್ರು. ಬಂದವ್ರೆಲ್ಲ ವಾಪಾಸ್ ಹೋಗುವಾಗ ಗೋಯಿಂದ ಭಟ್ರು ಸ್ನಾನದ ಸುಖ ಅನುಭವಿಸ್ತಾ ಇದ್ರು !

ಪಿ. ಬಿ. ಪ್ರಸನ್ನ
ಕನ್ನಡ ಪ್ರಾಧ್ಯಾಪಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಸಿರ್ಸಿ - ೫೮೧ ೪೦೧, ಉತ್ತರ ಕನ್ನಡ ಜಿಲ್ಲೆ



**ಡಾ|| ಟಿ. ಆರ್. ಚಂದ್ರಶೇಖರ**

> ಮಾರ್ಚ್ ೮ರ ಅಂತರರಾಷ್ಟ್ರೀಯ ಮಹಿಳಾ ದಿನದ ಸಂದರ್ಭದಲ್ಲಿ ತನ್ನೆಲ್ಲ ಮಹಿಳಾ ಓದುಗರಿಗೆ 'ಹೊಸತು' ಶುಭಾಶಯ ಕೋರುತ್ತದೆ. ಆ ಸಂದರ್ಭದಲ್ಲಿ ಈ ಲೇಖನ ಔಚಿತ್ಯಪೂರ್ಣ.

# ಲಿಂಗ ಸಮಾನತೆ ಮತ್ತು ಅಭಿವೃದ್ಧಿ

ಇತ್ತೀಚೆಗೆ ವಿಶ್ವಬ್ಯಾಂಕು ತನ್ನ ೨೦೧೨ರ ವಿಶ್ವ ಅಭಿವೃದ್ಧಿ ವರದಿಯನ್ನು 'ಲಿಂಗ ಸಮಾನತೆ ಮತ್ತು ಅಭಿವೃದ್ಧಿ' ಎಂಬ ಶೀರ್ಷಿಕೆಯಲ್ಲಿ ಪ್ರಕಟಿಸಿದೆ. ಇದರಲ್ಲಿ ಲಿಂಗ ಸಮಾನತೆಯು ಅಭಿವೃದ್ಧಿಯಲ್ಲಿ ಯಾವ ಪಾತ್ರ ನಿರ್ವಹಿಸುತ್ತದೆ ಮತ್ತು ಹೇಗೆ ಅದಕ್ಕೆ ಕಾಣಿಕೆ ಸಲ್ಲಿಸುತ್ತದೆ ಎಂಬುದನ್ನು ಸೋದಾಹರಣವಾಗಿ ಚರ್ಚಿಸಲಾಗಿದೆ. ಅನೇಕ ಅಧ್ಯಯನಗಳು ಇದನ್ನು ದೃಢಪಡಿಸಿದ್ದರೂ ಜನರಿಗೆ ಲಿಂಗ ಸಮಾನತೆಯ ಅಭಿವೃದ್ಧಿ ಆಯಾಮದ ಬಗ್ಗೆ ಅನುಮಾನಗಳಿವೆ. ಅದನ್ನು ಕೇವಲ ಒಂದು ಘೋಷಣೆಯಾಗಿ ಮಾತ್ರ ಪರಿಗಣಿಸುವುದು ರೂಢಿಯಿದೆ. ಇದನ್ನು ಇಂದಿಗೂ ಮಹಿಳೆಯರ ಸಂಗತಿಯೆಂದು ಪರಿಭಾವಿಸಿಕೊಳ್ಳುವ ಕ್ರಮವಿದೆ. ಅದೊಂದು ಭಾವುಕತೆಯ ಸಂಗತಿಯೆಂದು ತಳ್ಳಿಹಾಕುವ ಪರಿಯೂ ಕಂಡು ಬರುತ್ತದೆ. ಮಹಿಳೆಯರ ದುಡಿಮೆಯನ್ನು ದುಡಿಮೆಯೆಂದು ಪರಿಗಣಿಸುವ ಬಗ್ಗೆ ಸಮಸ್ಯೆಗಳಿವೆ. ಅವರ ಕಾರ್ಯಕ್ಷೇತ್ರವನ್ನು ಕುಟುಂಬವೆಂದೂ, ಅದು ಖಾಸಗಿ ಜಗತ್ತೆಂದೂ ಹೇಳಲಾಗುತ್ತಿದೆ. ಮಹಿಳೆಯರಿಗೆ ಸಾರ್ವಜನಿಕವೆಂಬ ಜಗತ್ತು ಇಲ್ಲವೆಂಬ ನಂಬಿಕೆಯಿದೆ. ಅವರದ್ದು ಏನಿದ್ದರೂ ಸಂತಾನೋತ್ಪತ್ತಿ ದುಡಿಮೆ ಮಾತ್ರ ಎನ್ನಲಾಗುತ್ತಿದೆ. ಅವರು ಉತ್ಪಾದನಾ ದುಡಿಮೆ ಎನ್ನುವುದನ್ನು ಮಾಡಲು ಸಾಧ್ಯವಿಲ್ಲವೆಂಬ ನಂಬಿಕೆಯನ್ನು ಗಟ್ಟಿಗೊಳಿಸಲಾಗಿದೆ. ಅವರ ಬಹುಪಾಲು ದುಡಿಮೆಯನ್ನು ಸಂಭಾವನಾ-ರಹಿತವೆಂದು ವರ್ಗೀಕರಿಸಲಾಗಿದೆ. ಅವರ ದುಡಿಮೆಗೆ ಮಾರುಕಟ್ಟೆ ಮೌಲ್ಯವಿಲ್ಲವೆಂದು ಹೇಳಲಾಗುತ್ತಿದೆ. ಹೀಗೆ ಅನೂಚಾನವಾಗಿ ಲಿಂಗ ತಾರತಮ್ಯ ಧೋರಣೆಯನ್ನು ಸಮಾಜದಲ್ಲಿ ಗಟ್ಟಿಯಾಗಿ ಬೆಳೆಸಿಕೊಂಡು ಬರಲಾಗಿದೆ. ಈ ಬಗೆಯ ಲಿಂಗ ತಾರತಮ್ಯ ಧೋರಣೆಯಿಂದ ಜ್ಞಾನಶಿಸ್ತುಗಳು ಹೊರತಾಗಿಲ್ಲ. ಇಂತಹ ಧೋರಣೆಯಿಂದಾಗಿ ಲಿಂಗ ಸಮಾನತೆಯು ಅಭಿವೃದ್ಧಿಗೆ ಕಾಣಿಕೆಯನ್ನು ನೀಡಬಲ್ಲದು- ನೀಡುತ್ತದೆ-ನೀಡುತ್ತಿದೆ ಎಂಬುದನ್ನು ಬಹುಪಾಲು ಜನರು ಒಪ್ಪಲು ಸಿದ್ಧರಿಲ್ಲ. ಜ್ಞಾನಶಿಸ್ತುಗಳನ್ನು ಲಿಂಗ ನಿರಪೇಕ್ಷ ನೆಲೆಯಲ್ಲಿ ನಿಲ್ಲಿಸಿ ಸಿದ್ಧಾಂತಗಳನ್ನು ರೂಪಿಸಿಕೊಂಡು ಬರುತ್ತಿವೆ. ಜ್ಞಾನದ ಉತ್ಪಾದನೆಯು ಸಾರ್ವಜನಿಕವಾದ ಕಾರ್ಯ. ಆದರೆ ಸಾರ್ವಜನಿಕ ಆವರಣದಲ್ಲಿ ಸ್ಥಾನವಿಲ್ಲದ ಮಹಿಳೆಯರು ಅಭಿವೃದ್ಧಿಗೆ ಕಾಣಿಕೆ ನೀಡುವುದನ್ನು ಜನರು ಊಹಿಸಿಕೊಳ್ಳಲು ಸಿದ್ಧರಿಲ್ಲ. ಜ್ಞಾನದ ಉತ್ಪಾದನೆ ಸಾರ್ವಜನಿಕ ಜಗತ್ತಿನ ಸಾರ್ವಭೌಮರಾದ ಪುರುಷರ ಕಾರ್ಯವನ್ನಾಗಿ ಪರಿಗಣಿಸಲಾಗಿದೆ.

ಈ ರೀತಿಯಲ್ಲಿ ಲಿಂಗ ತಾರತಮ್ಯ ಧೋರಣೆಯು ವ್ಯಾಪಕವಾಗಿ ಬೆಳೆದುಬಂದಿರುವುದರಿಂದ ಮಹಿಳೆಯರು ಅನೇಕ ಬಗೆಯ ದುಸ್ಥಿತಿಗಳನ್ನು ಅನುಭವಿಸುತ್ತಿದ್ದಾರೆ. ಇಂದು ಅವರು ಹುಟ್ಟುವುದೇ ದುರ್ಲಭವಾಗುತ್ತಿದೆ. ಹುಟ್ಟಿದರೂ ದಷ್ಟಪುಷ್ಟವಾಗಿ ಬೆಳೆದು ಬದುಕುಳಿಯುವುದು ಕಷ್ಟಕರವಾಗಿದೆ. ಬದುಕುಳಿದರೂ ವಯಸ್ಸಿನಲ್ಲಿ ದೊಡ್ಡವರಾಗಿ ಸಮೃದ್ಧ ಜೀವನವನ್ನು ಸಾಗಿಸುವುದು ಸಾಧ್ಯವಿಲ್ಲವಾಗಿದೆ. ಅವರ ಬದುಕನ್ನು ಜೈವಿಕ ನೆಲೆಯಲ್ಲಿ ಪರಿಭಾವಿಸಿಕೊಂಡು ಬರಲಾಗುತ್ತಿದೆ. ಅವರು ಸಾಮಾಜಿಕ ಆವರಣದಿಂದ ವಂಚಿತರಾಗಿದ್ದಾರೆ.

**ಸ್ಮಾರ್ಟ್ ಎಕನಾಮಿಕ್ಸಾಗಿ ಲಿಂಗ ಸಮಾನತೆ**

ಲಿಂಗ ಸಮಾನತೆಯನ್ನು 'ಸ್ಮಾರ್ಟ್ ಎಕಾನಾಮಿಕ್ಸ್' ಎಂದು ಕರೆಯಲಾಗಿದೆ. ಅಭಿವೃದ್ಧಿಯಲ್ಲಿ ಅದರ ಪಾತ್ರವಿದೆ ಎಂಬುದನ್ನು ಇದು ಸೂಚಿಸುತ್ತಿದೆ. ಲಿಂಗ ಸಮಾನತೆಯು ಆರ್ಥಿಕ ಉತ್ಪಾದಕತೆಯನ್ನು ಉತ್ತಮಪಡಿಸುತ್ತದೆ ಎಂದು ವರದಿಯಲ್ಲಿ ದೃಢೀಕರಿಸಲಾಗಿದೆ. ಉತ್ಪಾದಕತೆಯು ಉತ್ತಮಗೊಳ್ಳುವುದರಿಂದ ಅಭಿವೃದ್ಧಿಯ ಗತಿಯು ತ್ವರಿತಗೊಳ್ಳುತ್ತದೆ ಎನ್ನಲಾಗಿದೆ. ಲಿಂಗ ಸಮಾನತೆಯು ಅಭಿವೃದ್ಧಿಯ ಧಾತು ಸದೃಶ ಸಂಗತಿಯೆನ್ನುವುದನ್ನು ವರದಿಯು ತೋರಿಸಿಕೊಟ್ಟಿದೆ. ಲಿಂಗ ತಾರತಮ್ಯವನ್ನು ಎಲ್ಲ ಸಮಾಜಗಳಲ್ಲೂ ಗುರುತಿಸಬಹುದು. ಆದರೆ ಇಪ್ಪತ್ತನೆಯ ಶತಮಾನದಲ್ಲಿ ವಿಶ್ವಾದ್ಯಂತ ಮಹಿಳೆಯರ ಸ್ಥಿತಿಗತಿಯು ಸಾಕಷ್ಟು ಸುಧಾರಿಸಿರುವುದನ್ನು ಅಲ್ಲಗಳೆಯುವುದು ಸಾಧ್ಯವಿಲ್ಲ. ಲಿಂಗ ಸಮಾನತೆಯ ಕಡೆಗೆ ನಾವು ಸಾಗುತ್ತಿದ್ದೇವೆ. ಈ ವಿಷಯದಲ್ಲಿ ಕರ್ನಾಟಕಕ್ಕೆ ಸಂಬಂಧಿಸಿದಂತೆ ಕೆಳಕಂಡ ಸಂಗತಿಗಳನ್ನು ನೋಡಬಹುದು.

೧. ಕರ್ನಾಟಕದಲ್ಲಿ ಮಹಿಳೆಯರ ಸಾಕ್ಷರತೆಯು ೧೯೯೧ರಲ್ಲಿ ಪುರುಷರ ಸಾಕ್ಷರತೆಯ ಶೇಕಡ ೬೫.೯೨ ಅಂಶಗಳಷ್ಟಿದ್ದುದು ೨೦೧೨ರಲ್ಲಿ ಅದು ಶೇಕಡ ೮೨.೨೩ ಅಂಶಗಳಷ್ಟಾಗಿದೆ.

೨. ನಮ್ಮ ರಾಜ್ಯದಲ್ಲಿ ಒಟ್ಟು ಜನಸಂಖ್ಯೆಯ ಲಿಂಗ ಅನುಪಾತವು ೧೯೯೧ರಲ್ಲಿ ೯೬೦ರಷ್ಟಿದ್ದುದು ೨೦೧೧ರಲ್ಲಿ ಅದು ೯೬೮ಕ್ಕೇರಿದೆ.

೩. ಬಾಲಕಿಯರ ಶಾಲಾ ದಾಖಲಾತಿಯು ಸರಿಸುಮಾರಾಗಿ ಬಾಲಕರ ಶಾಲಾ ದಾಖಲಾತಿಗೆ ಸಮನಾಗುವ ಮಟ್ಟಕ್ಕೆ ಏರಿಕೆಯಾಗಿದೆ.

೪. ನಮ್ಮ ರಾಜ್ಯದಲ್ಲಿ ಲಿಂಗ ಸಂಬಂಧಿ ಅಭಿವೃದ್ಧಿ ಸೂಚ್ಯಂಕವು ೧೯೯೧ರಲ್ಲಿ ೦.೫೨೫ರಷ್ಟಿದ್ದುದು ೨೦೦೧ರಲ್ಲಿ ಅದು ೦.೬೩೭ಕ್ಕೇರಿದೆ. ಲಿಂಗ ಸಂಬಂಧಗಳ ಚೌಕಟ್ಟಿನಲ್ಲಿ ಅಭಿವೃದ್ಧಿಯನ್ನು ಮಾಪನ ಮಾಡುವ ವಿಧಾನ ಇದಾಗಿದೆ.

೫. ನಮ್ಮ ರಾಜ್ಯದಲ್ಲಿ ತಾಯಂದಿರ ಮರಣ ಪ್ರಮಾಣ ೨೦೦೪-೨೦೦೬ರ ಅವಧಿಯಲ್ಲಿ ಪ್ರತಿ ಲಕ್ಷ ಜೀವಂತ ಹೆರಿಗೆಗಳಿಗೆ ೨೧೩ರಷ್ಟಿದ್ದರೆ ರಾಷ್ಟ್ರಮಟ್ಟದಲ್ಲಿ ಅದು ೨೫೪ರಷ್ಟಿದೆ.



೬. ಮಹಿಳೆಯರ ದುಡಿಮೆ ಸಹಭಾಗಿತ್ವ ಪ್ರಮಾಣ ೧೯೯೧ರಲ್ಲಿ ಶೇಕಡ ೨೯.೪ರಷ್ಟಿದ್ದರೆ ೨೦೦೧ರಲ್ಲಿ ಅದು ಶೇಕಡ ೩೨ಕ್ಕೇರಿದೆ.

೭. ಸಾಂಸ್ಥಿಕ ಹೆರಿಗೆಗಳ ಪ್ರಮಾಣವು ರಾಷ್ಟ್ರೀಯ ಗ್ರಾಮೀಣ ಆರೋಗ್ಯ ಅಭಿಯಾನ ಆರಂಭಗೊಂಡ ಮೇಲೆ ಸಾಕಷ್ಟು ಉತ್ತಮಗೊಂಡಿದೆ. ಅದು ೨೦೦೧ರಲ್ಲಿ ಶೇಕಡ ೫೦ರಷ್ಟಿದ್ದುದು ಇಂದು ಅದು ಶೇಕಡ ೭೫ಕ್ಕಿಂತ ಅಧಿಕಗೊಂಡಿದೆ.

೮. ನಮ್ಮ ರಾಜ್ಯದಲ್ಲಿ ಒಟ್ಟು ಸಂತಾನೋತ್ಪತ್ತಿ ಪ್ರಮಾಣ (ಒಬ್ಬ ಮಹಿಳೆಯು ತನ್ನ ಸಂತಾನೋತ್ಪತ್ತಿ ವಯೋಮಾನದಲ್ಲಿ ಪಡೆಯುವ ಮಕ್ಕಳ ಸಂಖ್ಯೆ) ೧೯೯೧ರಲ್ಲಿ ೩.೮೭ರಷ್ಟಿದ್ದುದು ಇಂದು ಅದು ೨ಕ್ಕಿಂತ ಕಡಿಮೆಯಾಗಿದೆ.

೯. ಕರ್ನಾಟಕದಲ್ಲಿ ಮಹಿಳೆಯರ ಜೀವನಾಯುಷ್ಯವು ೧೯೯೧ರಲ್ಲಿ ೬೩.೨ ವರ್ಷಗಳಷ್ಟಿದ್ದುದು ಇಂದು ಅದು ೬೮ ವರ್ಷಗಳಷ್ಟಾಗಿದೆ.

೧೦. ನಮ್ಮ ದೇಶದ ಪಂಚಾಯತ್ ರಾಜ್ ಸಂಸ್ಥೆಗಳಲ್ಲಿ ಮಹಿಳೆಯರಿಗೆ ಶೇಕಡ ೩೩ರಷ್ಟು (ನಮ್ಮ ರಾಜ್ಯದಲ್ಲಿ ಶೇಕಡ ೫೦ರಷ್ಟು) ಚುನಾಯಿತ ಸ್ಥಾನಗಳನ್ನು ಮೀಸಲಿಡಲಾಗಿದೆ. ಲಿಂಗ ಸಮಾನತೆಯ ದೃಷ್ಟಿಯಿಂದ ಇದೊಂದು ಮಹತ್ವದ ಕ್ರಮವಾಗಿದೆ.

**ಲಿಂಗ ಅಸಮಾನತೆಯ ಆತಂಕಕಾರಿ ಸಂಗತಿಗಳು**

ಇವೆಲ್ಲವೂ ಅಭಿನಂದನೆಗೆ ಅರ್ಹವಾದ ಸಂಗತಿಗಳು. ಆದರೆ ಲಿಂಗ ಅಸಮಾನತೆಯು ಅನೇಕ ಕ್ಷೇತ್ರಗಳಲ್ಲಿ ತೀವ್ರಗತಿಯಲ್ಲಿ ಮುಂದುವರಿಯುತ್ತಿರುವುದನ್ನು ಗುರುತಿಸುವುದು ಕಷ್ಟವಾಗುವುದಿಲ್ಲ.

೧. ನಮ್ಮ ರಾಜ್ಯದಲ್ಲಿ ೦-೬ ವಯೋಮಾನದ ಮಕ್ಕಳ ಲಿಂಗ ಅನುಪಾತವು ೧೯೯೧ರಲ್ಲಿ ೯೬೦ರಷ್ಟಿದ್ದುದು ೨೦೦೧ರಲ್ಲಿ ೯೪೫ಕ್ಕೆ ಮತ್ತು ೨೦೧೧ರಲ್ಲಿ ಮತ್ತೆ ೯೪೩ಕ್ಕಿಳಿದಿದೆ. ಇದು ಆತಂಕಕಾರಿ ಸಂಗತಿಯಾಗಿದೆ ಮತ್ತು ಲಿಂಗ ಅಸಮಾನತೆಯ ಸೂಚಿಯಾಗಿದೆ.

೨. ಡಿಎಲ್‌ಎಚ್ ಸಮೀಕ್ಷೆ ಪ್ರಕಾರ ೨೦೦೭-೦೮ರಲ್ಲಿ ಕರ್ನಾಟಕದ ಐದು ಜಿಲ್ಲೆಗಳಲ್ಲಿ ೧೮ ವರ್ಷಕ್ಕೆ ಮೊದಲೇ ಮದುವೆಯಾಗುವ ಹೆಣ್ಣುಮಕ್ಕಳ ಪ್ರಮಾಣ ಶೇಕಡ ೪೦ಕ್ಕಿಂತ ಅಧಿಕವಾಗಿದೆ.

೩. ಶಿಶು ಮರಣ ಪ್ರಮಾಣದಲ್ಲಿ ಲಿಂಗ ತಾರತಮ್ಯವಿದೆ. ಗಂಡು ಶಿಶು ಮರಣ ಪ್ರಮಾಣ ೨೦೦೮ರಲ್ಲಿ ೪೪ರಷ್ಟಿದ್ದರೆ ಹೆಣ್ಣು ಶಿಶು ಮರಣ ಪ್ರಮಾಣ ೪೬ರಷ್ಟಿದೆ. ಇದು ಮತ್ತೊಂದು ಲಿಂಗ ತಾರತಮ್ಯದ ಸೂಚಿಯಾಗಿದೆ.

೪. ನಮ್ಮ ರಾಜ್ಯದ ಗ್ರಾಮೀಣ ಪ್ರದೇಶದಲ್ಲಿ ಮಹಿಳೆಯರಲ್ಲಿ ಅಪೌಷ್ಟಿಕತೆಯ ಪ್ರಮಾಣ ಶೇಕಡ ೪೫ಕ್ಕಿಂತ ಅಧಿಕವಿದೆ ಎಂದು ಸಮೀಕ್ಷೆಗಳು ಹೇಳುತ್ತಿವೆ. (ನಿರ್ದಿಷ್ಟ ಪಡಿಸಿದ ವಯೋಮಾನಕ್ಕೆ ತಕ್ಕ ತೂಕ ಆಧರಿತ ಪೌಷ್ಟಿಕತೆಯ ಮಾಪನ). ಮಕ್ಕಳಲ್ಲೂ ಅಪೌಷ್ಟಿಕತೆಯ ಪ್ರಮಾಣ ಅಧಿಕವಾಗಿದೆ.

೫. ಉದ್ಯೋಗ ಕ್ಷೇತ್ರದಲ್ಲಿ ಲಿಂಗ ಸಂಬಂಧಿ ಶ್ರಮ ವಿಭಜನೆಯನ್ನು ಆಧರಿಸಿದ ಲಿಂಗ ತಾರತಮ್ಯವು ಮುಂದುವರಿಯುತ್ತಿದೆ.

೬. ಮಹಿಳೆಯರ ಅಭಿವೃದ್ಧಿಯನ್ನು ಸರ್ಕಾರವು ಅನುಕಂಪದ ನೆಲೆಯಲ್ಲಿ ಪರಿಭಾವಿಸಿಕೊಂಡಿದೆಯೇ ವಿನಾ ಅದನ್ನು ಇತ್ಯಾತ್ಮಕ ಸ್ವಾತಂತ್ರ್ಯದ ನೆಲೆಯಲ್ಲಿ ಪರಿಭಾವಿಸಿಕೊಂಡಿಲ್ಲ. ಇದರಿಂದಾಗಿ ಅನೂಚಾನವಾಗಿ ಹರಿದುಕೊಂಡು ಬರುತ್ತಿರುವ ಲಿಂಗ ತಾರತಮ್ಯ ಧೋರಣೆಯು ಸಮಾಜದಲ್ಲಿ ಮುಂದುವರಿಯುತ್ತಿದೆ.

೭. ಲಿಂಗ ಸಮಾನತೆಯ ವಿಷಯವನ್ನು ಕೇವಲ ಮಹಿಳೆಯರ ಸಮಸ್ಯೆಯೆಂದು ಪರಿಗಣಿಸುತ್ತಾ ಬರಲಾಗಿದೆಯೇ ವಿನಾ ಅದು ಸಾಮಾಜಿಕವಾದ ಮೌಲ್ಯವೆಂದು ಮತ್ತು ಅದು ಪುರುಷರಿಗೂ ಸಂಬಂಧಿಸಿದ ಸಂಗತಿಯೆಂದು ಪರಿಗಣಿಸುವ ಕ್ರಮ ಇಂದಿಗೂ ಕಂಡುಬರುವುದಿಲ್ಲ. ಈ ಕಾರಣದಿಂದ ಲಿಂಗ ಅಸಮಾನತೆಯು ಕಡಿಮೆಯಾಗುವುದಕ್ಕೆ ಪ್ರತಿಯಾಗಿ ಊರ್ಜಿತಗೊಳ್ಳುತ್ತಾ ನಡೆದಿದೆ.

೮. ಲಿಂಗ ತಾರತಮ್ಯ ಧೋರಣೆಯು ಸಮಾಜದಲ್ಲಿ ಮುಂದುವರಿಯುತ್ತಿರುವುದರ ಸೂಚನೆಯನ್ನು ನಮ್ಮ ಪಂಚಾಯಿತಿಗಳಲ್ಲಿ ಆಯ್ಕೆಯಾದ ಮಹಿಳಾ ಸದಸ್ಯರ ಪರವಾಗಿ ಅದರ ಸಭೆಗಳಲ್ಲಿ ಅವರ ಕಡೆಯ ಪುರುಷರು (ಸಹೋದರ/ಗಂಡ/ಮಗ) ಭಾಗವಹಿಸುತ್ತಿರುವ ಕ್ರಮದಲ್ಲಿ ಕಾಣಬಹುದು. ಹೀಗೆ ತಮ್ಮಕಡೆಯವರನ್ನು ಕಳುಹಿಸುವುದು 'ನಮ್ಮ ಹಕ್ಕು' ಎಂದು ಮಹಿಳೆಯರು ಒತ್ತಾಯಿಸುವುದರಲ್ಲಿ ಲಿಂಗ ತಾರತಮ್ಯ ಧೋರಣೆಯು ಪುರುಷರಿಗೆ ಮಾತ್ರ ಅನ್ವಯವಾಗುವ ಸಂಗತಿಯೇನಲ್ಲ ಎಂಬುದು ತಿಳಿಯುತ್ತದೆ. ಆದರೆ ಪಂಚಾಯಿತಿಗಳ ಚುನಾಯಿತ ಮಹಿಳಾ ಸದಸ್ಯರಲ್ಲಿ ಕಂಡುಬರುತ್ತಿರುವ ಲಿಂಗ ತಾರತಮ್ಯ ಧೋರಣೆಗೆ ಮಹಿಳೆಯರನ್ನು ದೂರುವುದರಲ್ಲಿ ಅರ್ಥವಿಲ್ಲ. ಏಕೆಂದರೆ ಸಮಾಜದಲ್ಲಿ ಇಂತಹ ಧೋರಣೆಯನ್ನು ಮಹಿಳೆಯರನ್ನು ಸೇರಿಸಿಕೊಂಡು ಎಲ್ಲರೂ ಮೈಗೂಡಿಸಿಕೊಳ್ಳುವಂತಹ ಸಾಮಾಜೀಕರಣ ವ್ಯವಸ್ಥೆಯನ್ನು ರೂಪಿಸಲಾಗಿದೆ.




ಅದೇ ರೀತಿಯಲ್ಲಿ ಕೆಲವು ಮಹಿಳಾ ರಾಜಕೀಯ ಮುಖಂಡರು ಮಹಿಳೆಯರಿಗೆ ಸಂಬಂಧಿಸಿದ ಸಾಂಪ್ರದಾಯಿಕ ಸಂಗತಿಗಳನ್ನು ತಮ್ಮ ವೈಯಕ್ತಿಕ ಉದ್ದೇಶಗಳಿಗೆ ದುರುಪಯೋಗಪಡಿಸಿಕೊಳ್ಳುತ್ತಿರುವುದನ್ನೂ ಕಾಣಬಹುದು (ತನ್ನ ವಿರೋಧಿಯೊಬ್ಬರು ಕೇವಲ ವಿದೇಶಿ ಮೂಲದವರು ಎಂಬ ಕಾರಣಕ್ಕೆ ಪ್ರಧಾನಮಂತ್ರಿಯಾದರೆ ತಾನು ತನ್ನ ತಲೆಯನ್ನು ಬೋಳಿಸಿಕೊಂಡು, ಬಿಳಿ ಸೀರೆಯುಟ್ಟುಕೊಂಡು, ವಿಧವೆಯ ರೀತಿಯಲ್ಲಿ ಬಾಳುತ್ತಾ ಪ್ರತಿಭಟನೆ ಮಾಡುತ್ತೇನೆಂದು ಒಬ್ಬ ಮಹಿಳಾ ರಾಜಕಾರಿಣಿಯೊಬ್ಬರು ಮಾತನಾಡಿದ್ದನ್ನು ಇಲ್ಲಿ ನೆನಪಿಸಿಕೊಳ್ಳಬಹುದು).

೯. ಲಿಂಗ ಸಮಾನತೆಯ ಸಂಗತಿಯನ್ನು ನಾವು ಇದುವರೆವಿಗೂ ಸಾಕ್ಷರತೆ, ಶಿಕ್ಷಣ, ಆರೋಗ್ಯ, ಉದ್ಯೋಗ ಮುಂತಾದ ಕೆಲವು ಸಂಗತಿಗಳಿಗೆ ಸೀಮಿತಗೊಳಿಸಿಕೊಂಡು ನೀತಿಗಳನ್ನು ಮತ್ತು ಕಾರ್ಯಕ್ರಮಗಳನ್ನೂ ರೂಪಿಸಿಕೊಂಡು ಬರುತ್ತಿದ್ದೇವೆ. ಅದರ ಆರ್ಥಿಕ ಆಯಾಮದ ಬಗ್ಗೆ ಹೆಚ್ಚು ಗಮನ ನೀಡುತ್ತಿಲ್ಲ. ಇದರಿಂದಾಗಿ ಲಿಂಗ ಸಮಾನತೆಯನ್ನು ಸಾಧಿಸಿಕೊಳ್ಳುವುದು ಸಾಧ್ಯವಾಗುತ್ತಿಲ್ಲ. ಆಸ್ತಿಯ ಹಕ್ಕಿನಿಂದ ಮಹಿಳೆಯರು ವಂಚಿತರಾಗಿದ್ದಾರೆ. ಕಾನೂನಿನಲ್ಲಿ ಆಸ್ತಿಯ ಹಕ್ಕಿಗೆ ಅವಕಾಶವಿದ್ದರೂ ಅದನ್ನು ಮಹಿಳೆಯರು ಅನುಭವಿಸುವ ಸ್ಥಿತಿಯಲ್ಲಿಲ್ಲ. ಸಮಾಜ ಅದಕ್ಕೆ ಅವಕಾಶ ನೀಡುತ್ತಿಲ್ಲ. ಈ ಸಂಗತಿಗಳು ಲಿಂಗ ಸಮಾನತೆಗೆ ಸಂಬಂಧಿಸಿದ ಚರ್ಚೆಗಳಲ್ಲಿ ಪ್ರಮುಖ ವಿಷಯವಾಗುತ್ತಿಲ್ಲ.

೧೦. ಅನಗತ್ಯವಾಗಿ ಲಿಂಗ ಸಮಾನತೆ, ಮಹಿಳಾ ಸ್ವಾತಂತ್ರ್ಯ, ಸ್ತ್ರೀವಾದ ಮುಂತಾದ ಸಂಗತಿಗಳು 'ಪಶ್ಚಿಮದವು' ಎಂದು ಅವುಗಳನ್ನು ಹೀಗಳೆಯುವ ಪ್ರವೃತ್ತಿಯು ನಮ್ಮಲ್ಲಿ ಕಂಡುಬರುತ್ತದೆ. ಆದರೆ ನಮ್ಮಲ್ಲಿ ಲಿಂಗ ಸಮಾನತೆ ಕುರಿತಂತೆ, ಮಹಿಳೆಯರ ಸ್ವಾತಂತ್ರ್ಯದ ಬಗ್ಗೆ, ಅವರಿಗೆ ಗೌರವ ನೀಡುವುದರ ಬಗ್ಗೆ ಸಾವಿರಾರು ವರ್ಷಗಳಿಂದ ನಮ್ಮ ಪೂರ್ವಜರು ಚರ್ಚೆ ಮಾಡುತ್ತಾ, ಒತ್ತಾಯಿಸುತ್ತಾ ಬಂದಿರುವುದು ಕಂಡುಬರುತ್ತದೆ. ಆಗ ಇಂದು ಯಾವುದನ್ನು 'ಪಶ್ಚಿಮ'ವೆಂದು ಕರೆಯಲಾಗುತ್ತಿದೆಯೋ ಅದು ಇರಲಿಲ್ಲ. ಹಾಗಾದರೆ ಯಾವುದು ಪಶ್ಚಿಮ ಯಾವುದು ಪೂರ್ವ ? ಇದೆಲ್ಲ ಲಿಂಗ ತಾರತಮ್ಯ ಧೋರಣೆಯನ್ನು ಊರ್ಜಿತಗೊಳಿಸಿಕೊಂಡು ಹೋಗುವ ಹುನ್ನಾರವಲ್ಲದೆ ಮತ್ತೇನೂ ಅಲ್ಲ.

**ಅಭಿವೃದ್ಧಿಗೆ ಲಿಂಗ ಸಮಾನತೆಯ ಕಾಣಿಕೆ**

'ಲಿಂಗ ಸಮಾನತೆ ಮತ್ತು ಅಭಿವೃದ್ಧಿ' ಎಂಬ ಶೀರ್ಷಿಕೆಯ ವಿಶ್ವಬ್ಯಾಂಕಿನ ೨೦೧೨ರ ವಿಶ್ವ ಅಭಿವೃದ್ಧಿ ವರದಿಯಲ್ಲಿ ಲಿಂಗ ಸಮಾನತೆಯು ಅಭಿವೃದ್ಧಿಯಲ್ಲಿ ಹೇಗೆ ಪಾತ್ರ ನಿರ್ವಹಿಸುತ್ತದೆ ಎಂಬುದನ್ನು ವಿವರವಾಗಿ ಚರ್ಚಿಸಲಾಗಿದೆ. ಅಭಿವೃದ್ಧಿಯನ್ನು ಸಾಧಿಸಿಕೊಳ್ಳುವ ದಿಶೆಯಲ್ಲಿ ಲಿಂಗ ಸಮಾನತೆಯನ್ನು ನಿರ್ಲಕ್ಷಿಸುವುದು ಸಲ್ಲ ಎಂಬುದು ಸದರಿ ವರದಿಯ ಮುಖ್ಯ ಸಂದೇಶವಾಗಿದೆ.

**೧. ಉತ್ಪಾದಕತೆಯಲ್ಲಿ ಹೆಚ್ಚಳ**

ವಿಶ್ವದಲ್ಲಿನ ಒಟ್ಟು ದುಡಿಮೆಗಾರರಲ್ಲಿ ಶೇಕಡ

೪೦ರಷ್ಟು ಮಹಿಳಾ ದುಡಿಮೆಗಾರರಿದ್ದಾರೆ. ನಮ್ಮ ರಾಜ್ಯದ ಒಟ್ಟು ಭೂರಹಿತ ಕೃಷಿ ದುಡಿಮೆಗಾರರಲ್ಲಿ ಮಹಿಳೆಯರ ಪ್ರಮಾಣ ೨೦೦೧ರಲ್ಲಿ ಶೇಕಡ ೪೫.೪ರಷ್ಟಿತ್ತು. ಈ ಎರಡೂ ಸಂದರ್ಭದಲ್ಲಿ ಮಹಿಳೆಯರ ಸಂಭಾವನಾ-ರಹಿತ ದುಡಿಮೆ ಮತ್ತು ಸಂತಾನೋತ್ಪತ್ತಿ ದುಡಿಮೆಗಳನ್ನು ಪರಿಗಣಿಸಿಲ್ಲ. ಇವೆರಡೂ ದುಡಿಮೆಗಳನ್ನು ಪರಿಗಣಿಸಿದರೆ ವಿಶ್ವದ ಒಟ್ಟು ದುಡಿಮೆಗಾರರಲ್ಲಿ ಮಹಿಳಾ ದುಡಿಮೆಗಾರರ ಪ್ರಮಾಣ ಶೇಕಡ ೫೦ಕ್ಕಿಂತ ಅಧಿಕವಾಗುತ್ತದೆ. ಇವರೆಲ್ಲರಿಗೂ ಪುರುಷರಿಗೆ ದೊರೆಯುವಂತೆ ಸಮಾನ ಅವಕಾಶಗಳು ದೊರೆತ ಪಕ್ಷದಲ್ಲಿ ಖಂಡಿತವಾಗಿ ಆರ್ಥಿಕತೆಯಲ್ಲಿ ಉತ್ಪಾದಕತೆಯ ಪ್ರಮಾಣ ಉತ್ತಮಗೊಳ್ಳುತ್ತದೆ.

**೨. ಮುಂದಿನ ತಲೆಮಾರಿಗೆ ಹೆಚ್ಚು ಅನುಕೂಲಗಳು**

ಮಹಿಳೆಯರಿಗೆ ಕುಟುಂಬದ ಸಂಪನ್ಮೂಲಗಳ ನಿರ್ವಹಣೆಯ ಅಧಿಕಾರ ಮತ್ತು ಅವಕಾಶಗಳನ್ನು ಹೆಚ್ಚು ನೀಡಿದಲ್ಲಿ ಅಲ್ಲಿನ ಆಯವ್ಯಯದ ವಿತರಣೆಯ ಸ್ವರೂಪವು ತೀವ್ರ ಬದಲಾಗುತ್ತದೆ. ಈ ಬದಲಾವಣೆಗಳು ಪ್ರಧಾನವಾಗಿ ಮಕ್ಕಳಿಗೆ ಹೆಚ್ಚು ಅನುಕೂಲಕರವಾಗಿ ಇರುತ್ತವೆ. ಮಹಿಳೆಯರ ಶಿಕ್ಷಣ ಮತ್ತು ಆರೋಗ್ಯ ಉತ್ತಮಗೊಂಡರೆ ಅಲ್ಲಿ ಮಕ್ಕಳ ಸ್ಥಿತಿಗತಿಯು ಉತ್ತಮ ಗೊಳ್ಳುತ್ತದೆ ಎಂಬ ಸಂಗತಿಯನ್ನು ವರದಿಯು ಸ್ಪಷ್ಟಪಡಿಸಿದೆ. ಈ ಪ್ರಕ್ರಿಯೆಯ ಮೂಲಕ ಮುಂದಿನ ತಲೆಮಾರಿಗೆ ಹೆಚ್ಚು ಅನುಕೂಲಗಳು ಪ್ರಾಪ್ತವಾಗುತ್ತವೆ. ಲಿಂಗ ಸಮಾನತೆಯ ಬಗ್ಗೆ ಪ್ರಸ್ತುತ ತಲೆಮಾರಿನಲ್ಲಿ ಕ್ರಮ ಗಳನ್ನು ತೆಗೆದುಕೊಂಡರೆ ಅದು ಮುಂದಿನ ತಲೆಮಾರಿಗೆ ಅನುಕೂಲಗಳನ್ನು ಒದಗಿಸುತ್ತದೆ. ಲಿಂಗ ಸಮಾನತೆಯ ಅಂತರ ತಲಾ ಮೂರು ಪರಿಣಾಮಗಳನ್ನು ಹೊಂದಿದೆ.

**೩. ಜನರನ್ನು ಒಳಗೊಳ್ಳುವ ಅಭಿವೃದ್ಧಿ**

ಸಾಮಾಜಿಕ ಬದಲಾವಣೆಯಲ್ಲಿ ಲಿಂಗ ಸಮಾನತೆಯ ಪಾತ್ರವು ಆಯಕಟ್ಟಿನದಾಗಿದೆ. ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ಕ್ಷೇತ್ರಗಳಲ್ಲಿ ಮಹಿಳೆಯರು ಸಶಕ್ತ ರಾಗುವಂತೆ ಮತ್ತು ಹೆಚ್ಚು ಕ್ರಿಯಾಶೀಲರಾಗುವಂತೆ ಮಾಡುವುದರಿಂದ ಅಲ್ಲಿನ ಸಂಸ್ಥೆಗಳು ಹೆಚ್ಚು ಪ್ರಾತಿನಿಧಿಕ ವಾಗುತ್ತವೆ ಮತ್ತು ಸಮಾಜವು 'ಜನರನ್ನು ಒಳಗೊಳ್ಳುವ' ಸ್ವರೂಪದ್ದಾಗುತ್ತದೆ. ನಮ್ಮ ಪಂಚಾಯತ್ ರಾಜ್ ವ್ಯವಸ್ಥೆಯಲ್ಲಿ ಮಹಿಳೆಯರ ಪ್ರಾತಿನಿಧ್ಯಕ್ಕೆ ಹೆಚ್ಚಿನ ಅವಕಾಶಗಳನ್ನು ನೀಡಿದ್ದರ ಪರಿಣಾಮವಾಗಿ ಇಂದು ನಮ್ಮ ಗ್ರಾಮೀಣ ಪ್ರದೇಶದಲ್ಲಿ ಕುಡಿಯುವ ನೀರಿನ ಬಗ್ಗೆ, ನೈರ್ಮಲ್ಯದ ಬಗ್ಗೆ ಮತ್ತು ಆರೋಗ್ಯದ ಬಗ್ಗೆ ಹೆಚ್ಚು ಹೆಚ್ಚು ರಾಜಕೀಯ ಒತ್ತಡ ನಿರ್ಮಾಣಗೊಳ್ಳುತ್ತಿದೆ.

ಹೀಗೆ ಲಿಂಗ ಸಮಾನತೆಯು ಅಭಿವೃದ್ಧಿಯಲ್ಲಿ ನಿರ್ಣಾಯಕ ಪಾತ್ರವನ್ನು ನಿರ್ವಹಿಸುತ್ತದೆ. ವರಮಾನದ ವರ್ಧನೆಯ ಆಧಾರದ ಮೇಲೆ ಇಂದು ಅಭಿವೃದ್ಧಿಯನ್ನು ಮಾಪನ ಮಾಡಲಾಗುತ್ತಿದೆ. ನಮ್ಮ ದೇಶದಲ್ಲಿ ಅದನ್ನು ಜಿಡಿಪಿ (ಗ್ರಾಸ್ ಡೊಮೆಸ್ಟಿಕ್ ಪ್ರಾಡಕ್ಟ್) ಮೂಲಕ ಮತ್ತು ರಾಜ್ಯಮಟ್ಟದಲ್ಲಿ ಅದನ್ನು ಎಸ್‌ಡಿಪಿ (ಸ್ಟೇಟ್ ಡೊಮೆಸ್ಟಿಕ್ ಪ್ರಾಡಕ್ಟ್) ಮೂಲಕ ಅಳೆಯಲಾಗುತ್ತದೆ. ಆದರೆ ವರಮಾನದಲ್ಲಿನ ಬೆಳವಣಿಗೆ ಪ್ರಮಾಣವು ಜನರು ಸುಖದಿಂದ ಬದುಕನ್ನು ನಡೆಸುತ್ತಿದ್ದಾರೆಯೇ ಅಥವಾ ಜನರ ಬದುಕು ಸಮೃದ್ಧವಾಗಿದೆಯೇ ಎಂಬುದರ ಬಗ್ಗೆ ಯಾವ ಸೂಚನೆಯನ್ನೂ ನೀಡುವುದಿಲ್ಲ. ಏಕೆಂದರೆ ಜಿಡಿಪಿಯು ವರಮಾನವನ್ನು ಬಿಟ್ಟರೆ ಜನರ ಸುಖಮಯ ಬದುಕಿನ ದೃಷ್ಟಿಯಿಂದ ಮುಖ್ಯವಾದ ಇತರೆ ಸಂಗತಿಗಳಾದ ಸಾಕ್ಷರತೆ, ಶಿಕ್ಷಣ, ಆರೋಗ್ಯ, ಲಿಂಗ ಸಮಾನತೆ, ಸ್ವಾತಂತ್ರ್ಯ, ಆಹಾರ ಭದ್ರತೆ, ಘನತೆಯಿಂದ ಕೂಡಿದ ಬದುಕು ಮುಂತಾದ ಸಂಗತಿಗಳನ್ನು ಅದು ಒಳಗೊಳ್ಳುವುದಿಲ್ಲ.

**ಕೋಷ್ಟಕ-೧**

**'ವರಮಾನವೇ ಜನರ ಬದುಕಿನ ಮೊತ್ತವಲ್ಲ' ಎಂಬುದನ್ನು ಸೂಚಿಸುವ ಕೆಲವು ಸೂಚಿಗಳು : ಕರ್ನಾಟಕ ಜಿಲ್ಲೆಗಳು**

| ಅಭಿವೃದ್ಧಿ ಸೂಚಿಗಳು | ಬಳ್ಳಾರಿ | ವಿಜಾಪುರ | ಉಡುಪಿ | ಹಾಸನ |
|---|---|---|---|---|
| ನಿವ್ವಳ ಆಂತರಿಕ ತಲಾ ಉತ್ಪನ್ನ (೨೦೦೮-೨೦೦೯ : ಚಾಲ್ತಿ ಬೆಲೆಗಳಲ್ಲಿ) | ರೂ. ೫೨೧೬೮ | ರೂ. ೨೯೩೦೭ | ರೂ. ೫೩೮೧೭ | ರೂ. ೨೯೮೯೧ |
| ಒಟ್ಟು ಮಹಿಳೆಯರ ಸಾಕ್ಷರತಾ ಪ್ರಮಾಣ ( ೨೦೧೧) | ಶೇ. ೫೮.೨೮ | ಶೇ. ೫೬.೫೪ | ಶೇ. ೮೧.೪೧ | ಶೇ. ೬೮.೩೦ |
| ಒಟ್ಟು ಜನಸಂಖ್ಯೆಯ ಲಿಂಗ ಅನುಪಾತ (೨೦೧೧) | ೯೭೮ | ೯೫೪ | ೧೦೯೩ | ೧೦೦೫ |
| ಜನಸಂಖ್ಯೆಯ ವಾರ್ಷಿಕ ಬೆಳವಣಿಗೆ ಪ್ರಮಾಣ (೨೦೦೧-೨೦೧೧) | ಶೇ. ೨.೪೯ | ಶೇ. ೨.೦೪ | ಶೇ. ೦.೫೯ | ೦.೯೭ |
| ಮಕ್ಕಳ (೦-೬ ವಯೋಮಾನದ) ಲಿಂಗ ಅನುಪಾತ (೨೦೧೧) | ೯೫೪ | ೯೩೦ | ೯೫೫ | ೯೬೪ |
| ಲಿಂಗ ಸಂಬಂಧಿ ಸಾಕ್ಷರತಾ ಅಂತರ : ಶೇಕಡ ಅಂಶಗಳಲ್ಲಿ. (೨೦೧೧) | ಶೇ. ೧೮.೯೬ | ಶೇ. ೨೦.೮೭ | ಶೇ. ೧೦.೨೮ | ಶೇ. ೧೫.೨೫ |
| ಸಾಂಸ್ಥಿಕ ಹೆರಿಗೆಗಳ ಪ್ರಮಾಣ (೨೦೦೭-೨೦೦೮) | ಶೇ. ೪೫.೪೦ | ಶೇ. ೫೯.೮೦ | ಶೇ. ೯೧.೫೦ | ಶೇ. ೮೦.೩೦ |
| ಹದಿನೆಂಟು ವರ್ಷಗಳು ತುಂಬುವುದರೊಳಗೆ ಮದುವೆಯಾಗುವ ಹೆಣ್ಣು ಮಕ್ಕಳ ಪ್ರಮಾಣ (೨೦೦೭-೨೦೦೮) | ಶೇ. ೪೫.೪ | ಶೇ. ೪೩.೧ | ಶೇ. ೪.೫೦ | ಶೇ. ೩.೨೦ |
| ಒಟ್ಟು ಸಂತಾನೋತ್ಪತ್ತಿ ಪ್ರಮಾಣ (೨೦೦೧) | ೩.೧ | ೩.೦ | ೧.೫ | ೧.೯೦ |
| ಒಟ್ಟು ಸಾಗುವಳಿಗಾರರಲ್ಲಿ ಮಹಿಳಾ ಸಾಗುವಳಿಗಾರರ ಪ್ರಮಾಣ (೨೦೦೧) | ಶೇ. ೨೯.೪೭ | ಶೇ. ೨೧.೩೯ | ಶೇ. ೪೫.೩೭ | ಶೇ. ೩೯.೦೮ |

**ಮೂಲ :** ಕರ್ನಾಟಕ ಸರ್ಕಾರ. ೨೦೦೬. ಕರ್ನಾಟಕ ಮಾನವ ಅಭಿವೃದ್ಧಿ ವರದಿ-೨೦೦೫. ಯೋಜನಾ ಇಲಾಖೆ, ಬೆಂಗಳೂರು.

ಕರ್ನಾಟಕ ಸರ್ಕಾರ. ೨೦೧೧. **ಆರ್ಥಿಕ ಸಮೀಕ್ಷೆ – ೨೦೧೦-೨೦೧೧.** ಯೋಜನಾ ಇಲಾಖೆ, ಬೆಂಗಳೂರು.

ಸೆನ್ಸಸ್ ಆಫ್ ಇಂಡಿಯಾ ೨೦೧೧. **ಪ್ರಾವಿಷನಲ್ ಪಾಪ್ಯುಲೇಶನ್ ಟೋಟಲ್ಸ್.** ಕರ್ನಾಟಕ. ಸೀರೀಸ್ ೩೦. ಡೈರೆಕ್ಟೊರೇಟ್ ಆಫ್ ಸೆನ್ಸಸ್ ಆಪರೇಶನ್ಸ್.

ವರಮಾನ ಏರಿಕೆಯಾದರೆ ಅಲ್ಲಿ ಲಿಂಗ ಸಮಾನತೆ ಸಾಧ್ಯವಾಗುತ್ತದೆ ಎಂದು ಹೇಳಲು ಬರುವುದಿಲ್ಲ. ಕೋಷ್ಟಕ-೧ರಲ್ಲಿ ಕರ್ನಾಟಕದ ಕೆಲವು ಜಿಲ್ಲೆಗಳ ಉದಾಹರಣೆ ಮೂಲಕ 'ವರಮಾನವೇ ಜನರ ಬದುಕಿನ ಮೊತ್ತವಲ್ಲ'(ಇದು ೧೯೯೦ರಲ್ಲಿ ಮೆಹಬೂಬ್ ಉಲ್ ಹಕ್ ಯುಎನ್‌ಡಿಪಿಗೆ ಸಿದ್ಧಪಡಿಸಿದ ಪ್ರಥಮ ಮಾನವ ಅಭಿವೃದ್ಧಿ ವರದಿಯಲ್ಲಿ ಪ್ರತಿಪಾದಿಸಿದ ಘೋಷಣೆಯಾಗಿದೆ) ಎಂಬುದನ್ನು ತೋರಿಸಲು ಪ್ರಯತ್ನಿಸಲಾಗಿದೆ. ಅನೇಕ ದೃಷ್ಟಿಗಳಿಂದ ಕೋಷ್ಟಕ-೧ ಕುತೂಹಲಕಾರಿಯಾಗಿದೆ. ಇಲ್ಲಿ ಬಳ್ಳಾರಿ ಮತ್ತು ಉಡುಪಿ ಜಿಲ್ಲೆಗಳು ವರಮಾನದ ದೃಷ್ಟಿಯಿಂದ ಸರಿಸುಮಾರು ಸಮನಾಗಿದ್ದರೆ ವಿಜಾಪುರ ಮತ್ತು ಹಾಸನ ಜಿಲ್ಲೆಗಳು ಅದರಲ್ಲಿ ಒಟ್ಟಾರೆ ಸಮಾನ ಸ್ಥಿತಿಯಲ್ಲಿವೆ. ಬಳ್ಳಾರಿ ಜಿಲ್ಲೆಯ ನಿವ್ವಳ ಆಂತರಿಕ ತಲಾ ಉತ್ಪನ್ನವು ೨೦೦೮-೨೦೦೯ರಲ್ಲಿ ಉಡುಪಿ ಜಿಲ್ಲೆಯ ನಿವ್ವಳ ಆಂತರಿಕ ತಲಾ ಉತ್ಪನ್ನದ ಶೇಕಡ ೯೬.೯೪ರಷ್ಟಿದ್ದರೆ ವಿಜಾಪುರ ಜಿಲ್ಲೆಯ ನಿವ್ವಳ ಆಂತರಿಕ ತಲಾ ಉತ್ಪನ್ನವು ಹಾಸನ ಜಿಲ್ಲೆಯ ನಿವ್ವಳ ಆಂತರಿಕ ತಲಾ ಉತ್ಪನ್ನದ ಶೇಕಡ ೯೮.೦೫ರಷ್ಟಿದೆ. ವರಮಾನದ ದೃಷ್ಟಿಯಿಂದ ಬಳ್ಳಾರಿ ಮತ್ತು ವಿಜಾಪುರ ಜಿಲ್ಲೆಗಳ ಸ್ಥಿತಿಯು ಕ್ರಮವಾಗಿ ಉಡುಪಿ ಮತ್ತು ಹಾಸನ ಜಿಲ್ಲೆಗಳಿಗೆ ಸಮನಾಗಿದೆ. ಆದರೆ ಲಿಂಗ ಸಮಾನತೆ ಮತ್ತು ಮಾನವ ಅಭಿವೃದ್ಧಿ ಸೂಚಿಗಳ ದೃಷ್ಟಿಯಿಂದ ಅವು ತೀವ್ರ ದುಸ್ಥಿತಿಯನ್ನು ಅನುಭವಿಸುತ್ತಿವೆ. ವರಮಾನವು ಉತ್ತಮವಾಗಿದ್ದರೆ ಜನರ ಬದುಕು ಉತ್ತಮವಾಗಿರುತ್ತದೆ ಎಂಬುದು ಇಲ್ಲಿ ಹುಸಿಯಾಗಿದೆ. ಬಳ್ಳಾರಿ ಮತ್ತು ವಿಜಾಪುರ ಜಿಲ್ಲೆಗಳು ವರಮಾನದಲ್ಲಿ ಉತ್ತಮ ಸ್ಥಾನದಲ್ಲಿವೆ. ಆದರೆ ಅಲ್ಲಿ ಜನರ, ಅದರಲ್ಲೂ ಮಹಿಳೆಯರ ಬದುಕು ಸಮೃದ್ಧವಾಗಿಲ್ಲ. ಲಿಂಗ ಸಮಾನತೆಯ ಮತ್ತು ಮಾನವ ಅಭಿವೃದ್ಧಿಯ ಯಾವುದೇ ಸೂಚಿಯನ್ನು ತೆಗೆದುಕೊಂಡರೂ (ನಿವ್ವಳ ಆಂತರಿಕ ತಲಾ ಉತ್ಪನ್ನವನ್ನು ಬಿಟ್ಟು) ಬಳ್ಳಾರಿ ಮತ್ತು ವಿಜಾಪುರ ಜಿಲ್ಲೆಗಳು ದುಸ್ಥಿತಿಯಲ್ಲಿದ್ದರೆ ಉಡುಪಿ ಮತ್ತು ಹಾಸನ ಜಿಲ್ಲೆಗಳು ಸುಸ್ಥಿತಿಯಲ್ಲಿವೆ.

ಕೋಷ್ಟಕ-೧ರಲ್ಲಿ ಹತ್ತು ಅಭಿವೃದ್ಧಿ ಸೂಚಿಗಳ ಮಾಹಿತಿಯನ್ನು ನಾಲ್ಕು ಜಿಲ್ಲೆಗಳಿಗೆ ಸಂಬಂಧಿಸಿದಂತೆ ನೀಡಲಾಗಿದೆ. ಈ ಹತ್ತು ಸೂಚಿಗಳಲ್ಲಿ ವರಮಾನ ಸೂಚಿಯೊಂದನ್ನು ಬಿಟ್ಟರೆ ಉಳಿದ ಒಂಬತ್ತು ಸೂಚಿಗಳಲ್ಲಿ ಬಳ್ಳಾರಿ ಮತ್ತು ವಿಜಾಪುರ ಜಿಲ್ಲೆಗಳು ಉಡುಪಿ ಮತ್ತು ಹಾಸನ ಜಿಲ್ಲೆಗಳಿಗಿಂತ ಹಿಂದುಳಿದಿದ್ದಾವೆ. ಇಲ್ಲಿ ನೀಡಿರುವ ಅಭಿವೃದ್ಧಿ ಸೂಚಿಗಳಲ್ಲಿ ಮೊದಲನೆಯದನ್ನು ಬಿಟ್ಟರೆ ಉಳಿದ ಒಂಬತ್ತು ಮಹಿಳಾ-ಸ್ಪಂದಿ ಅಭಿವೃದ್ಧಿ ಸೂಚಿಗಳಾಗಿವೆ. ಲಿಂಗ ಸಮಾನತೆಯಲ್ಲಿ ಉಡುಪಿ ಮತ್ತು ಹಾಸನ ಜಿಲ್ಲೆಗಳು ಮಹತ್ವದ ಸಾಧನೆ ಸಾಧಿಸಿಕೊಂಡಿವೆ. ಈ ಜಿಲ್ಲೆಗಳಲ್ಲಿ ಲಿಂಗ ಅನುಪಾತವು ಸಾವಿರಕ್ಕಿಂತ ಅಧಿಕವಾಗಿದೆ, ಒಟ್ಟು ಸಂತಾನೋತ್ಪತ್ತಿ ಪ್ರಮಾಣವು ಎರಡಕ್ಕಿಂತ ಕಡಿಮೆಯಿದೆ, ಜನಸಂಖ್ಯೆಯ ವಾರ್ಷಿಕ ಬೆಳವಣಿಗೆ ಪ್ರಮಾಣವು ಶೇಕಡ ಒಂದಕ್ಕಿಂತ ಕೆಳಮಟ್ಟದಲ್ಲಿದೆ, ಒಟ್ಟು ಸಾಗುವಳಿಗಾರರಲ್ಲಿ ಮಹಿಳಾ ಸಾಗುವಳಿಗಾರರ ಪ್ರಮಾಣ ಶೇಕಡ ೪೦ಕ್ಕಿಂತ ಅಧಿಕವಾಗಿದೆ.

ಉಡುಪಿ ಮತ್ತು ಹಾಸನ ಜಿಲ್ಲೆಗಳು ತಮ್ಮ ಜಿಲ್ಲೆಗಳಲ್ಲಿ ಏರಿಕೆಯಾದ ವರಮಾನವನ್ನು ಜನರ, ಅದರಲ್ಲೂ ಮಹಿಳೆಯರ ಬದುಕನ್ನಾಗಿ ಪರಿವರ್ತಿಸಿಕೊಳ್ಳುವುದರಲ್ಲಿ ಯಶಸ್ವಿಯಾಗಿವೆ. ಈ ಬಗೆಯ ಪರಿವರ್ತನೆ ಬಳ್ಳಾರಿ ಮತ್ತು ವಿಜಾಪುರ ಜಿಲ್ಲೆಗಳಲ್ಲಿ ನಡೆದಿಲ್ಲ. ವಿಶ್ವಬ್ಯಾಂಕು ತನ್ನ ೨೦೧೨ರ 'ಲಿಂಗ ಸಮಾನತೆ ಮತ್ತು ಅಭಿವೃದ್ಧಿ' ಎಂಬ ಶೀರ್ಷಿಕೆಯ ವಿಶ್ವ ಅಭಿವೃದ್ಧಿ ವರದಿಯಲ್ಲಿ 'ವರಮಾನ ವರ್ಧನೆಯು ತನ್ನಷ್ಟಕ್ಕೆ ತಾನು ಸಮಾಜದ ಎಲ್ಲ ವಲಯಗಳಲ್ಲಿ ಲಿಂಗ ಸಮಾನತೆಯನ್ನು ಉತ್ತಮಪಡಿಸುವುದರಲ್ಲಿ ವಿಫಲಗೊಂಡಿದೆ' ಎಂಬುದನ್ನು ಸ್ಪಷ್ಟಪಡಿಸಿದೆ. ಈ ಹಿನ್ನೆಲೆಯಲ್ಲಿ ಲಿಂಗ ಸಮಾನತೆಯ ಅಭಿವೃದ್ಧಿ ಆಯಾಮವನ್ನು ಗಂಭೀರವಾಗಿ ಪರಿಗಣಿಸುವ ಅಗತ್ಯವಿದೆ. ಇಂದು ನಮ್ಮ ದೇಶ/ರಾಜ್ಯದಲ್ಲಿ ಸರ್ಕಾರಗಳಿಗೆ ವರಮಾನ ವರ್ಧನೆಯು ಅತಿಶಯವಾದ ವ್ಯಸನವಾಗಿಬಿಟ್ಟಿದೆ. ಕೇಂದ್ರ ಸರ್ಕಾರವು ನಮ್ಮ ಜಿಡಿಪಿಯ ವಾರ್ಷಿಕ ಬೆಳವಣಿಗೆ ಪ್ರಮಾಣ ಎರಡಂಕಿಯದ್ದಾಗಬೇಕೆಂದು ಒತ್ತಿ ಒತ್ತಿ ಹೇಳುತ್ತಿದೆ. ನಮ್ಮ ರಾಜ್ಯದಲ್ಲಿ ಸರ್ಕಾರವು ತನ್ನ ಬಜೆಟ್ಟು ಒಂದು ಲಕ್ಷ ಕೋಟಿಯಾಗಬೇಕೆಂದು ಘೋಷಿಸುತ್ತಿದೆ. ಮೊದಲನೆಯದರಲ್ಲಿ ಜಿಡಿಪಿ ಬೆಳವಣಿಗೆಯೇ ಅಭಿವೃದ್ಧಿಯಾದರೆ ಮತ್ತೊಂದರಲ್ಲಿ ಬಜೆಟ್ಟು ಒಂದು ಲಕ್ಷ ಕೋಟಿಯಾಗುವುದೇ ಅಭಿವೃದ್ಧಿಯಾಗಿದೆ. ಅಭಿವೃದ್ಧಿ ಕುರಿತ ಇಂತಹ ಚಿಂತನೆಯು ತಪ್ಪು ಎಂಬುದನ್ನು ೧೯೯೦ರಿಂದ ಯುಎನ್‌ಡಿಪಿಯು ಪ್ರಕಟಿಸುತ್ತಿರುವ 'ಮಾನವ ಅಭಿವೃದ್ಧಿ ವರದಿ'ಗಳಲ್ಲಿ ತೋರಿಸುತ್ತಾ ಬಂದಿದೆ. ಅಭಿವೃದ್ಧಿಯನ್ನು ವರಮಾನದ ವ್ಯಾಪ್ತಿಯನ್ನು ಮೀರಿ ಪರಿಭಾವಿಸಿಕೊಳ್ಳುವ ಅಗತ್ಯವನ್ನು ಅಮರ್ತ್ಯ ಸೇನ್ ಮತ್ತು ಮೆಹಬೂಬ್ ಉಲ್ ಹಕ್ ಪ್ರತಿಪಾದಿಸಿದ್ದಾರೆ.

ಲಿಂಗ ಸಮಾನತೆ ಎನ್ನುವುದು ಭಾವನಾತ್ಮಕತೆಯ, ಸದಾಶಯದ, ಅನುಕಂಪದ ಅಥವಾ ಸಹಾನುಭೂತಿಯ ಸಂಗತಿಯಲ್ಲ. ಅದು ಮೂಲಭೂತವಾಗಿ ರಾಜಕೀಯ-ಆರ್ಥಿಕ ಸಂಗತಿಯಾಗಿದೆ. ಈ ಸತ್ಯವನ್ನು ವಿಶ್ವಬ್ಯಾಂಕಿನ ೨೦೧೨ರ ವಿಶ್ವ ಅಭಿವೃದ್ಧಿ ವರದಿಯು 'ಲಿಂಗ ಸಮಾನತೆಯು ಸ್ಮಾರ್ಟ್ ಎಕಾನಾಮಿಕ್ಸ್' ಎನ್ನುವುದರ ಮೂಲಕ ಸ್ಪಷ್ಟವಾಗಿ ತೋರಿಸಿಕೊಟ್ಟಿದೆ. ಲಿಂಗ ಸಮಾನತೆಯು ಅಭಿವೃದ್ಧಿಗೆ ಕಾರಣವೂ (ಇನ್ಪುಟ್) ಹೌದು ಮತ್ತು ಅದರ ಪರಿಣಾಮವೂ (ಔಟ್‌ಕಮ್) ಹೌದು. ಇದಕ್ಕಿಂತ ಮುಖ್ಯವಾಗಿ ಅದಕ್ಕೆ ತನ್ನದೇ ಆದ ಮಹತ್ವವಿದೆ. ಅದು ತನ್ನಷ್ಟಕ್ಕೆ ತಾನು ಮಹತ್ವದ ಸಾಮಾಜಿಕ ಮೌಲ್ಯವಾಗಿದೆ. ಇದು ೨೦೧೨ರ ಮಹಿಳಾ ದಿನಾಚರಣೆಯ ಸಂದೇಶವಾಗಲಿ.



**ಡಾ॥ ಟಿ. ಆರ್. ಚಂದ್ರಶೇಖರ**
'ವಚನ', ಸೊಸೈಟಿ ರಸ್ತೆ, ಅಮರಾವತಿ, ಹೊಸಪೇಟೆ - ೫೮೩ ೨೦೧

## ಮಗಳು ಬರೆದ ಕವಿತೆ

**ಮ**ಗಳು
ಎಳೆಯ ಮುಗುಳು
ಎದೆಯ ಮೇಲೆ ಮಲಗಿರುವಳು
ಸದ್ದು ಮಾಡಿದ ಎದೆಯ
ಪ್ರಶ್ನಿಸುತ್ತಾಳೆ ಮೆಲ್ಲಗೆ

''ಯಾರು ನೀನು''?

ಎದೆಯ ಬಡಿತ ಹಮ್ಮಿನಿಂದ
ಕ್ರೈಸ್ತನೆಂದಿತು
ಸಣ್ಣಗೆ ಕಂಪಿಸಿದಳು

ಮುಸ್ಲಿಮನೆಂದಿತು ಗರ್ವದಲಿ
ಒಳಗೇ ದುಃಖಿಸಿದಳು

ಹಿಂದುವೆಂದಿತು ಹೆಮ್ಮೆಯಲಿ
ಜೋರಾಗಿ ಅತ್ತುಬಿಟ್ಟಳು

ಕಣ್ಣೀರಿನಲಿ ತೊಯ್ದ ಹೃದಯ
ಮನುಷ್ಯನೆಂದಿತು
ಕೊನೆಗೆ ಅಳುಕುತಲಿ

ಮೂಡಿತು ಮುಗ್ಧ ಮುಖದಲಿ
ಬುದ್ಧನ ಬೆಳದಿಂಗಳು
ಅಪ್ಪಿ ಹೂ ಮುತ್ತನಿತ್ತಳು
ಬೆಳಕಿನ ಬೀಜ ಬಿತ್ತಿದಳು




**ವಿ. ಹರಿನಾಥ ಬಾಬು ಸಿರುಗುಪ್ಪ**
ಉಪ ಖಜಾನಾಧಿಕಾರಿ, ಉಪ ಖಜಾನೆ, ಗಂಗಾವತಿ - ೫೮೩ ೨೨೭, ಕೊಪ್ಪಳ ಜಿಲ್ಲೆ

# ಸಂತಾಪ ಸೂಚಕ ಸಭೆ

**ಮಾ**ಮೂಲಿನಂತೆ ಕಣಕಾಲಿನ ಕೆಳ ಕೀಲು ಕಾಣುವಂತೆ ತೊಟ್ಟ ಪ್ಯಾಂಟು, ಇನ್‌ಶರ್ಟ್ ಮಾಡಿ ಟೈ ಕಟ್ಟಿಕೊಂಡು ಮೇಲೆ ಕರೀ ಕೋಟು ಧರಿಸಿದ ಪ್ರೊ॥ ವಳಸಂಗಕರರು ಸಂಜೆ ಹೊತ್ತಿಗೆ ಮುಂಚೆ ಫ್ರೀ ಲಾನ್ಸ್ ಕ್ಲಬ್ಬಿಗೆ ಬಂದಾಗ ಅಲ್ಲಿ ಇನ್ನೂ ಯಾರೂ ಬಂದಿರಲಿಲ್ಲ. ಕ್ಲಬ್ಬಿನ ಆಳಿನ ಮೇಲೆ ಅವರು ಸಿಡಿಮಿಡಿಗೊಂಡರು. ಆ ದಿನ ಸರ್ವ ಸದಸ್ಯರ ಸಭೆಯಲಿ ಸಂತಾಪ ಸೂಚಕ ಪ್ರಸ್ತಾವನೆ ಮಂಡಿಸಿ ಸಭೆಯ ಅನುಮೋದನೆ ಪಡೆಯಬೇಕಾಗಿತ್ತು. ಕಳೆದ ರಾತ್ರಿ ಬಹಳ ಕಷ್ಟಪಟ್ಟು ಶಬ್ದಗಳನ್ನು ಹುಡುಕಿ - ಹುಡುಕಿ ಅವರು ಪ್ರಸ್ತಾವನೆಯನ್ನು ತಯಾರಿಸಿದ್ದರು. ಕಲ್ಬುರ್ಗಿಯಲ್ಲಿ ಕನ್ನಡ ಶಾಲೆಯ ಮಾಸ್ತರರಾಗಿ ನಿವೃತ್ತಿ ಹೊಂದಿ ರಾಸೂರಿಗೆ ಬಂದು ನೆಲೆಸಿದ್ದರು. ಹಾಗೆಯೇ ಫ್ರೀ ಲಾನ್ಸ ಕ್ಲಬ್ಬಿನ ಸೆಕ್ರೆಟರಿಯೂ ಆಗಿದ್ದರು. ಸಾಹಿತ್ಯದ ಗೀಳು ಇದ್ದುದರಿಂದ ಆಗಾಗ್ಗೆ ಹನಿಗವನಗಳನ್ನೋ, ನಗೆಹನಿಗಳನ್ನೋ ಬರೆದು ಸ್ಥಳೀಯ ಪತ್ರಿಕೆಗಳಲ್ಲಿ ಪ್ರಕಟಿಸುತ್ತಿದ್ದರು. ಆಗ ಗೆಳೆಯರ ಬಳಗದವರು ಅವರನ್ನು ಪ್ರೊಫೆಸರ್ ಎಂದು ಕರೆಯಲು ಆರಂಭಿಸಿದ್ದರು. ಹೀಗಾಗಿ ಅವರ ಹೆಸರಿಗೆ 'ಪ್ರೊಫೆಸರ್' ಎಂಬ ಪದ ಅಂಟಿಕೊಂಡಿತ್ತು.

ನಿಧಾನವಾಗಿ ಒಬ್ಬೊಬ್ಬರೇ ಕ್ಲಬ್ಬಿಗೆ ಬರಹತ್ತಿದರು. ಆ ದಿನ ಸಂತಾಪ ಸೂಚಕ ಸಭೆ ಇದೆ ಎಂಬುದು ಯಾರಿಗೂ ನೆನಪೇ ಇರಲಿಲ್ಲ. ರಾಸೂರಿನ ಶಾಸಕರಾಗಿದ್ದ ಗೋಪಿರಂಜನರು ಕಳೆದ ವಾರ ದೈವಾಧೀನರಾಗಿದ್ದರು. ಅವರು ಫ್ರೀ ಲಾನ್ಸ ಕ್ಲಬ್ಬಿನ ಮಾಜಿ ಅಧ್ಯಕ್ಷರೂ, ಸಕ್ರಿಯ ಸದಸ್ಯರೂ ಆಗಿದ್ದರು. ಹೀಗಾಗಿ ಅವರ ಮರಣದ ನಿಮಿತ್ತ ಒಂದು ಸಂತಾಪ ಸೂಚಕ ನಿಲುವಳಿಯನ್ನು ಪಾಸ್‌ಮಾಡಿ ಮೃತರ ಕುಟುಂಬಕ್ಕೆ ಕಳಿಸುವುದು, ಪತ್ರಿಕೆಗಳಿಗೆ ಬಿಡುಗಡೆ ಮಾಡುವುದು ಕ್ಲಬ್ಬಿನ ನೈತಿಕ ಕರ್ತವ್ಯವಾಗಿತ್ತು. ಅದೊಂದು ಫಾರ್ಮ್ಯಾಲಿಟಿ, ನಡೆದು ಹೋಗಲಿ ಎಂದು ಎಲ್ಲರೂ ನಿಷ್ಕಾಳಜಿಯಿಂದ ನುಡಿದು ಕೈ ಜಾಡಿಸಿಕೊಂಡು, ಕೆಲವರು ಬಿಲಿಯರ್ಡ್ಸ್ ಮತ್ತು ಇನ್ನು ಕೆಲವರು ಟೇಬಲ್ ಟೆನಿಸ್ ಟೇಬಲ್ ಕಡೆಗೆ ಹೋದರೆ ಇನ್ನು ಕೆಲವರು ಕಾರ್ಡ್ಸ್ ಆಡಲು ಟೇಬಲ್ಲಿನ ಸುತ್ತ ತಮ್ಮ ಆಸನಗಳನ್ನು ಭದ್ರಪಡಿಸಿಕೊಂಡರು. ರಾತ್ರಿ ನಿದ್ದೆಗೆಟ್ಟು ಸಾಹಿತ್ಯಿಕ ಭಾಷೆಯಲ್ಲಿ ತಾನು ತಯಾರಿಸಿಕೊಂಡು ಬಂದಿದ್ದ ಸಂತಾಪದ ಪ್ರಸ್ತಾವನೆಯ ಬಗ್ಗೆ ಒಂದಿಷ್ಟೂ ಆಸಕ್ತಿ ತೋರಿಸದೆ ಸದಸ್ಯರು ತೋರುತ್ತಿರುವ ಅಸಡ್ಡೆಯಿಂದ ವಳಸಂಗಕರರಿಗೆ ಬಹಳ ಬೇಜಾರಾಯಿತು.

''ಸರ್, ಇವೊತ್ತು ಸಂತಾಪ ಸೂಚಕ ಸಭೆ ಇದೆ'', ಎಂದು ಆ ದಿನ ಕ್ಲಬ್ಬಿನ ಅಧ್ಯಕ್ಷರು ಬಂದಿರಲಿಲ್ಲವಾದ ಕಾರಣ ಉಪಾಧ್ಯಕ್ಷರಾದ ಕುಲಕರ್ಣಿಯವರಲ್ಲಿ ನಿವೇದಿಸಿಕೊಂಡರು.

''ಯಾಂವ ಅಂಥಾ ಘನಂದಾರಿ ಕುಳ ಗೊಟಕ್ ಅಂತಪ್ಪಾ, ಸಂತಾಪ ಸೂಚಿಸೋದಕ್ಕ'' ಕುಲಕರ್ಣಿಯವರು ಜಿಜ್ಞಾಸೆಯಿಂದ ಕೇಳಿದರು.

''ಹ್ವಾದ ವಾರ ಗೋಪಿರಂಜನ ಸರರು ನಿಧನರಾದರಲ್ಲ! ಅದಕ್ಕಾಗಿ'', ವಳಸಂಗಕರ ಸ್ಪಷ್ಟೀಕರಣ ನೀಡಿದರು.

''ಓ ! ಅಂವನ ! ಅವನ ನಿಧನಕ್ಕ ನಾವ್ಯಾಕ ಸಂತಾಪ ಸೂಚಿಸಬೇಕು ?''

''ಅಲ್ಲ ಸರ್ ! ಅವರು ಈ ಕ್ಲಬ್ಬಿನ ಮಾಜಿ ಅಧ್ಯಕ್ಷರಾಗಿದ್ದರು. ರಾಸೂರು ಕ್ಷೇತ್ರದ ಹಾಲೀ ಶಾಸಕರಾಗಿದ್ದರು. ಅವರ ನಿಧನಕ್ಕೆ ಈ ಕ್ಲಬ್ಬಿನ ವತಿಯಿಂದ ಒಂದು ಸಂತಾಪ ಸೂಚಿಸದೆ ಹೋದರೆ ಹ್ಯಾಗೆ, ಸರ್ ?'' ವಳಸಂಗಕರರ ಸಮಜಾಯಿಷಿ.

ಅಷ್ಟರಲ್ಲಿ ಕ್ಲಬ್ಬಿನ ಒಳಕ್ಕೆ ಪ್ರವೇಶಿಸುತ್ತಿದ್ದ ಡಾ॥ ದುರಗಿ, ಪ್ರೊ॥ ಪಾಟೀಲ ಮತ್ತು ಮಹಿಳಾ ಮಂಡಳದ ಅಧ್ಯಕ್ಷೆ ಶ್ರೀಮತಿ ಸುನಂದಾ ತಾಯಿಯವರು ಕುತೂಹಲದಿಂದ ವಿಷಯ ಏನೆಂದು ವಿಚಾರಿಸಿದರು. ವಳಸಂಗಕರರು ವಿಷಯವನ್ನು ನಿವೇದಿಸಿಕೊಂಡರು.

''ಹೌದೌದು ! ಗೋಪಿರಂಜನರು ರಾಸೂರಿನ ಗಣ್ಯ ವ್ಯಕ್ತಿಗಳಲ್ಲಿ ಒಬ್ಬರು. ಅವರ ನಿಧನಕ್ಕೆ ಸಂತಾಪ ಸೂಚಿಸದೆ ಹೋದರೆ ಸರಿ ಕಾಣೋದಿಲ್ಲ. ಫಾರ್ಮ್ಯಾಲಿಟಿಗಾದರೂ ನಾವು ಒಂದು ಸಂತಾಪದ ನಿರ್ಣಯವನ್ನು ಅವರ ಕುಟುಂಬ ವರ್ಗಕ್ಕೆ ಕಳಿಸಬೇಕು'', ಸುನಂದಾ ತಾಯಿ ಕಳಕಳಿಯಿಂದ ಹೇಳಿದರು.

**ಭಾಲಚಂದ್ರ ಜಯಶೆಟ್ಟಿ**

''ಕಳಿಸಿಕೊಡ್ರಲಾ, ಅದರಾಗೇನೈತಿ ! ಯಾರ ಬ್ಯಾಡಂತಾರ ?'' ಡಾ॥ ದುರುಗಿ ಎಲ್ಲರ ಪರವಾಗಿ ಎಂಬಂತೆ ತಮ್ಮ ನಿರ್ಣಯ ತಿಳಿಸಿದರು.

ಅಷ್ಟರಲ್ಲಿ ಇನ್ನೊಂದಿಷ್ಟು ಜನ ಸದಸ್ಯರು ಆಗಮಿಸಿದರು. ವಿಷಯ ಏನೆಂಬುದು ಅವರಿಗೂ ತಿಳಿಸಲಾಯಿತು. ಬಂದವರ ಪೈಕಿ ವಕೀಲರಾದ ಕಿಶನರಾಯರು ಒಂದು ತರಹ ನಗುತ್ತ ನುಡಿದರು, ''ಅಲ್ರೀ ವಳಸಂಗಕರ ! ಇದಕ್ಕೆಲ್ಲ ಕಾಮನ್‌ಸೆನ್ಸ ಬೇಕು. ಏನ್ರೆಪಾ. ಯಾರೋ ಒಬ್ಬ ಗಣ್ಯ ವ್ಯಕ್ತಿ ಸತ್ತರು ಅಂದ್ರ ಸಂತಾಪದ ನಾಲ್ಕು ಮಾತು ಗೀಚಿ ಕಳಿಸಿಕೊಡಬೋಕು, ಏನ್ರೆಪಾ. ಅದಕ್ಕೆಲ್ಲ ಡಂಗುರಾ ಸಾರ್ಬೇ ಹೋಗ್ತಾರೇನ್ರೀ ?''

ಜರ್ದಾ ಎಲೆ ಜಗಿಯುತ್ತಿದ್ದ ಕಾಂಟ್ರ್ಯಾಕ್ಟರ ನಾಡರ ಅವರು ಸಮಜಾಯಿಷಿ ಹೇಳಿದರು, ''ರೀ ವಳಸಂಗಕರರೆ, ವಕೀಲ ಸಾಹೇಬರು ಹೇಳೋದು ಬರೋಬ್ಬರೀ ಅದ. ನೀವೇ ಒಂದು ಸಂತಾಪ ಸೂಚಕ ಪ್ರಸ್ತಾವನೆಯನ್ನು ಬರೆದು ಕಳಿಸಿ ಕೊಡ್ರ್ಯಲಾ.''

''ಅದೆಲ್ಲ ಒಂದು ಫಾರ್ಮ್ಯಾಲಿಟಿ ಇರ್ತದ, ಏನ್ರೆಪಾ'' ಸುನಂದಾ ತಾಯಿ ನುಡಿದರು.

''ಹಂಗೆಲ್ಲ ಮಾಡಿದ್ರ ತಪ್ಪಾಗ್ತದ, ರೀ, ಸಭೆ ಕರೆದು, ಪ್ರಸ್ತಾವ ಪಾಸ್‌ಮಾಡೇವಿ ಅಂತ ಮಿನಿಟ ಬುಕನ್ಯಾಗ ದಾಖಲಿಸಬೇಕಾಗ್ತದ, ರೀ'', ವಳಸಂಗಕರರು ಮುತುವರ್ಜಿಯಿಂದ ನುಡಿದರು. ಮುಂದುವರಿದ ಅವರು ಹೇಳಿದರು, ''ನಾನು ಪ್ರಸ್ತಾವ ಬರಕೊಂಡು ಬಂದೇನ್ರೀ. ನಿಮ್ಮ ವ್ಯಾಳ್ಯಾ ಹಾಳ ಆಗಬಾರ್ದೂ ಅಂತ. ಒಂದು ಸಲ ಓದ್ತೇನೆ, ಕೇಳ್ರಿ. ನೀವೆಲ್ಲ 'ಎಸ್' ಅಂದ್ರ ಅದನ್ನೇ ಫೇರ್ ಮಾಡಿ ಕಳಿಸಿಕೊಡ್ತೇನೆ.''

''ಅದರಾಗ ಓದೋದೇನೈತ್ರಿ ! ನೀವು ಸಾಹಿತಿಗಳು, ಛಲೋನೇ ಬರ್ದಿರ್ತೀರಿ. ನೀವು ಬರೆದಿದ್ದಕ್ಕ ನಮ್ಮದೆಲ್ಲ ಒಪ್ಪಿಗೆ ಅದ. ಕಳಿಸಕೊಡ್ರಿ'' ಎಂದು ಹೇಳುತ್ತ ಡಾ॥ ದುರಗಿಯವರು ತುಟಿಯಲ್ಲಿ ಸಿಗರೇಟು ಕಚ್ಚಿಕೊಂಡು ಇಸ್ಪೇಟಿನ ಎಲೆಗಳನ್ನು ಶಫಲ್ ಮಾಡಹತ್ತಿದರು.

''ಅದೆಲ್ಲ ಫಾರ್ಮ್ಯಾಲಿಟಿರೆಪಾ, ಅದರಾಗ ಕೇಳೋದು ಹೇಳೋದು ಏನದ ? ಕಳಿಸ್ರೆಲಾ, ವಳಸಂಗಕರ'', ಸುನಂದಾ ತಾಯಿ ನುಡಿದರು.

''ಹಾಂಗಲ್ಲ ಮ್ಯಾಡಮ್, ಆಮ್ಯಾಲ ಏನೂ ಹೆಚ್ಚೂ ಕಮ್ಮಿ ಆಗೋದು ಬ್ಯಾಡ ನೋಡ್ರಿ'', ವಳಸಂಗಕರರು ತಮ್ಮ ಬರವಣಿಗೆಯನ್ನು ಪ್ರದರ್ಶಿಸುವ ತವಕದಲ್ಲಿದ್ದರು.

''ಹೋಗ್ಲಿ ಬಿಡ್ರೀ ಮ್ಯಾಡಮ್, ಅವ್ರು ಕಷ್ಟಪಟ್ಟು ಬರಕೊಂಡು ಬಂದಾರಂದ್ರ ಓದ್ಲಿ ಬಿಡ್ರಿ, ಒಮ್ಮೆ ಕೇಳಸಿಕೊಳ್ಳೋದರಾಗ ತಪ್ಪೇನದ. ಅದರಾಗ ಸೀರಿಯಸ್ಸಾಗಿ ತೊಗೋಳೋದು ಏನಿರ್ತದ ?'' ಎನ್ನುತ್ತಾ ಪ್ರೊ॥ ಪಾಟೀಲರು, ಡಾ॥ ದುರಗಿ ಮತ್ತು ಸುನಂದಾ ತಾಯಿಯ ಸುಮ್ಮನಾಗಿಸಿದರು.

''ಪ್ಲೀಜ್, ಎಲ್ಲರೂ ಈ ಕಡೆಗೆ ಸ್ವಲ್ಪ ಗಮನ ಕೊಟ್ಟು ಕೇಳ್ರಿ'' ವಳಸಂಗಕರರು ಪ್ರಸ್ತಾವನೆಯನ್ನು ಓದಲು ಆರಂಭಿಸಿದರು –

''ಕಳೆದ ಮಂಗಳವಾರ ರಾಸೂರಿನ ಶಾಸಕರು, ಫ್ರೀ ಲಾನ್ಸ್ ಕ್ಲಬ್ಬಿನ ಮಾಜಿ ಅಧ್ಯಕ್ಷರೂ ಆಗಿದ್ದಂಥ ಶ್ರೀಮಾನ ಗೋಪಿರಂಜನರು ಅಕಾಲಿಕವಾಗಿ ದೈವಾಧೀನರಾದರು. ಅವರು ಒಬ್ಬ ನಿಷ್ಠಾವಂತ ರಾಜಕಾರಣಿಗಳೂ, ಜನನಾಯಕರೂ ಮತ್ತು ಗಾಂಧಿ ಅನುಯಾಯಿಗಳೂ ಆಗಿದ್ದರು. ಸಚ್ಚಾರಿತ್ರ್ಯವುಳ್ಳ ಶ್ರೀಯುತರು ಒಬ್ಬ ಆದರ್ಶ ವ್ಯಕ್ತಿಗಳಾಗಿದ್ದರು. ಅವರನ್ನು ಕಳೆದುಕೊಂಡು ರಾಸೂರು



ಪ್ರದೇಶವಷ್ಟೇಯಲ್ಲ, ಇಡೀ ರಾಜ್ಯವೇ ಅನಾಥವಾಗಿದೆ. ಅವರ ಈ ದುರ್ಮರಣಕ್ಕೆ ಫ್ರೀ ಲಾನ್ಸ ಕ್ಲಬ್ಬಿನ ನಾವು ಸದಸ್ಯರೆಲ್ಲ ಸರ್ವಾನುಮತದಿಂದ ಹಾರ್ದಿಕ ಸಂತಾಪವನ್ನು ಸೂಚಿಸುತ್ತೇವೆ ಅವರ ಆತ್ಮಕ್ಕೆ ಪರಮಾತ್ಮನು ಚಿರಶಾಂತಿಯನ್ನು, ಅವರ ಕುಟುಂಬ ವರ್ಗಕ್ಕೆ ನೆಮ್ಮದಿಯನ್ನು ಕರುಣಿಸಲಿ ಎಂದು ಪ್ರಾರ್ಥಿಸುತ್ತೇವೆ.''

ಪ್ರಸ್ತಾವನೆ ಓದಿಯಾದ ಮೇಲೆ ವಳಸಂಗಕರರು ತಮ್ಮ ಕಾಲರ ಏರಿಸಿಕೊಂಡು, ಕನ್ನಡಕ ಸರಿಮಾಡಿಕೊಂಡು ಹೆಮ್ಮೆಯಿಂದ ಎಲ್ಲ ಸದಸ್ಯರ ಪ್ರತಿಕ್ರಿಯೆಗಾಗಿ ಕಣ್ಣುಹಾಯಿಸಿದರು.

''ಭಾಳ ಛಲೋ ಬರ್ದಿದ್ದೀರಿ, ಕಳಿಸಿಕೊಡ್ರಿ'', ಡಾ|| ದುರಗಿಯವರು ತಾರಾತುರಿಯಲ್ಲಿ ಹೇಳಿ ಇಸ್ಪೀಟ ಎಲೆ ಜೋಡಿಸುವುದರಲ್ಲಿ ತೊಡಗಿದರು.

''ಇದೆಲ್ಲ ಫಾರ್ಮ್ಯಾಲಿಟಿರೆಪಾ'', ಎಂದರು ಸುನಂದಾ ತಾಯಿ.

''ಹ್ಞಾಂ, ನೀವನ್ನೋದು ಖರೆ ರೀ ಮ್ಯಾಡಮ್. ಆದರ ಅದರೊಳಗ ನನಗ ಒಂದು ಮಾತು ಅಡಕಾಸಲಾಕ ಹತ್ತೇದ.'' – ಅದುವರೆಗೆ ಸುಮ್ಮನೆ ಇದ್ದ ಕೃಷ್ಣಾ ಪುಣೆ ನುಡಿದು, ''ಎಲ್ಲಿ! ಇನ್ನೊಮ್ಮೆ ಓದ್ರಿ ನೋಡೋಣ, ವಳಸಂಗಕರ!'' ಎನ್ನುತ್ತ ಆಸಕ್ತಿ ತೋರಿದರು.

ವಳಸಂಗಕರ ಓದಹತ್ತಿದರು, ''ಕಳೆದ ಮಂಗಳವಾ...''

ಅವರ ಮಾತನ್ನು ಮೊಟುಕುಗೊಳಿಸುತ್ತ ಪುಣೆಯವರು ನುಡಿದರು, ಅದೆಲ್ಲ ಬ್ಯಾಡ್ರೀ. ''ಗೋಪಿರಂಜನರು ಅಕಾಲಿಕವಾಗಿ...'' ಅಂತ ಏನೋ ಬರೆದಿದ್ದೀರಲ್ಲ, ಅಷ್ಟು ಓದಿದರೆ ಸಾಕು.

''ಅಕಾಲಿಕವಾಗಿ ದೈವಾಧೀನರಾದರು...''

''ಹ್ಞಾಂ! ಹ್ಞಾಂ! ಅದೇ ನಾನು ಹೇಳೋದು. ಸಾಯೋದಕ್ಕೂ ಎಲ್ಯಾದರೂ ಅಕಾಲ, ಸಕಾಲ ಅಂತ ಇರ್ತದೇನ್ರೀ? ಸಾವೇನು ಹೇಳಿ ಕೇಳಿ ಬರ್ತದ? ಸಾವು ಬಂತು. ಸತ್ತರು, ಅಷ್ಟೇ!'' ಪುಣೆ ಉವಾಚ.

''ಇದೆಲ್ಲ ಫಾರ್ಮ್ಯಾಲಿಟಿ ರೀ... ಇವರೆ...'' ಸುನಂದಾ ತಾಯಿ.

''ಸತ್ತರು ಅಂದಮ್ಯಾಲ ನನಗ ಒಂದು ವಿಚಾರ ಹೊಳೀತು ನೋಡ್ರಿ'', ವಕೀಲ ಕಿಶನರಾಯರು ನುಡಿದರು. ''ಪುಣೆಯವರು ಹೇಳೋದು ಬರೋಬ್ಬರಿ ಅದ. ಬರೀ 'ಸತ್ತರು' ಅಂತ ಹೇಳಿದ್ರ ಸಾಕು. 'ದೈವಾಧೀನರಾದರು' ಅಂತ ಹೇಳೋದಕ್ಕ ನಾವ್ಯಾರ್ರೀ? ಅದಕ್ಕ ಏನರೆ ಅರ್ಥ ಅದಾನ? ಅಂವ ದೈವಕ್ಕ ಆಧೀನನಾದನೋ ಇಲ್ಲಾ ನರಕದ ಹಾದಿ ಹಿಡಿದನೋ, ಯಾರಿಗ್ಗೊತ್ತು? ಹಾಂಗೆಲ್ಲ ಬರಿಯಾಕ ಹೋಗ್ಬಾರ್ದು. ಏನಂತೀರಿ ಪುಣೆಯವರೇ?''... ಕಿಶನರಾಯರು ಲಾ ಪಾಯಿಂಟ ತೆಗೆದರು.

''ಇರ್ಲಿ ಬಿಡ್ರಿ, ಇವರೆ... ಇದೆಲ್ಲ ಫಾರ್ಮ್ಯಾಲಿಟಿ ರೀ'' ಎಂದರು ಮತ್ತೆ ಸುನಂದಾ ತಾಯಿ.

''ಹಂಗಾಗೋದಿಲ್ಲ ರೀ ಮ್ಯಾಡಮ್, ಅದು ತಪ್ಪಾಗ್ತದ. ಆ ಮಾತು ಹೊಡದಹಾಕ್ರಿ, ವಳಸಂಗಕರ'', ಕಿಶನರಾಯರು ಆಜ್ಞಾಪಿಸಿದರು. ನಿರ್ವಾಹವಿಲ್ಲದೆ ವಳಸಂಗಕರರು, 'ಅಕಾಲಿಕವಾಗಿ ದೈವಾಧೀನರಾದರು' ಎಂಬ ಪದಗಳನ್ನು ಹೊಡೆದುಹಾಕಿ ಬರೀ 'ಸತ್ತರು' ಎಂಬ ಪದವನ್ನು ಸೇರಿಸಿದರು.

''ಈಗ ಪರವಾ ಇಲ್ಲ. ಕಳಿಸಿ ಕೊಡ್ರಿ.'' ಪುಣೆ ಮತ್ತು ಕಿಶನರಾಯರು ಏಕಕಂಠದಿಂದ ಹೇಳಿದರು.

ಪಾಟೀಲರಿಗೆ ಒಮ್ಮೆಲೆ ಆವೇಶ ಉಕ್ಕಿ ಬಂತು. ಒಂದು ರೀತಿಯ ಉದ್ರೇಕದಲ್ಲಿಯೇ ಅವರು ನುಡಿದರು, ''ಏನ ಪರವಾ ಇಲ್ಲಾರಿ? 'ನಿಷ್ಠಾವಂತ ರಾಜಕಾರಣಿ, ಜನನಾಯಕ' ಅಂತೆಲ್ಲ ಬರ್ದಾರಲ್ಲರೀ. ಅಂವಾ ಎಂಥಾ ನಿಷ್ಠಾವಂತ ರಾಜಕಾರಣಿಯಾಗಿದ್ದ? ಎಷ್ಟು ಪಾರ್ಟಿ ಜಂಪ ಮಾಡಿದ್ದ! ಒಂದೇ ಪಾರ್ಟಿಗೆ ನಿಷ್ಠನಾಗಿದ್ದರೆ ರಾಸೂರಿಗೆ ಒಂದಿಷ್ಟು ಏನಾದರೂ ಒಳ್ಳೆಯ ಕೆಲಸ ಮಾಡಬಹುದಿತ್ತು. ಕಪ್ಪೆ ಹಾಂಗ ಒಂದು ಪಾರ್ಟಿಯಿಂದ ಇನ್ನೊಂದು ಪಾರ್ಟಿಗೆ ಕುಪ್ಪಳಿಸ್ತಾ ಇದ್ದ. ಇನ್ನು 'ಜನನಾಯಕ' ಅನ್ನೋದು. ಇವನ ಲುಚ್ಛಾತನಕ್ಕ ಮೋಳಕೇರ್ಯಾಗ ಚಪ್ಪಲಿ ಹಾರ ಹಾಕಿ ಮೆರವಣಿಗೆ ಮಾಡಿದ್ದು ಸುಳ್ಳೇನ್ರಿ? ಅದು ಯಾರಾದರೂ ಮರೆಯಾಕ ಸಾಧ್ಯ ಏನ್ರೀ?''

''ಹೌದ್ರೀ ವಳಸಂಗಕರರೆ, ಆ ಮಾತುಗಳನ್ನೂ ತೆಗೆದುಹಾಕ್ರಿ'' ಎಂದು ಪುಣೆ ಹೇಳಿದರು.

''ಅದೆಲ್ಲ ಫಾರ್ಮ್ಯಾಲಿಟಿ ರೀ'', ಎಂದರು ಮಾಮೂಲಿನಂತೆ ಸುನಂದಾ ತಾಯಿ.

''ಅದರೊಳಗೆ ಇನ್ನೊಂದು ಮಾತು ಬಂದದ. 'ಗಾಂಧೀ ಅನುಯಾಯಿಗಳು' ಅಂತ. ಯಾವ ಗಾಂಧೀ ಅನುಯಾಯಿರೆಪಾ? ಇವೊತ್ತ ನಾಳೆ ಎಂತೆಂಥ ಮಂದಿಗಳೆಲ್ಲ ಬಂದು ಸೇರಿ ಗಾಂಧಿವಾದೀ ಅಂತ ಹೇಳಿಕೊಳ್ಳಾಕ ಹತ್ಯಾರ. ಇಂವಾ ಯಾವ ಗಾಂಧೀ ಅನುಯಾಯಿ?'' ಎನ್ನುತ್ತಾ ಡಾ|| ದುರಗಿ ಆಕ್ಷೇಪಣೆ ಎತ್ತಿದರು.

''ಹೌಂದ್ರಿ, ಹಾಂಗ ಬರೆಯೋದಂದ್ರ ರಾಷ್ಟ್ರಪಿತಾ ಗಾಂಧಿ ತಾತಾನ ಮಾರಿ ಮ್ಯಾಲ ಚಪ್ಪಲಿ ತೊಗೊಂಡು ಹೊಡಾದ್ಹಾಗೇ ಅನ್ರಿ. ಮೊದಲ ಆ ಶಬ್ದ ಹೊಡೆದು ಹಾಕ್ರಿ'', ಈವರೆಗೂ ಸಿಗರೇಟಿನ ಹೊಗೆ ಉಗುಳುತ್ತ ಸುಮ್ಮನೆ ಕುಳಿತಿದ್ದ ಗುತ್ತೇದಾರ ಬಾಳಪ್ಪಾ ನುಡಿದರು.

ಅನಿವಾರ್ಯವಾಗಿ ವಳಸಂಗಕರರಿಗೆ 'ಗಾಂಧಿಯ ಅನುಯಾಯಿಗಳು' ಎಂಬ ಪದವನ್ನು ಹೊಡೆದುಹಾಕಬೇಕಾಯಿತು.

''ಆಯ್ತು. ನೀವೆಲ್ಲ ಹೇಳಿದ ಹಾಂಗೇ ಆಯ್ತು. ಇದೊಂದು ಫಾರ್ಮ್ಯಾಲಿಟಿ, ಅಷ್ಟೆ. ಎಲ್ಲಾ ತಿದ್ದಿದ್ದು ಆಯ್ತಲ್ಲ! ವಳಸಂಗಕರರೆ, ಫೇರ್ ಮಾಡಿ ಕಳಿಸಿಕೊಡ್ರಿ'' ಸುನಂದಾ ತಾಯಿ ಹೇಳಿದರು.

ಬಿಲಿಯರ್ಡ್ಸ್ ಬಾಲಿಗೆ ಗುರಿಯಿಟ್ಟು ಬಾಗಿ ನಿಂತಿದ್ದ ದೇಶಪಾಂಡೆಯವರು ಸ್ಟಿಕ್ಕನ್ನು ಹಾಗೇ ಕೈಯಲ್ಲಿ ಹಿಡಿದು ಸೊಂಟ ನೆಟ್ಟಗೆ ಮಾಡಿ ನಿಂತು ಆಕ್ಷೇಪಣೆ ಎತ್ತಿದರು, ''ಅದೇನೋ ಸಚ್ಚಾರಿತ್ರ್ಯವುಳ್ಳ ಶ್ರೀಯುತರು, ಒಬ್ಬ ಆದರ್ಶ ವ್ಯಕ್ತಿಗಳಾಗಿದ್ದರು ಅಂತ ಬರೆದಿದ್ದೀರಲ್ಲರೀ. ಅದರ ಅರ್ಥ ಏನು ಅಂತ ನಿಮಗೇನಾದರೂ ಗೊತ್ತೇನ್ರೀ?''

''ನಾನು ಹೇಳ್ತಾ ಇದ್ದೇನಲ್ಲರೀ, ಇದೆಲ್ಲ ಫಾರ್ಮ್ಯಾಲಿಟಿ ಅಂತ...'' ಸುನಂದಾ ತಾಯಿ.

''ಇರಬಹುದು ರೀ ಮ್ಯಾಡಮ್. ಆದರ ನಾಳೆಯ ದಿನ ಈ ಪ್ರಸ್ತಾವನೆ ಪತ್ರಿಕೆಗಳಲ್ಲಿ ಪ್ರಕಟ ಆಗ್ತದ. ಆಗ ಅದನ್ನು ನನ್ನ ಹೆಣ್ತಿನೂ, ಆಕೆಯ ಗೆಳತೇರೂ ಓದ್ತಾರ.''

''ಪೇಪರನ್ಯಾಗ ಬಂದ ಮ್ಯಾಲ ಎಲ್ಲರೂ ಓದ್ತಾರ. ಓದ್ಲಿ ಬಿಡ್ರಿ.''... ಸುನಂದಾ ತಾಯಿ.

''ಅಲ್ರೀ ಮ್ಯಾಡಮ್, ಈ ಮನಷ್ಯಾ ಎಂಥಾ ಕಚ್ಚೆ ಹರ್ಕ ಇದ್ದ ಅಂತ ನಾ ನಿಮಗ ಹ್ಯಾಂಗ ಹೇಳ್ಲೀ? ನನ್ನ ಹೆಣ್ತಿ ಇಂವನ ಕಾಲೇಜಮೇಟ್ ಆಗಿದ್ಳು. ಆಕೆ ಕಣ್ಣಾರೆ ಎಲ್ಲಾ ನೋಡ್ಯಾಳ. ಅಂಥಾ ಮನಷ್ಯಾಗ ನಾವು ಸಾಚಾ ಮನಷ್ಯಾ ಅಂತ ಸರ್ಟಿಫಿಕೇಟ ಕೊಟ್ರ ಮಂದಿ ನಗ್ತಾರರೀ. ಅದು ನಮಗೂ ಗೌರವ ತರುವ ಸಂಗತಿಯಲ್ಲರೀ ಮ್ಯಾಡಮ್. ಅಷ್ಟಕ್ಕೂ ನೀವು ಈ ಪದಗಳನ್ನು ಇಟ್ಟೇ ಪ್ರಸ್ತಾವನೆ ಪಾಸ ಮಾಡ್ತೀರಿ ಅಂದ್ರ ನನ್ನದೇನೂ ತಕರಾರಿಲ್ಲ. ನೀವು ಮಾಡ್ಕೋಳ್ರಿ. ಇದಕ್ಕ ನನ್ನೊಬ್ಬನದು ವಿರೋಧ ಅದ ಅಂತ ಅದರೊಳಗ ದಾಖಲಿಸಿದರ ಸಾಕು. ಯಾಕಂದ್ರ ನಾಳೆಯ ದಿನ ನಾನು ನನ್ನ ಹೆಣ್ತಿಗೆ ಜವಾಬ ಕೊಡ್ಬೇಕಾಗ್ತದ.'' ದೇಶಪಾಂಡೆಯವರ ಮಾತು ಸಾಧಾರವಾಗಿತ್ತು. ಅದನ್ನು ತಳ್ಳಿಹಾಕುವ ಹಾಗೇ ಇರಲಿಲ್ಲ. ಆದ್ದರಿಂದ 'ಸಚ್ಚಾರಿತ್ರ್ಯವುಳ್ಳ ಶ್ರೀಯುತರು ಒಬ್ಬ ಆದರ್ಶ ವ್ಯಕ್ತಿ' ಎಂಬ ಪದಗಳನ್ನೂ ಹೊಡೆದುಹಾಕಲಾಯಿತು.

ಕಾಂಟ್ರ್ಯಾಕ್ಟರ ನಾಡಾರರು ಹೊರಗೆ ಹೋಗಿ ತಾವು ಜಗಿಯುತ್ತಿದ್ದ ಜರ್ದಾದ ಉಗುಳನ್ನು ಉಗಿದು ಬಂದು ಬಾಯಿ ಒರೆಸಿಕೊಳ್ಳುತ್ತ ವಿಡಂಬನೆಯಿಂದ ನಗುತ್ತ ನುಡಿದರು: ''ಅವರ ಸಾವಿನಿಂದ ರಾಸೂರು ಅಷ್ಟೇಯಲ್ಲ, ಇಡೀ ರಾಜ್ಯನೇ ಅನಾಥವಾಗಿದೆ ಅಂತ ಬರೆದಿದ್ದೀರಲ್ಲ! ಇಲ್ಲಿ ನೋಡಿದರೆ ನಿಮಗ್ಯಾರಿಗೂ ಅನಾಥ ಪ್ರಜ್ಞೆ ಕಾಡುತ್ತಿದ್ದಂತೆ ಕಾಣೋದೇ ಇಲ್ಲ. ಅವರ ಸಾವಿನಿಂದ ಇಲ್ಲಿ ಯಾರು ಅನಾಥರಾಗಿದ್ದೀರೀ? ಆದ್ದರಿಂದ ಅನಾಥ ರಾದೆವು ಎಂದು ಬರೆಯೋದು ಢೋಂಗಿತನವಾಗುತ್ತದೆ. ಯೋಚನೆ ಮಾಡಿ ನೋಡ್ರಿ.''

''ಹೌದೌದು, ಅಂವಾ ಸತ್ತದ್ದರಿಂದ ಇಲ್ಲಿ ಯಾರು ಅನಾಥರಾಗ್ಯಾರ? ಆ ಹೇಳಿಕೇನೂ ಬ್ಯಾಡ'', ಒಕ್ಕೊರಲಿನಿಂದ ಅನೇಕ ಸದಸ್ಯರು ದನಿ ಎತ್ತರಿಸಿ ನುಡಿದರು.

''ಹಂಗಾದ್ರ, ಅವರ ಸಾವಿಗೆ ಈ ಕ್ಲಬ್ಬಿನ ಸದಸ್ಯರು ಸಂತಾಪ ಸೂಚಿಸ್ತಾರೆ ಅಂತ ಹೇಳೋದು ಆತ್ಮವಂಚನೆಯಾಗುತ್ತದೆ'' ನಾಡಾರರು ತಿಳಿಸಿದರು.

''ಹೌದೌದು, ನಾವು ಸಂತಾಪ ಅನ್ನೋ ಪದ ಬಳಸೋದು ಬ್ಯಾಡ'' – ಎಂದವು ಅನೇಕ ದನಿಗಳು.

''ಇದು ಫಾರ್ಮ್ಯಾಲಿಟಿ ರೀ,'' ಸುನಂದಾ ತಾಯಿ.

''ಇನ್ನೊಂದು ಕೊನೆಯ ಮಾತು.'' ನಾಡಾರರು ಸ್ವಲ್ಪ ಸುಧಾರಿಸಿಕೊಂಡು ನುಡಿದರು: ''ಅವರ ಆತ್ಮಕ್ಕೆ ಶಾಂತಿ ಕೊಡಲಿ ಅಂತ ಹೇಳಾವ್ರು ನಾವು ಯಾರು? ದೇವರೇನು ಆಳಾ ನಮ್ಮ ಮಾತು ಕೇಳಾಕ? ಅವರ ಕುಟುಂಬಕ್ಕ ನೆಮ್ಮದಿ ನೀಡುವ ವಿಚಾರನೂ ಅಷ್ಟೆ- ಕಾಲ ಮತ್ತು ಪರಿಸ್ಥಿತಿ ತಾನೇ ತಾನಾಗಿ ನೆಮ್ಮದಿ ತಂದುಕೊಡ್ತಾವ. ಇಲ್ಲಿ ನೋಡಿದ್ರೆ ಅವರ ಬಗ್ಗೆ ಇಲ್ಲಿ ಯಾರಿಗೂ ಆತ್ಮೀಯ ಭಾವನೆನೇ ಕಾಣೋದಿಲ್ಲ. ಅಂದ ಮೇಲೆ ಅವರ ಬಗ್ಗೆ ಪ್ರಾರ್ಥಿಸುವುದೇನಿದೆ?''

ತಮ್ಮ ಪರಿಶ್ರಮವೆಲ್ಲ ವ್ಯರ್ಥವಾಯಿತಲ್ಲ ಅಂತ ವಳಸಂಗಕರರ ಮುಖ ಇಂಗು ತಿಂದ ಮಂಗನಂತಾಯಿತು. ಎಲ್ಲ ಸದಸ್ಯರ ಅಪೇಕ್ಷೆ ಮತ್ತು ಸಲಹೆಯಂತೆ ಸಂತಾಪದ ಪ್ರಸ್ತಾವನೆಯನ್ನು ಪರಿಷ್ಕರಿಸಿದರು.

''ಎಲ್ಲಾ ತಿದ್ದಿದ್ದು ಆದ ಮೇಲೆ ಫೈನಲ್ಲಾಗಿ ಏನು ಉಳಿದಿದೆ ಅನ್ನೋದು ಒಮ್ಮೆ ಓದಿರಿ, ಮಿ. ವಳಸಂಗಕರರೆ'', ನಾಡಾರರು ಹೇಳಿದರು.

ವಳಸಂಗಕರರು ಓದಿದರು –

''ಕಳೆದ ಮಂಗಳವಾರ ರಾಸೂರಿನ ಶಾಸಕರು, ಫ್ರೀ ಲಾನ್ಸ್ ಕ್ಲಬ್ಬಿನ ಮಾಜಿ ಅಧ್ಯಕ್ಷರೂ ಆಗಿದ್ದಂಥ ಶ್ರೀಮಾನ ಗೋಪಿರಂಜನರು ಸತ್ತರು.''

''ಈಗ ಬರೋಬ್ಬರೀ ಆಯ್ತು ನೋಡ್ರಿ. ಅವರು ಸತ್ತಿದ್ದಕ್ಕೆ ನಮ್ಮದ್ಯಾರದೂ ತಕರಾರಿಲ್ಲ. ಅವರು ಸತ್ತರು ಎಂಬುದನ್ನು ನಾವು ಸರ್ವಾನುಮತದಿಂದ ಒಪ್ಪುತ್ತೇವೆ.'' – ಎಲ್ಲರೂ ಟೇಬಲ್ ಕುಟ್ಟಿ ಒಪ್ಪಿಗೆ ಸೂಚಿಸಿದರು.

**ಭಾಲಚಂದ್ರ ಜಯಶೆಟ್ಟಿ**
೧ ಸಿ - ೩೦೨, ಅಕ್ಮೆ ಹಾರ್ಮೋನಿ, ಹೊರ ವರ್ತುಳ ರಸ್ತೆ, ಬೆಳ್ಳಂದೂರು, ಬೆಂಗಳೂರು - ೫೬೦ ೧೦೩

# ರಕ್ತಲೇಪಿತ ಮೈಸೂರು ಇತಿಹಾಸ

## (‘ಬೆಟ್ಟದ ಅರಸು’ ನಾಟಕ ಪ್ರಯೋಗ ವಿಮರ್ಶೆ)

*ಮೈಸೂರಿನ ಸುಪ್ರಸಿದ್ಧ ಉಡುಗೆ - ತೊಡುಗೆಗಳ ಮಹಾಮನೆಯಂತೆ ಇರುವ ‘ಶ್ರೀ ರಾಜರಾಜೇಶ್ವರಿ ವಸ್ತ್ರಾಲಂಕಾರ’ದ ಬೆಳ್ಳಿ ಹಬ್ಬದ ಅಂಗವಾಗಿ ಸಂಸ ವಿರಚಿತ ‘ಬೆಟ್ಟದ ಅರಸು’ ನಾಟಕ ಪ್ರದರ್ಶಿತವಾಯಿತು. (ಸ್ಥಳ – ಕಲಾಮಂದಿರ, ಮೈಸೂರು; ನಿರ್ದೇಶನ: ಪ್ರೊ॥ ಎಚ್. ಎಸ್. ಉಮೇಶ್; ದಿನಾಂಕ ೨೫-೧೨-೨೦೧೧).*

ಇದರಲ್ಲಿ ಮೈಸೂರಿನ ಇತಿಹಾಸವೇ ಪ್ರಧಾನ ವಸ್ತು. ಸಂಸರ ಮುಂದಿನ ನಾಟಕಗಳಿಗೆ ಮೊದಲ ಮೆಟ್ಟಿಲಿನಂತಿರುವ ಈ ನಾಟಕದಲ್ಲಿ ಸಮಸ್ತ ‘ಸಂಸಗುಣ’ಗಳೂ ಮೇಳೈಸಿವೆ. ವಿಗಡ ವಿಕ್ರಮರಾಯ, ಅಂತೆಂಬರ ಗಂಡ, ಮಂತ್ರಶಕ್ತಿ ಮುಂತಾದ ನಾಟಕಗಳ ವಿಕಾಸದ ಮೊದಲ ರೂಪವೇ ‘ಬೆಟ್ಟದ ಅರಸು’. ರಂಜನೆ, ಉತ್ಪ್ರೇಕ್ಷೆ, ಅತಿಶಯೋಕ್ತಿಗಳಿಲ್ಲದೆ ವಸ್ತುನಿಷ್ಠ ಗಟ್ಟಿ ತಳಹದಿಯ ಮೇಲೆ ರಚಿತವಾದ ನಾಟಕವಿದು. ಭಾವುಕತೆಗೆ ಎಡೆಗೊಡದ ಇತಿಹಾಸದ ವಾಸ್ತವಿಕ ಸತ್ಯತೆಯನ್ನು ತೆರೆದು ತೋರಿಸುವುದು ಸಂಸರ ವಿಶೇಷತೆ. ಭಾಷೆ ಇಂದಿಗೆ ದೂರವೆನಿಸುವ ಮಾದರಿಯಲ್ಲಿದೆ. ದೀರ್ಘವಾಕ್ಯ, ಕಠಿಣ ಕನ್ನಡ, ಹಳೆಗಾಲದ ಶೈಲಿಗಳು ಪ್ರಯೋಗಕ್ಕೆ ಸವಾಲು ಹಾಕುತ್ತವೆ. ಸರಳಗೊಳಿಸಿದರೆ ಮೂಲ ಆಶಯ ಹಾಳಾಗುವ ಭಯ, ಸುಮ್ಮನಿದ್ದರೆ ಅರ್ಥವಾಗದ ಸಂಕಟ. ಹೀಗಾಗಿ ಬುದ್ಧಿವಂತ ನಿರ್ದೇಶಕ ಉಮೇಶ್ ಈ ಪ್ರಯತ್ನ ಮಾಡಿರುವುದು ಸ್ವಾಗತಾರ್ಹ.

‘ಬೆಟ್ಟದ ಅರಸು’ ಅಂದಿನ ಹದಗೆಟ್ಟ ರಾಜಕೀಯ ಸ್ಥಿತಿ-ಗತಿಗಳನ್ನು ಸಮರ್ಥವಾಗಿ ಚಿತ್ರಿಸಿದೆ. ಅರಸುತನದ ಅಧಿಕಾರಕ್ಕಾಗಿ ನಡೆಸುವ ಸಂಚು, ಹುನ್ನಾರ, ನೀತಿಯ ನೆಲೆಗಟ್ಟಿಲ್ಲದ ನೀಚ ರಾಜಕಾರಣ, ಕೊಲೆಗಡುಕತನದ ಕ್ಷುದ್ರ ಕೃತ್ಯಗಳು, ದ್ರೋಹ, ವಂಚನೆ ಇವೆಲ್ಲಾ ಇತಿಹಾಸದ ನಿಜವಾದ ಮುಖಗಳು. ಯಾವುದನ್ನೂ ಮುಚ್ಚಿಡದೆ, ಮರೆಮಾಚದೆ ಇರುವುದನ್ನು ಬಯಲು ಮಾಡುತ್ತದೆ ಈ ನಾಟಕ. ಮೈಸೂರು ದೊರೆಗಳ ೧೦ನೇ ಆಳ್ವಿಕೆಯ ಚಾಮರಾಜ ಒಡೆಯರ ಆಡಳಿತವೇ ಇಲ್ಲಿನ ಕಥಾವಸ್ತು. ಧೂರ್ತ ಹಾಗೂ ಚಾಣಾಕ್ಷರಾದ, ತಂತ್ರಗಾರಿಕೆಯಲ್ಲಿ ನಿಪುಣತೆಯನ್ನು ಹೊಂದಿದ ಹಳೆಯ ಹುಲಿಗಳಂತಿರುವ ಹಳೆಯ ಪೈಕದ ಮಂದಿ ತಮ್ಮ ಸ್ವಾರ್ಥ, ಲಾಭಗಳಿಗಾಗಿ ರಾಜನನ್ನು ಹಾದಿ ತಪ್ಪಿಸುತ್ತಾರೆ. ಮದ್ಯ, ಮಾನಿನಿಯರ ವಿಲಾಸಗಳಲ್ಲಿ ಮೈಮರೆಯುವಂತೆ ಮಾಡುತ್ತಾರೆ. ಇದನ್ನು ಕಂಡು ಕ್ರೋಧಗೊಳ್ಳುವ ಸತ್ಯನಿಷ್ಠ ಬೆಟ್ಟದ ಅರಸು ದೊಡ್ಡ ಹೋರಾಟವನ್ನೇ ನಡೆಸುತ್ತಾನೆ. ಅಂದಿನ ಪ್ರಮುಖ ಆಡಳಿತ ಕೇಂದ್ರವಾದ ಶ್ರೀರಂಗಪಟ್ಟಣದಲ್ಲಿ ಇಲ್ಲಿನ ಬಹಳಷ್ಟು ಘಟನೆಗಳು ಜರುಗುತ್ತವೆ. ಅವನ ಎಲ್ಲಾ ಹೋರಾಟಗಳು ಪ್ರವಾಹದ ವಿರುದ್ಧ ಈಜಿದಂತೆ ವಿಫಲವಾಗುತ್ತವೆ. ರಂಗಪ್ರವೇಶ ಮಾಡಿದ ವಿಕ್ರಮರಾಯ ತನ್ನೆಲ್ಲಾ ಚಾಣಕ್ಯನೀತಿ ಬಳಸಿ ಬೆಟ್ಟದ ಅರಸನನ್ನು ಬಗ್ಗುಬಡಿಯುತ್ತಾನೆ. ಹಳೆಯ ಪೈಕದವರೊಂದಿಗೆ ಕೈಜೋಡಿಸಿ ಕಡೆಗೆ ಅವರ ದೌರ್ಬಲ್ಯವನ್ನೇ ತಿರುಗುಬಾಣ ಮಾಡಿ ಎಲ್ಲರನ್ನೂ ನಿಶ್ಶೇಷಿತಗೊಳಿಸುತ್ತಾನೆ. ಸರ್ವಾಧಿಕಾರಿಯಾಗಿ ವಿಜೃಂಭಿಸಿ ಬೆಟ್ಟದ ಅರಸುವನ್ನು ಸೆರೆಗೆ ತಳ್ಳುತ್ತಾನೆ. ಅವನ ಜನರನ್ನು ಶಿರಚ್ಛೇದನಕ್ಕೆ ಒಳಪಡಿಸುತ್ತಾನೆ. ಈ ರೀತಿ ಅಧಿಕಾರಕ್ಕಾಗಿ ನಡೆದ ಯುದ್ಧದಲ್ಲಿ ಸತ್ಯದ ಧ್ವನಿ ಅಡಗಿಹೋಗುತ್ತದೆ !

ಹಿನ್ನೆಲೆ ಸಂಗೀತ ಸುಶ್ರಾವ್ಯವಾಗಿದೆ. ಆದರೆ ಅತಿ ಅಬ್ಬರದಿಂದ ನಾಟಕದ ಹದವನ್ನೇ ಹಾಳುಮಾಡುತ್ತದೆ. ಸಂಗೀತದ ಆರ್ಭಟದಿಂದ ಹಲವೊಮ್ಮೆ ಸಂಭಾಷಣೆಗಳೇ ಕೇಳುವುದಿಲ್ಲ. ಪಾತ್ರಧಾರಿಗಳಲ್ಲಿ ಹಲವರು ಮಾತು ಮರೆತಂತೆ, ತಡಕಾಡಿದಂತೆ ಭಾಸವಾಗುತ್ತಿತ್ತು. ಅನಗತ್ಯ ಅಬ್ಬರದ ಅಭಿನಯ ಅಲ್ಲಲ್ಲಿ ಕಾಣುತ್ತಿತ್ತು. ಗುಂಪು ದೃಶ್ಯಗಳಲ್ಲಿ ಹೊಂದಾಣಿಕೆ ಬೇಕೆನಿಸಿತು. ಕಲಾವಿದರೆಲ್ಲಾ ಉತ್ತಮವಾಗಿ ನಟಿಸಲು ಯತ್ನಿಸಿದ್ದು ವಿಶೇಷ. ನಾಟಕದ ಅಭಿನಯದ ಹೈಲೈಟ್ ಎಂದರೆ ಬೆಟ್ಟದ ಅರಸು ಪಾತ್ರದ ರಾಜಶೇಖರ ಕದಂಬರ ಪರಿಪಕ್ವ ಪ್ರೌಢಾಭಿನಯ. ಇದು ಅವರ ಅಭಿನಯ ಜೀವನದ ವಿಶಿಷ್ಟ ಪ್ರಯೋಗ ಎನ್ನಬಹುದು. ತಮ್ಮ ಹೃದಯಸ್ಪರ್ಶಿ ಅಭಿನಯದಿಂದ ಎಲ್ಲರ ಮನ ಗೆದ್ದರು. ಚಾಮರಾಜ ಒಡೆಯರ್ ಆಗಿ ಧನಂಜಯ ಪ್ರಭಾವಶಾಲಿಯಾಗಿ ಕಾಣುತ್ತಿದ್ದರು. ಆದರೆ ಅಲ್ಲಲ್ಲಿ ಆರ್ಭಟಿಸಿದ ಶೈಲಿ ಅನಗತ್ಯ ಎನಿಸಿತು. ಹೆಚ್ಚು ಅವಕಾಶವಿಲ್ಲದಿದ್ದರೂ ಇರುವ ಸಾಧ್ಯತೆಗಳನ್ನೇ ಬಳಸಿಕೊಂಡು ರಣಧೀರನ ಪಾತ್ರಕ್ಕೆ ಪ್ರವೀಣ್ ಕುಮಾರ್ ಜೀವ ತುಂಬಿದರು. ರಂಗನಾಥ ದೀಕ್ಷಿತ್‌ನಾಗಿ ದ್ವಾರಕನಾಥ ಪ್ರೌಢಾಭಿನಯ ನೀಡಿದರು. ನಾಟಕದ ಕೇಂದ್ರ ಪಾತ್ರವಾದ ವಿಕ್ರಮರಾಯನಾಗಿ ಮಂಜು ಆರ್. ಉಪಾಧ್ಯಾಯರ ಅಭಿನಯ ಸಾಲದು ಎನಿಸಿತು. ಅದ್ಭುತ ಚಾಣಾಕ್ಷ, ತಂತ್ರಗಾರಿಕೆ ನಿಪುಣ ಹಾಗೂ ಖಳನಾಯಕತನದ ಎಲ್ಲಾ ಅಂಶಗಳನ್ನು ಮೈಗೂಡಿಸಿಕೊಂಡಿರುವ ಪ್ರಧಾನ ಪಾತ್ರವಿದು. ಪರಕಾಯ ಪ್ರವೇಶ ಮಾಡದಿದ್ದಲ್ಲಿ ಪಾತ್ರ ಮಾತ್ರವಲ್ಲದೆ ಇಡೀ ನಾಟಕವೇ ಕುಸಿದುಬೀಳುತ್ತದೆ.

ರಂಗಸಜ್ಜಿಕೆ, ಪರಿಕರ, ವಿನ್ಯಾಸಗಳು ತುಂಬ ಸೊಗಸಾಗಿದ್ದವು. ನೋಡುಗರನ್ನು ಚಾಮರಾಜ ಒಡೆಯರ್ ಕಾಲಕ್ಕೆ ಕರೆದೊಯ್ದ ಅನುಭವವಾಯಿತು (ಆಟೋ ವಿಶ್ವನಾಥ್ ಹಾಗೂ ಗೆಳೆಯರು). ಉಡುಗೆ-ತೊಡುಗೆಗಳು ರಾಜರಾಜೇಶ್ವರಿ ವಸ್ತ್ರಾಲಂಕಾರದ ಘನತೆಗೆ ತಕ್ಕಂತಿದ್ದವು. ಶ್ರೇಷ್ಠಮಟ್ಟದ ವಸ್ತ್ರವಿನ್ಯಾಸ ಇತಿಹಾಸದ ಪಾತ್ರಗಳನ್ನು ಪುನರುಜ್ಜೀವನಗೊಳಿಸಿದವು. ಪ್ರಸಾಧನವು ಪಾತ್ರಗಳ ವೈಶಿಷ್ಟ್ಯತೆ ಹಾಗೂ ಭಿನ್ನತೆಗಳನ್ನು ಎತ್ತಿ ಹಿಡಿಯಿತು. ರವೀಶರ ಬೆಳಕು ನಾಟಕವನ್ನು ಕತ್ತಲು ಕವಿಯದಂತೆ ನೋಡಿಕೊಂಡಿತು. ವೈವಿಧ್ಯಮಯ ಬೆಳಕಿನ ಬಳಕೆ ನಾಟಕದ ಕಳೆಯನ್ನು ಹೆಚ್ಚಿಸಿತು.

**ಪ್ರೊ॥ ಸಿ. ವಿ. ಶ್ರೀಧರ ಮೂರ್ತಿ**

ಕನ್ನಡ ವಿಭಾಗ ಮುಖ್ಯಸ್ಥರು, ಸಂತ ಫಿಲೋಮಿನಾ ಪದವಿ ಕಾಲೇಜು, ಮೈಸೂರು - ೫೭೦ ೦೧೫






**ಶೈವತತ್ವ**

*ಸದಾಶಿವಯೋಗಿ*

**ಪುಟ : xx + ೮೦**

**ಬೆಲೆ : ರೂ. ೭೫**

**ಶ್ರೀ ಗುರುಕುಲ ಪ್ರಕಾಶನ**

ಸಿಡ್ಲೇಹಳ್ಳಿ ಮಹಾಸಂಸ್ಥಾನ
ಶ್ರೀಮಠ, ವೀರಶೈವ
ಗುರುಕುಲಾನಂದಾಶ್ರಮ
ತಿಪಟೂರು - ೫೭೨ ೨೦೨

ಇದು ಹಂಪಿಯ ಶಿವಾನಂದ ಯೋಗಾಶ್ರಮದ ಸದಾಶಿವಯೋಗಿಯವರ ಚಿಂತನಶೀಲ ಕೃತಿ. ಮನುಷ್ಯ ತನ್ನ ಜೀವನದಲ್ಲಿ ಶೈವತತ್ವವನ್ನು ಅಳವಡಿಸಿಕೊಂಡು ಶಾಶ್ವತ ಶಾಂತಿ, ಜ್ಞಾನ ಮತ್ತು ಆನಂದವನ್ನು ಪಡೆಯಬಹುದೆಂಬುದು ಈ ಕೃತಿಯ ಸಂದೇಶ. ತನ್ನೊಳಗೆ ಅಂತರ್ಗತವಾಗಿರುವ ಪ್ರಾಣಚೈತನ್ಯವನ್ನು ದೇಹದ ಒಳಕ್ಕೂ ಹೊರಕ್ಕೂ ಪ್ರಕೃತಿಗೆ ಅನುಗುಣವಾಗಿ ಶ್ವಾಸೋಚ್ಛ್ವಾಸದ ಮೂಲಕ ನಿಯಂತ್ರಿಸುತ್ತ ಪ್ರಾಣಾಯಾಮದಿಂದ ದೇಹ ಸ್ವಾಸ್ಥ್ಯ ಕಾಪಾಡಿಕೊಂಡು ಬರುವುದು ಮುಖ್ಯ. ಬಾಹ್ಯ ಆಕರ್ಷಣೆಗಳಿಂದ ಮನಸ್ಸು ಚಂಚಲಗೊಂಡು ವಿಚಲಿತವಾಗದಿರಲು ಮನಸ್ಸನ್ನು ಅಂತರ್ಮುಖಿಯಾಗಿಸಿ ಸಾಧನೆ ಮಾಡಿದರೆ ಶ್ರೇಷ್ಠಜ್ಞಾನವನ್ನು ಪಡೆದು ಯೋಗಿ ಎನಿಸುತ್ತಾನೆ. ಇಲ್ಲಿ ಯೋಗ ಮತ್ತು ಪ್ರಾಣಾಯಾಮಗಳದ್ದೇ ಮೇಲುಗೈ. ಶೈವಧರ್ಮ ಮತ್ತು ವೈದಿಕ ಧರ್ಮದ ವ್ಯತ್ಯಾಸಗಳನ್ನು ಸರಿಯಾಗಿ ಗುರುತಿಸಿ ಯಾವುದೇ ಯಜ್ಞ - ಯಾಗ - ಅರ್ಥವಿಲ್ಲದ ಮಂತ್ರೋಚ್ಚಾರಣೆ - ಕರ್ಮಸಿದ್ಧಾಂತಗಳಿಂದ ಯಾವುದೇ ಸಿದ್ಧಿಯಾಗಲಾರದೆಂದು ಇಲ್ಲಿನ ಅಭಿಮತ. ಶೈವತತ್ವದ ವಿವರಣೆ, ಶೈವ ಲಾಂಛನಗಳ ಬಗ್ಗೆ, ಮೌಲಿಕ ಹೇಳಿಕೆಯಿದೆ. ''ಲೋಕದಲ್ಲಿ ನೀನು ಏನನ್ನು ಹುಡುಕುತ್ತಿದ್ದೀಯೋ ಅದೆಲ್ಲವೂ ನಿನ್ನಲ್ಲೇ ಅಂತರ್ಗತವಾಗಿ ಸೂಕ್ಷ್ಮರೂಪದಲ್ಲಿದೆ; ನಿನ್ನಲ್ಲಿಲ್ಲದ ಯಾವುದನ್ನೂ ನೀನು ಹೊರಜಗತ್ತಿನಲ್ಲಿ ಕಾಣಲಾರೆ'' ಎಂಬ ಪರಮಸತ್ಯವನ್ನು ಪ್ರತಿಪಾದಿಸಲಾಗಿದೆ. ಅಧ್ಯಾತ್ಮದಲ್ಲಿನ ವೈಚಾರಿಕ ಎಳೆಗಳನ್ನಿಲ್ಲಿ ವಿವರಿಸಲಾಗಿದೆ. ಸದಾಶಿವಯೋಗಿಗಳು ಬರೆದಿರುವ ''ಭಾರತೀಯರಿಗೆ ಭಗವಂತರೆಷ್ಟು?'' ಎಂಬ ವೈಚಾರಿಕ ಕೃತಿಯನ್ನು ನವಕರ್ನಾಟಕ ಪ್ರಕಟಿಸಿದೆ.

**ವರ್ಣ ಮಾಯಾಜಾಲ (ಒಂದು ವೈಜ್ಞಾನಿಕ ವಿಶ್ಲೇಷಣೆ)**

*ಡಾ|| ಎನ್. ಎಸ್. ಲೀಲಾ*

**ಪುಟ : ೧೪೪** **ಬೆಲೆ : ರೂ. ೪೭೫**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ
ಅಂಚೆ ಪೆಟ್ಟಿಗೆ ಸಂಖ್ಯೆ ೫೧೪೫, ಬೆಂಗಳೂರು - ೫೬೦ ೦೦೧

ಬಣ್ಣವಿಲ್ಲದೆ ಯಾವ ವಸ್ತುವೂ ಇಲ್ಲ. ಎಲ್ಲಿ ನೋಡಿದರೂ ಬಣ್ಣವೇ. ಈ ಬಣ್ಣಗಳೆಲ್ಲಿಂದ ? ಅಚ್ಚ ಬಿಳುಪಾದ ಸೂರ್ಯನಿಂದ ಬರುವ ಬೆಳಕಿನ ಕಿರಣ ವಿಭಜನೆಯಾದಾಗ ಕಾಮನಬಿಲ್ಲಿನ ಏಳು ಬಣ್ಣಗಳು ಕಾಣಿಸುತ್ತವೆ. ಅವೆಲ್ಲ ಸಮ್ಮಿಶ್ರವಾದಾಗ ಮತ್ತೆ ಬಿಳಿಯ ಬಣ್ಣ! ಅದ್ಭುತವಲ್ಲವೆ ? ಪ್ರಕೃತಿಯಲ್ಲಿ ನೂರಾರು ಬಣ್ಣಗಳಿದ್ದು ಹೂವು - ಎಲೆ - ಹಣ್ಣು - ಪ್ರಾಣಿ - ಪಕ್ಷಿಗಳು ಮುಂತಾಗಿ ಎಲ್ಲವೂ ವರ್ಣಮಯ ಜಗತ್ತೇ. ಬಟ್ಟೆ, ಆಟಿಕೆ ಮುಂತಾದ ಕೈಗಾರಿಕೆಗಳು ಬಣ್ಣವನ್ನು ಮರೆತರೆ, ಪುಸ್ತಕೋದ್ಯಮವು ಪುಟಗಳನ್ನು ಬಣ್ಣದಲ್ಲಿ ಮುದ್ರಿಸದಿದ್ದರೆ ಗ್ರಾಹಕರನ್ನು ತಲುಪಲು ವಿಫಲರಾಗಬಹುದು. ವರ್ಣಸಂಯೋಜನೆಯು ವೈಜ್ಞಾನಿಕ ತಳಹದಿಯ ಮೇಲೆ ಆಧಾರಿತವಾಗಿದೆ. ಕಣ್ಣುಗಳ ಮೂಲಕ ಮಿದುಳು ಗ್ರಹಿಸಿ ನಮಗೆ ಬಣ್ಣಗಳ ಲೋಕದ ಅರಿವಾಗುತ್ತದೆ. ಇಂಥ ಅತ್ಯವಶ್ಯವಾದ ಸುಂದರ ಮಾಯಾಲೋಕವನ್ನು ತಿಳಿಯಲು ನೀವು ಈ ಪುಸ್ತಕವನ್ನು ಓದಲೇಬೇಕು. ಪುಟ ತೆರೆದಲ್ಲೆಲ್ಲ ಕಣ್ಣಿನ ತಣಿಸುವ ವರ್ಣಚಿತ್ರಗಳಿಂದ ಶೋಭಿಸುವ ಇದು ಬಣ್ಣಗಳ ಬಗ್ಗೆ ವಿವರವಾದ ಮಾಹಿತಿ ಒದಗಿಸುತ್ತದೆ. ಸಚಿತ್ರ ವಿವರಣೆ ನೀಡಿ ನಮ್ಮನ್ನು ಸ್ವಪ್ನಲೋಕಕ್ಕೆ ಕರೆದೊಯ್ಯುವ ಈ ಕೃತಿ ರಚಿಸಿಕೊಟ್ಟವರು ಡಾ|| ಎನ್. ಎಸ್. ಲೀಲಾ. ಬೆಂಗಳೂರಿನ ಎಮ್.ಇ.ಎಸ್. ಕಾಲೇಜಿನಲ್ಲಿ ಪ್ರಾಧ್ಯಾಪಕಿ, ಪ್ರಾಣಿಶಾಸ್ತ್ರ ವಿಭಾಗದಲ್ಲಿ ಮುಖ್ಯಸ್ಥೆಯಾಗಿ ನಿವೃತ್ತರು. ಇವರಿಗೆ 'ಅನುಪಮ ವಿಜ್ಞಾನ ಶಿಕ್ಷಕಿ' ಮತ್ತು 'ಸಮುದಿತ' ಪ್ರಶಸ್ತಿಗಳು ಸಂದಿವೆ. ರಾಷ್ಟ್ರೀಯ - ಅಂತರರಾಷ್ಟ್ರೀಯ ವಿಜ್ಞಾನ ಸಮ್ಮೇಳನಗಳಲ್ಲಿ ಪ್ರಬಂಧ ಮಂಡಿಸಿದ್ದಾರೆ.




**ಮುಳ್ಳುಗಳ್ಳಿ**

*ಹಿಂದಿ ಮೂಲ : ರೂಪನಾರಾಯಣ ಸೋನಕರ; ಕನ್ನಡಕ್ಕೆ : ಆರ್. ಪಿ. ಹೆಗಡೆ*

**ಪುಟ : ೨೦೮** **ಬೆಲೆ : ರೂ. ೧೦೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ
ಅಂಚೆ ಪೆಟ್ಟಿಗೆ ಸಂಖ್ಯೆ ೫೧೪೫, ಬೆಂಗಳೂರು - ೫೬೦ ೦೦೧

ಕಳೆದ ಶತಮಾನದ ಪೂರ್ವಾರ್ಧದಲ್ಲಿ ದಲಿತರಿಗೆ ಮೇಲ್ವರ್ಗದವರು ನೀಡಿದ ಕಿರುಕುಳ - ಹಿಂಸೆ - ದೌರ್ಜನ್ಯಗಳು ಅಷ್ಟಿಷ್ಟಲ್ಲ. ಅಂಬೇಡ್ಕರ್ ದಲಿತರ ದನಿಯಾಗಿ ಬಂದು ಸಮಾನತೆಯ ಕಹಳೆಯೂದಿ ಪ್ರತಿಭಟಿಸದಿದ್ದಲ್ಲಿ ಅವರ ನೋವು - ಅವಮಾನಗಳೆಲ್ಲ ಸ್ವಲ್ಪವೂ ಕಡಿಮೆಯಾಗುತ್ತಿರಲಿಲ್ಲ. ಹೆಜ್ಜೆ ಹೆಜ್ಜೆಗೂ ಕಳ್ಳಿಗಿಡದ ಮುಳ್ಳಿನಂತೆ ಚುಚ್ಚಿ ಚುಚ್ಚಿ ನೋಯಿಸುತ್ತಿದ್ದ ಹಿಂಸೆ ಮತ್ತು ಅಪಮಾನವನ್ನು ಸಹಿಸುತ್ತಲೇ ಸವರ್ಣೀಯರ ಕುಟಿಲಗಳಿಗೆ ದಿಟ್ಟ ಉತ್ತರ ನೀಡಿ ಕವಿ-ಸಾಹಿತಿಯಾಗಿ ಬೆಳೆದುನಿಂತವರು ಶ್ರೀ ರೂಪನಾರಾಯಣ ಸೋನಕರ. ತಾವು ಸ್ವತಃ ಅನುಭವಿಸಿದ ಆ ನೋವು ಹೇಗಿತ್ತೆಂದು ಈ ಆತ್ಮಕಥನದಲ್ಲಿ ನಿರೂಪಿಸಿದ್ದಾರೆ. ಮೇಲ್ವರ್ಗದವರ ಅಸಂಬದ್ಧ ನಿಯಮಗಳು, ಅಮಾನುಷ ವರ್ತನೆಗಳಿಂದ ದಿಕ್ಕೆಟ್ಟು ಕಂಗಾಲಾದ ಹಸಿ- ಬಿಸಿ ಘಟನೆಗಳನ್ನು ಸ್ಮರಿಸಿದ್ದಾರೆ. ಹೀಗೆ ನಡೆಸಿಕೊಂಡ ಸಮಾಜದ ಮೇಲೆ ಇವರಿಗೆ ರೋಷ - ದ್ವೇಷ - ಸಿಟ್ಟು - ಸೆಡವು - ಅಗೌರವ ಎಲ್ಲವೂ ಇವೆ. ಜಾತೀಯತೆಯ ಕರಾಳ ಹಸ್ತ ಎಷ್ಟು ಪ್ರಬಲವಾಗಿತ್ತೆಂದರೆ - ಸೇಡು ತೀರಿಸಿಕೊಳ್ಳಲು ಅವಕಾಶಕ್ಕಾಗಿ ಕಾಯುತ್ತಿದ್ದ ಲೇಖಕರ ಸಹೋದರನಿಂದ ಈ ಪುಸ್ತಕದ ಪುಟ ೨೦-೨೧ರಲ್ಲಿ ವರ್ಣಿಸಿದಂತೆ ವಿಕೃತ ಮನಸ್ಸಿನ ತೃಪ್ತಿಗಾಗಿ ಮಾಡಬಾರದ ಕೆಲಸವೊಂದನ್ನು ಮಾಡಿಸಿತು. ಕಾದ ಕಬ್ಬಿಣಕ್ಕೆ ಹಲವು ಪೆಟ್ಟುಗಳು ಬಿದ್ದಾಗ ಅದು ಹರಿತವಾದ ಒಂದು ಆಯುಧವಾಗಿ ಮಾರ್ಪಡುತ್ತದೆಂಬ ವಿವರಣೆಯನ್ನೂ ಲೇಖಕರು ನೀಡಿದ್ದಾರೆ. ಈ ಆತ್ಮಕಥೆ ಮರಾಠಿಯ ಉತ್ತಮ ದಲಿತ ಆತ್ಮಕಥೆಗಳಲ್ಲೊಂದೆಂದು ಅಭಿಪ್ರಾಯಪಡಲಾಗಿದೆ. ಮರಾಠಿಯಲ್ಲಿನ ಇತರ ದಲಿತರ ಆತ್ಮಚರಿತ್ರೆಗಳನ್ನು ನವಕರ್ನಾಟಕ ಪ್ರಕಟಿಸಿದೆ.

**ಮರಾಠಿ ವಾಙ್ಮಯ ವಿಹಾರ**

*ರತ್ನಾಕರ ಶೆಟ್ಟಿ*

**ಪುಟ : xii + ೧೬೧** **ಬೆಲೆ : ರೂ. ೨೦೦**

**ಅಭಿಜಿತ್ ಪ್ರಕಾಶನ,** ಎ - ೪೦೪, ವಿನಾಯಕ್ ಆಶೀಶ್, ಎಂ.ಎಂ.ಎಂ. ರಸ್ತೆ, ಪಿ ಅಂಡ್ ಟಿ ಕಾಲೋನಿ ಹತ್ತಿರ, ಮುಲುಂಡ್ (ಪ.), ಮುಂಬಯಿ - ೮೦




ಮಹಾರಾಷ್ಟ್ರ - ಕರ್ನಾಟಕದ ಸಾಹಿತ್ಯ ಬಾಂಧವ್ಯವು ಇಂದು ನಿನ್ನೆಯದಲ್ಲ. ಮರಾಠಿ ಭಾಷೆಯ ಸಾಹಿತ್ಯ - ಸಂಸ್ಕೃತಿ - ರಂಗಭೂಮಿ, ಚಿತ್ರಕಲೆ ಎಲ್ಲವೂ ನಮಗೆ ಅಪರೂಪವೇನಲ್ಲ. ಪರಸ್ಪರ ಸಾಹಿತ್ಯದ ಅನುವಾದಗಳು ವಿಪುಲವಾಗಿ ಬಂದಿವೆ. ಇಂಥ ಸಾಹಿತ್ಯ ವಿನಿಮಯಕ್ಕೆ ಕೆಲವು ವರ್ಷಗಳ ಹಿಂದೆ ಮುಂಬಯಿ ಮಹಾನಗರಿಗೆ ವಲಸೆಹೋದ ಕರ್ನಾಟಕದ - ಮುಖ್ಯವಾಗಿ ಕರಾವಳಿ ಪ್ರದೇಶದ – ಕನ್ನಡಿಗರು ಸ್ವಲ್ಪ ಮಟ್ಟಿಗೆ ಕಾರಣವೆನ್ನಬಹುದು. ಶರಣಕುಮಾರ ಲಿಂಬಾಳೆ, ಲಕ್ಷ್ಮಣ ಗಾಯಕವಾಡ್, ರೂಪ ನಾರಾಯಣ ಸೋನಕರ, ಬೇಬಿತಾಯಿ ಕಾಂಬಳೆ ಇವರ ಆತ್ಮಕಥೆಗಳನ್ನು ನವಕರ್ನಾಟಕ ಕನ್ನಡದಲ್ಲಿ ಅನುವಾದಿಸಿ ಪ್ರಕಟಿಸಿದೆ. ಮರಾಠಿಯ ಕೆಲವು ಪ್ರಸಿದ್ಧರ ಕತೆಗಳನ್ನು ಕನ್ನಡಕ್ಕೆ ಅನುವಾದಿಸಿದ ಶ್ರೀ ರತ್ನಾಕರ ಶೆಟ್ಟಿಯವರು ಮಹಾರಾಷ್ಟ್ರದ ಕೆಲವು ಲೇಖಕರನ್ನೂ ಕೃತಿಗಳನ್ನೂ ಪರಿಚಯಿಸುತ್ತ ಈ ಪುಸ್ತಕದಲ್ಲಿ ಒಂದು ಸಾಹಿತ್ಯಿಕ ವೈಭವದ ದರ್ಶನ ಮಾಡಿಸುತ್ತಾರೆ. ಜೀವಿತದ ಬಹುಕಾಲವನ್ನು ಮುಂಬಯಿಯಲ್ಲಿ ಕಳೆದ ಲೇಖಕರು ಅಲ್ಲಿನ ವಿದ್ಯಮಾನಗಳನ್ನೆಲ್ಲ ಹತ್ತಿರದಿಂದ ಬಲ್ಲವರು. ಪ್ರಸಿದ್ಧ ಸಾಹಿತಿಗಳ ಒಡನಾಟದಲ್ಲಿದ್ದವರು. ಅಲ್ಲದೆ ಮರಾಠಿಯ ಉತ್ತಮ ಸಾಹಿತ್ಯವನ್ನು ಓದಿಕೊಂಡವರು. ಇವರ ಆಯ್ಕೆಯ ವಿಷಯಗಳು ಬಹು ವಿಸ್ತಾರವಾಗಿದ್ದು ವಿವಿಧ ಮಾಹಿತಿಗಳಿಂದ ತುಂಬಿವೆ.

## ಕನ್ನಡದ ಮೋಡಿಲಿಪಿ ಸಂರಚನೆ ಮತ್ತು ಸಂವರ್ಧನೆ

*ಡಾ|| ವೀರೇಶ ಬಡಿಗೇರ*

**ಪುಟ : xx + ೧೪೦** **ಬೆಲೆ : ರೂ. ೮೦**

**ಪ್ರಸಾರಾಂಗ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬

ಸಾಮಾನ್ಯವಾಗಿ ಮೋಡಿ ಲಿಪಿ ಎಂದರೆ ಓದಲಾಗದ ಅಕ್ಷರಗಳೆಂದು ತಿಳಿಯುತ್ತೇವೆ. ಕೆಲವು ಡಾಕ್ಟರರು ಬರೆದುಕೊಡುವ ಔಷಧದ ಪ್ರಿಸ್‌ಕ್ರಿಪ್ಶನ್‌ನಂತೆ! ಒಬ್ಬೊಬ್ಬರ ಹಸ್ತಬರವಣಿಗೆ ಒಂದೊಂದು ತರಹ. ಇಂದಿನಂತೆ ಟೈಪ್‌ರೈಟರ್ - ಕಂಪ್ಯೂಟರ್‌ಗಳಿಲ್ಲದ ಪ್ರಾಚೀನ ಕಾಲದಲ್ಲಿ ಎಲ್ಲವೂ ಕೈಬರಹದಲ್ಲೇ ದಾಖಲಾಗುತ್ತಿತ್ತು. ಮಹಾ ಮಹಾ ಗ್ರಂಥಗಳೆಲ್ಲ ಹಸ್ತಪ್ರತಿಗಳಲ್ಲೇ ಇದ್ದವೆಂದರೆ ಈಗಿನ ಜನ ಮೂಗಿಗೆ ಬೆರಳೇರಿಸುತ್ತಾರೆ. ಇದೀಗ ಕನ್ನಡಕ್ಕೆ ಶಾಸ್ತ್ರೀಯ ಭಾಷೆ ಸ್ಥಾನಮಾನ ದೊರಕಿದ್ದು ಭಾಷಾಭಿವೃದ್ಧಿ ಕಾರ್ಯಕ್ರಮಗಳಿಗೆ ವಿಶೇಷ ಚಾಲನೆ ದೊರೆತಿದೆ. ಕನ್ನಡ ಭಾಷೆಯ ಸಾಹಿತ್ಯ, ಶಾಸನ, ಇತಿಹಾಸ, ಹಸ್ತಪ್ರತಿಗಳ ಅಧ್ಯಯನ – ಸಂಶೋಧನೆ ನಡೆಯುತ್ತಿದೆ. ಅಂತೆಯೇ ಕನ್ನಡ ಮೋಡಿಲಿಪಿಯನ್ನೋದುವ ಅತ್ಯಂತ ಕ್ಲಿಷ್ಟಕಾರ್ಯವೂ ಇದರಲ್ಲಿ ಸೇರಿದೆ. ಲಿಪಿ ಮೋಡಿಯಾಗಿರುವುದು ಕೈಬರಹದ ಸಹಜ ಲಕ್ಷಣವೇ ಅಥವಾ ಅನೇಕ ರಹಸ್ಯ ದಾಖಲೆಗಳನ್ನು ಕಾಪಾಡಲು ಹಾಗೊಂದು ಲಿಪಿಯ ಅವಶ್ಯಕತೆಯಿತ್ತೇ ಎಂಬುದು ಕೂಡ ಚರ್ಚೆಯಾಗಬೇಕಾದ ವಿಷಯ. ಮೋಡಿ ಬರಹ ರಾಜಾಜ್ಞೆಗಳನ್ನು ಬರೆಯುವ ಸಂದರ್ಭದಲ್ಲೂ ಬಳಕೆಯಾಗುತ್ತಿತ್ತಂತೆ.




ಮೋಡಿ ಒಂದು ಭಾಷೆಯೇ ಅಥವಾ ಒಂದು ಲಿಪಿಯೇ ಎನ್ನುವುದು ಕೂಡ ಸಂಶೋಧನೆಯಾಗಬೇಕಿದೆ. ಎಲ್ಲಾ ಭಾಷೆಗಳಲ್ಲೂ ಬಹಳ ಅವಸರವಸರವಾಗಿ ಬರೆದಾಗ ಆಯಾ ಭಾಷೆಯ ಮೋಡಿ ಅಕ್ಷರಗಳೇ ಮೂಡುತ್ತಿವೆ. ಒಂದು ಅನುಕೂಲಕ್ಕಾಗಿ ಸಂರಚಿಸಿ - ಸಂವರ್ಧನೆಗೊಳಿಸಿದ ಈ ರಹಸ್ಯವೊಂದನ್ನು ಇಲ್ಲಿ ವಿಸ್ತಾರವಾಗಿ ಅಧ್ಯಯನ ಮಾಡಲಾಗಿದೆ. ಕೃತಿ ರಚಿಸಿದ ವೀರೇಶ ಬಡಿಗೇರ ಕನ್ನಡ ಮತ್ತು ಮರಾಠಿ ಭಾಷೆಯಲ್ಲಿನ ಈ ಮೋಡಿಲಿಪಿಯನ್ನು ಸಂಗ್ರಹಿಸಿ ಇದನ್ನೊಂದು ಆಕರಗ್ರಂಥವನ್ನಾಗಿ ಮಾಡಿದ್ದಾರೆ.

## ಇಗೋ ಅರಿವೆ (ಕವನಗಳು)

*ವಸಂತ ಬನ್ನಾಡಿ*

**ಪುಟ : ೩೨ + ೧೨೪** **ಬೆಲೆ : ರೂ. ೧೦೦**

**ತಿಂಗಳ ಬೆಳಕು ಪ್ರಕಾಶನ,** ವಡೇರಹೋಬ್ಳಿ, ವಿಟ್ಠಲವಾಡಿ ಕುಂದಾಪುರ - ೫೭೬ ೨೦೧

ಇವು ವಸಂತ ಬನ್ನಾಡಿ ಬರೆದ ಕವನಗಳು. ಪದ್ಯಗಳು ಪ್ರಾರಂಭವಾಗುವ ಮುನ್ನ ಬರೆದ ''ಮುನ್ನುಡಿಗೆ ಬದಲಾಗಿ'' ಎಂಬ ಮುನ್ನರಿವು ನೀಡುವ ಅನಿಸಿಕೆಗಳು ಅತ್ಯಂತ ಸೊಗಸಾಗಿವೆ. ಪದ್ಯಗಳನ್ನು ಅರ್ಥೈಸಲು ಸಹಾಯಕವಾಗಿವೆ. ನಮ್ಮ ಕವಿಗಳು - ಪಾಶ್ಚಾತ್ಯಕವಿಗಳೆಂಬ ಅದ್ಭುತ ತುಲನೆಯೊಂದನ್ನು ಸದಾ ಜಾಗ್ರತವಾಗಿಟ್ಟುಕೊಂಡು ಇವರು ಕವನಗಳನ್ನು ಬರೆದಿದ್ದಾರೆ. ಎಡಪಂಥ - ಬಲಪಂಥೀಯರನ್ನು ಇಕ್ಕೆಲಗಳಲ್ಲಿಟ್ಟು ತೂಗಿನೋಡಿ ಸರಿಯಾದ ದಾರಿ ಕ್ರಮಿಸಿ ಎಚ್ಚರವನ್ನು ಕಾಯ್ದುಕೊಂಡವರು ಬನ್ನಾಡಿ. ಪಾಶ್ಚಾತ್ಯ ಕವಿ - ನಾಟಕಕಾರರಾದ ನೆರೂಡ - ಬ್ರೆಕ್ಟ್ - ರಿಲ್ಕೆ - ಕಾಫ್ಕ ಮುಂತಾದವರನ್ನು ನಮ್ಮ ನೆಲದಲ್ಲೂ ಕಾಣಬಹುದೇ ಎಂಬ ಹುಡುಕಾಟ ಇವರದ್ದು. ಇಂಥ ಆರೋಗ್ಯಕರ ನಿಲುವಿನಿಂದ ಸ್ವತಂತ್ರವಾಗಿ ನಿಂತು ದಶದಿಕ್ಕುಗಳಿಗೂ ಕಣ್ಣುಹಾಯಿಸುತ್ತ ತಮ್ಮ ಪದ್ಯಗಳಿಗೆ ಇವರು ವಸ್ತುವನ್ನು ಆಯ್ಕೆಮಾಡುತ್ತಾರೆ. ಇವರ ಕಣ್ಣಳತೆಗೆ, ಅರಿವಿಗೆ ಸಿಕ್ಕುವ ಲೋಕದ ನಾನಾ ಬಗೆಯ ತುಡಿತಗಳು ಇಲ್ಲಿ ಕವನಗಳಾಗಿವೆ. ಇತರರನ್ನು ಮೆಚ್ಚಿಸಲು ಕವಿತೆ ಬರೆಯಬೇಕಾಗಿಲ್ಲ; ಕವಿ ಬರೆದುದನ್ನು ಜನತೆ ಮೆಚ್ಚಿದರೆ ಸಾಕೆಂಬ ಧೋರಣೆ ಇವರದ್ದು. ೪೦ಕ್ಕೂ ಹೆಚ್ಚು ಕನ್ನಡ ಮತ್ತು ಇತರ ಪಾಶ್ಚಾತ್ಯ ನಾಟಕಗಳನ್ನು ನಿರ್ದೇಶಿಸಿದ ಖ್ಯಾತಿ ಇವರದು. ನಾಟಕ ನಿರ್ದೇಶನಕ್ಕಾಗಿ ಆರು ಬಾರಿ ರಾಜ್ಯಮಟ್ಟದ ಶ್ರೇಷ್ಠ ನಿರ್ದೇಶಕ ಪ್ರಶಸ್ತಿ ಗಳಿಸಿದ್ದಾರೆ. ಈ ಸಂಕಲನದ ಶೀರ್ಷಿಕೆ 'ಇಗೋ ಅರಿವೆ' ಬಹ್ವರ್ಥಗಳನ್ನು ಸ್ಫುರಿಸುತ್ತದೆ. ಯಾವ ಅರ್ಥವಾದರೂ ಸರಿಯೆ, ಅದರ ಧ್ವನಿ ಹಿತವೇ ಆಗಿದೆ.

**– ಇಂದಿರಾಕುಮಾರಿ**

*೩೪/೧೧, ೨ನೇ ಕ್ರಾಸ್, ಬಾಂಬೆ ಡೈಯಿಂಗ್ ಸಮೀಪ, ಯಶವಂತಪುರ, ಬೆಂಗಳೂರು - ೨೨*

## ಸಾದರ ಸ್ವೀಕಾರ

**ಶಿವಶರಣರ ವಚನಗಳಲ್ಲಿ ಸಾಮಾಜಿಕ ಮೌಲ್ಯಗಳು**
*ಡಾ|| ಸಿ. ಶಿವಕುಮಾರಸ್ವಾಮಿ*
***ಪುಟ : ೧೦೮*** ***ಬೆಲೆ : ರೂ. ೭೫***

**ಮರಕುಂದಿ ಬಸವಣ್ಣೆಪ್ಪ ಕೃತ 'ನಿಜಾನಂದ ಲಹರಿ'**
*ಸಂ. : ಶ್ರೀಮತಿ ಗೋಪಿಕಾದೇವಿ ದೇಶಮುಖ*
***ಪುಟ : ೧೯೮*** ***ಬೆಲೆ : ರೂ. ೧೦೦***

ಮೇಲಿನ ಎರಡು ಕೃತಿಗಳ ಪ್ರಕಾಶಕರು
**ಶ್ರೀ ಚನ್ನಬಸವೇಶ್ವರ ಸಂಸ್ಥಾನ ಹಿರೇಮಠ,** ಸುಕ್ಷೇತ್ರ ಹಾರಕೂಡ - ೫೮೫ ೪೩೭, ತಾ : ಬಸವಕಲ್ಯಾಣ, ಜಿಲ್ಲೆ : ಬೀದರ

**ಕಥೆ-ಕವನ** ಸಿ. ಎನ್. ಶ್ರೀನಾಥ್
***ಪುಟ : ೧೩೨*** ***ಬೆಲೆ : ರೂ. ೬೫***

**ಬರಹ** (ಗಂಭೀರ - ಲಘು) ಸಿ. ಎನ್. ಶ್ರೀನಾಥ್
***ಪುಟ : ೫೬*** ***ಬೆಲೆ : ರೂ. ೩೫***

ಮೇಲಿನ ಎರಡು ಕೃತಿಗಳ ಪ್ರಕಾಶಕರು
**ಬನಶಂಕರಿ ಪ್ರಿಂಟರ್ಸ್,** ೧೭೨/೩, ೩೧ನೇ ಬ್ಲಾಕ್, ಜೆಎಸ್‌ಎಸ್ ಲೇಔಟ್ ಹತ್ತಿರ, ಮೊದಲನೇ ಅಡ್ಡರಸ್ತೆ, ರಾಘವೇಂದ್ರ ನಗರ, ಮೈಸೂರು - ೫೭೦ ೦೧೧

**ಮಸ್ಕಿ ಕನ್ನಡದಾಗ ವಿಬಕ್ತಿ ರೂಪಗಳು**
*ಬಸವರಾಜ ಕೋಡಗುಂಟಿ*
***ಪುಟ : ೧೧೪*** ***ಬೆಲೆ : ರೂ. ೬೦***
**ಪ್ರಸಾರಾಂಗ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩ ೨೭೬

**ಮಕ್ಕಳು ಮತ್ತು ಜಗತ್ತು** (ಮಕ್ಕಳ ಸಾಹಿತ್ಯ, ಶಿಕ್ಷಣದ ಕುರಿತ ಲೇಖನಗಳು) *ಡಾ|| ಆರ್. ವಿ. ಭಂಡಾರಿ*
***ಪುಟ : ೯೯*** ***ಬೆಲೆ : ರೂ. ೫೦***

**ಮಕ್ಕಳ ಟ್ಯಾಗೋರ್** (ಟಾಗೋರರ ಕವನ, ಕಥೆಗಳನ್ನಾಧರಿಸಿದ ನಾಟಕ) ಸುಧಾ ಆಡುಕಳ
***ಪುಟ : ೫೨*** ***ಬೆಲೆ : ರೂ. ೩೦***

ಮೇಲಿನ ಎರಡು ಕೃತಿಗಳ ಪ್ರಕಾಶಕರು
**ಬಂಡಾಯ ಪ್ರಕಾಶನ,** 'ಸಹಯಾನ' ಕೆರೆಕೋಣ, ಅಂಚೆ : ಅರೇಅಂಗಡಿ, ತಾ : ಹೊನ್ನಾವರ, ಉ. ಕನ್ನಡ - ೫೮೧ ೩೩೪

**ಕೆಂಪುದೀಪ** (ಕವನ ಸಂಕಲನ) ಅಂಬಿಗರ ಮಂಜುನಾಥ
***ಪುಟ : ೬೪*** ***ಬೆಲೆ : ರೂ. ೫೦***
**ಯುವಕರ ಸಂಘ (ರಿ),** ರಾಮನಗರ, ಹಗರಿಬೊಮ್ಮನಹಳ್ಳಿ - ೫೮೩ ೨೧೨, ಬಳ್ಳಾರಿ ಜಿಲ್ಲೆ, ಕರ್ನಾಟಕ

**ಭಾರತದ ಪ್ರಾಚೀನ ವಿದ್ಯಾಪೀಠಗಳು** (ಶೈಕ್ಷಣಿಕ ಬರಹಗಳು)
ಬಿ. ಪಿ. ಶಿವಾನಂದರಾವ್
***ಪುಟ : ೮೮*** ***ಬೆಲೆ : ರೂ. ೫೦***
**ಗೀತಾಂಜಲಿ ಪಬ್ಲಿಕೇಷನ್ಸ್,** ನಂ. ೧೩೪, ೮ನೇ ಅಡ್ಡರಸ್ತೆ, ೪ನೇ ಮುಖ್ಯರಸ್ತೆ, ಗೋವಿಂದರಾಜನಗರ, ಬೆಂಗಳೂರು - ೫೬೦ ೦೪೦

**ಡಾ|| ಎಸ್. ರಾಧಾಕೃಷ್ಣನ್** (ಒಂದು ಪ್ರಬಂಧ)
ಬಿ. ಪಿ. ಶಿವಾನಂದರಾವ್
***ಪುಟ : ೬೪*** ***ಬೆಲೆ : ರೂ. ೪೦***
**ಜಾಗೃತಿ ಪ್ರಿಂಟರ್ಸ್,** ನಂ. ೫೬/೧-೬, ನರಸಿಂಹಯ್ಯ ಗಾರ್ಡನ್, ಕೊಟ್ಟಿಗೆಪಾಳ್ಯ, ಮಾಗಡಿ ಮುಖ್ಯರಸ್ತೆ, ಬೆಂಗಳೂರು - ೫೬೦ ೦೯೧

**ನಮ್ಮಜ್ಜಿ ಅವ್ವ ನನ್ನಾಕೆ** (ಗೇಯ ಗೀತೆಗಳ ಸಂಕಲನ)
*ಡಾ|| ಅರ್ಜುನ ಗೊಳಸಂಗಿ*
***ಪುಟ : ೮೬*** ***ಬೆಲೆ : ರೂ. ೬೦***

**ನೆನಪುಗಳ ಬೆನ್ನೇರಿ** (ಕವನ ಸಂಕಲನ) *ಲೋಕೇಶ ಗೊಳಸಂಗಿ*
***ಪುಟ : ೬೩*** ***ಬೆಲೆ : ರೂ. ೫೦***

**ಭೀಮ ಜ್ಯೋತಿ** (ಕವನ ಸಂಕಲನ) ಸಂಜಯ ಕುರಣೆ
***ಪುಟ : ೪೭*** ***ಬೆಲೆ : ರೂ. ೪೦***

**ಅಂಚು** (ಕವನ ಸಂಕಲನ) ಎಚ್. ಬಿ. ಪೂಜಾರ
***ಪುಟ : ೬೩*** ***ಬೆಲೆ : ರೂ. ೫೦***

**ಹೆಣದ ಹಿಂದೆ** (ಕಥಾ ಸಂಕಲನ) *ಡಾ|| ವೈ. ಎಂ. ಭಜಂತ್ರಿ*
***ಪುಟ : ೮೦*** ***ಬೆಲೆ : ರೂ. ೬೦***

ಮೇಲಿನ ಐದು ಕೃತಿಗಳ ಪ್ರಕಾಶಕರು
**ದಲಿತ ಸಾಹಿತ್ಯ ಪರಿಷತ್ತು,** ರಾಜ್ಯ ಘಟಕ, ಗದಗ, ಹುಡ್ಕೊ ಕಾಲನಿ, ಹುಲಕೋಟಿ - ೫೮೨ ೨೦೫, ಜಿಲ್ಲೆ ಗದಗ

**ಪೈರು ಪಚ್ಚೆ ತೆನೆ** (ಕವನ ಸಂಕಲನ)
*ಗೌ. ಸಂ. : ಜಿ. ಆರ್. ಸತ್ಯಲಿಂಗರಾಜು*
*ಸಂ. : ಬಿ. ಬಸವರಾಜು*
***ಪುಟ : ೧೮೪*** ***ಬೆಲೆ : ರೂ. ೧೩೦***
**ಯುವಶಕ್ತಿ ಪ್ರಕಾಶನ,** ೧೭೯/೧ಸಿ. ೮ನೇ ಅಡ್ಡರಸ್ತೆ, ಟೆರೇಷಿಯನ್ ಕಾಲೇಜು ಹತ್ತಿರ, ಮಹದೇಶ್ವರ ದೇವಸ್ಥಾನದ ಎದುರು, ವಿದ್ಯಾನಗರ, ಮೈಸೂರು - ೫೭೦ ೦೧೧




# ಗುರು ಶುಕ್ರರ ಸಮಾಗಮ

**ಸಂ**ಜೆಯ ಆಕಾಶದಲ್ಲಿ ಸ್ಫುಟವಾಗಿ ಕಾಣುವ ಎರಡು ಪ್ರಕಾಶಮಾನವಾದ ಚುಕ್ಕೆಗಳೇ ಶುಕ್ರ ಮತ್ತು ಗುರು. ಪಶ್ಚಿಮದಲ್ಲಿ ಸಾಕಷ್ಟು ಎತ್ತರದಲ್ಲಿ ಕಾಣುವ ಇವುಗಳ ಚಲನೆಯನ್ನು ಗಮನಿಸುತ್ತಾ ಬಂದರೆ ತಿಂಗಳ ಕೊನೆಗೆ ಅವುಗಳ ಜೂಟಾಟವನ್ನು ನೋಡಬಹುದು. ಮೂರನೆಯ ವಾರದಲ್ಲಿ ಅವು ಪರಸ್ಪರ ಸಮೀಪಿಸಿ ಪುನಃ ಅಗಲುತ್ತವೆ. ಶುಕ್ರ ದಿನೇ ದಿನೇ ಮೇಲೇರಿದಂತೆ ಗುರು ದಿಗಂತದ ಅಂಚಿಗೆ ಸರಿಯುತ್ತದೆ. ಶುಕ್ರ ಗರಿಷ್ಠ ಎತ್ತರವನ್ನು ತಲುಪುವಾಗ ಗುರು ಸಂಜೆಗೆಂಪಿನಲ್ಲಿ ಕರಗುತ್ತಿರುತ್ತದೆ.

ಇದೇ ಹೊತ್ತಿಗೆ ಪೂರ್ವದ ಅಂಚಿನಲ್ಲಿ ಉದಯಿಸುವ ಕಿತ್ತಲೆ ಬಣ್ಣದ ಚುಕ್ಕೆ ಮಂಗಳ. ಹೀಗೆ ಸಂಜೆಗೆ ಉದಯವಾಗಿ ಬೆಳಗಿನ ಜಾವದವರೆಗೂ ಕಾಣುವ ಘಟನೆಯೇ ವಿಯುತಿ. ಅಂದರೆ ಸೂರ್ಯನಿಗೆ ನೇರವಾಗಿ ಎದುರಾದಂತೆ ಲೆಕ್ಕ. ಮಧ್ಯೆ ಭೂಮಿಯಿಂದ ನಾವು ಅದನ್ನು ನೋಡುತ್ತಿದ್ದೇವೆ. ಈ ಸಂದರ್ಭದಲ್ಲಿ ಭೂಮಿ-ಮಂಗಳಗಳ ನಡುವೆ ಅಂತರ ಕನಿಷ್ಠವಾಗುತ್ತದೆ. ಹುಣ್ಣಿಮೆ ಚಂದ್ರನ ಹಾಗೆ ಮಂಗಳದ ಪೂರ್ಣ ಆಕೃತಿ ನೋಡಲು ಸಿಗುತ್ತದೆ. ಈ ಎಲ್ಲ ಅಂಶಗಳೂ ಸೇರಿ ಅದು ಬಹಳ ಪ್ರಕಾಶಮಾನವಾಗಿ ಕಾಣುತ್ತದೆ. ಹವ್ಯಾಸಿಗಳು ಈ ಅವಕಾಶಕ್ಕಾಗಿ ಕಾಯುತ್ತಾರೆ. ಅದರ ಚಿತ್ರ ತೆಗೆದು ಕಾಲುವೆಗಳಂತೆ ಕಾಣುವ 'ಕೆನಾಲಿ'ಗಳನ್ನು ಹುಡುಕುತ್ತಾರೆ. ಧ್ರುವ ಪ್ರದೇಶದ ಹಿಮಟೋಪಿಗಳನ್ನು ಗುರುತಿಸಿ ಅಲ್ಲಿ ಚಳಿಗಾಲವೇ ಬೇಸಿಗೆಯೇ ಎಂದು ಪರಿಶೀಲಿಸುತ್ತಾರೆ. ಇತ್ತೀಚಿನ ದಿನಗಳಲ್ಲಿ ಬಾಹ್ಯಾಕಾಶ ಯಾನಗಳಿಗೂ ವಿಯುತಿಗಳ ಸಂದರ್ಭಗಳನ್ನೇ ಬಳಸುತ್ತಾರೆ.

ಇನ್ನುಳಿದ ಗ್ರಹ ಗಳೆಂದರೆ ಬುಧ ಮತ್ತು ಶನಿ. ಬುಧವನ್ನು ತಿಂಗಳ ಮೊದಲಲ್ಲಿ ಗುರುತಿಸಬಹುದು. ೫ರಂದು ಗರಿಷ್ಠ ಎತ್ತರದಲ್ಲಿ ಕಾಣುವ ಸಂದರ್ಭ ಛಾಯಾಗ್ರಹಣಕ್ಕೆ ಒಳ್ಳೆಯ ಅವಕಾಶ. ಆದರೆ ತಿಂಗಳ ಕೊನೆಗೆ ಕಾಣುವುದು ಕಷ್ಟ. ಶನಿ ರಾತ್ರಿ ಸುಮಾರು ಎಂಟರಿಂದ ಬೆಳಗಿನ ಜಾವದವರೆಗೂ ನೋಡಲು ಸಿಗುತ್ತದೆ. ಅದರ ಸನಿಹದಲ್ಲಿ ನೀಲಿ ಬಣ್ಣದ ಚಿತ್ರಾ ನಕ್ಷತ್ರವಿದೆ.

೨೬ ರ ಸಂಜೆ ಗುರು, ಶುಕ್ರ, ಚಂದ್ರ

೮ರಂದು ಹುಣ್ಣಿಮೆ ಚಂದ್ರ ಚಿತ್ರಾ ನಕ್ಷತ್ರದ ಸಮೀಪವೇ ಇರುತ್ತದೆ. ಈ ಅಂಶವನ್ನು ಬಳಸಿ, ಶನಿ ಗ್ರಹ ಮತ್ತು ಚಿತ್ರಾ ನಕ್ಷತ್ರವನ್ನು ಗುರುತಿಸಬಹುದು. ಅದಾದ ಎರಡು ದಿನಗಳಿಗೆ ಚಂದ್ರ ಪುರರವಿಯಲ್ಲಿರುತ್ತದೆ. ಅಂದರೆ ಭೂಮಿ-ಚಂದ್ರ ನಡುವಿನ ಅಂತರ ಕನಿಷ್ಠವಾಗಿರುತ್ತದೆ.

೨೧ರಂದು ವಸಂತ ವಿಷುವ; ಅಂದರೆ ಹಗಲು-ರಾತ್ರಿಗಳ ಅವಧಿ ಸಮ ಎಂದರ್ಥ. ಅದಾದ ಮರುದಿನವೇ ಅಮಾವಾಸ್ಯೆ. ಯುಗಾದಿಯ ಸಂಭ್ರಮ. ಎಲ್ಲೆಲ್ಲೂ ಹಸಿರ ಚಿಗುರು. ಇದಾದ ಎರಡನೆಯ ದಿನ ಬಿದಿಗೆಯಂದು ಚಂದ್ರನನ್ನು ನೋಡಬೇಕೆನ್ನುವ ಸಂಪ್ರದಾಯವಿದೆ. ಖಂಡಿತ ನೋಡಲೇಬೇಕು. ಅಗಲುತ್ತಿರುವ ಗುರು - ಶುಕ್ರರ ನಡುವೆ ರೇಖಾ ಚಂದ್ರ ಕಾಣುವ ಈ ಸಂದರ್ಭ ಛಾಯಾಗ್ರಹಣಕ್ಕೂ ಒಳ್ಳೆಯ ಅವಕಾಶ.

ವಸಂತದ ವಿಶೇಷವೆಂದರೆ ಒರೈಯನ್ (ಮಹಾವ್ಯಾಧ) ಪುಂಜ ಸಂಜೆಯಲ್ಲೇ ನೋಡ ಸಿಗುವುದು. ಇದರ ದಕ್ಷಿಣಕ್ಕೆ ಅತಿ ಪ್ರಕಾಶಮಾನವಾದ ಲುಬ್ಧಕ (ಸಿರಿಯಸ್) ಇನ್ನೂ ದಕ್ಷಿಣಕ್ಕೆ ಅಗಸ್ತ್ಯ (ಕೆನೋಪಸ್) ಕಾಣುತ್ತವೆ. ಚಂದ್ರನಿಲ್ಲದ ರಾತ್ರಿಗಳಲ್ಲಿ ಇವುಗಳ ಮೂಲಕ ಹಾದುಹೋಗುವ ಆಕಾಶ ಗಂಗೆಯ ಭಾಗವನ್ನು ನೋಡಬಹುದು.

**ಖಗೋಳ ದಿನಚರಿ**

೧ ಚಾಂದ್ರಮಾಸದ ಮೊದಲ ಪಾದ (ಚಂದ್ರಾಸ್ತ ನಡುರಾತ್ರಿಗೆ)

೪ ಮಂಗಳದ ವಿಯುತಿ

೫ ಮಂಗಳ - ಭೂಮಿ ನಡುವೆ ಕನಿಷ್ಠ ಅಂತರ

೮ ಹುಣ್ಣಿಮೆ ೧೪:೩೦ಕ್ಕೆ

೧೦ ಚಂದ್ರ - ಭೂಮಿ ನಡುವೆ ಕನಿಷ್ಠ ಅಂತರ

೧೧ ಶನಿ - ಚಿತ್ರಾ - ಚಂದ್ರ ಮೂರರ ತ್ರಿಕೋಣ

೧೪ ಗುರು - ಶುಕ್ರ ಜೋಡಿ

೧೫ ಚಾಂದ್ರಮಾಸದ ಕೊನೆಯ ಪಾದ (ಚಂದ್ರೋದಯ ನಡುರಾತ್ರಿಗೆ)

೨೦ ವಸಂತ ವಿಷುವ ೧೦:೩೦ಕ್ಕೆ

೨೨ ಬುಧ - ಚಂದ್ರ ಜೋಡಿ; ೧೯:೩೦ಕ್ಕೆ ಅಮಾವಾಸ್ಯೆ

೨೫ ಗುರು - ಚಂದ್ರ ಜೋಡಿ

೨೬ ಚಂದ್ರ - ಭೂಮಿ ನಡುವೆ ಗರಿಷ್ಠ ಅಂತರ, ಶುಕ್ರಗ್ರಹ ಗರಿಷ್ಠ ಕೋನೋನ್ನತಿ.

೩೦ ಚಾಂದ್ರಮಾಸದ ಮೊದಲ ಪಾದ (ಚಂದ್ರಾಸ್ತ ನಡುರಾತ್ರಿಗೆ)

**ಡಾ|| ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್
ಬೆಂಗಳೂರು - ೫೬೦ ೦೦೧

# ಗೃಹಪ್ರವೇಶ ರಾಜಕಾರಣ!

ರಾಜಕಾರಣಿಯ ಮನೆಗೆ ಜನ ಬರೋದು ಇತ್ತೀಚೆಗೆ ತುಂಬ ಜಾಸ್ತಿಯಾಗಿತ್ತು. ಅದೇನೋ ಅವರು ಯಾವುದಕ್ಕೋ ನಾಯಕರಾದರಂತೆ, ಅವರ ಪಕ್ಷದಲ್ಲಿ ಅವರಿಗೆ ದೊಡ್ಡ ಸ್ಥಾನವಂತೆ. ಅದಾಗಿದ್ದೇ ಆಗಿದ್ದು, ಅವರ ಮನೆ ಮೇಲೆ ಅವರ ಪಕ್ಷದ ಧ್ವಜ ಹಾರಾಡತೊಡಗಿತು, ಪ್ರತಿದಿನ ನಮ್ಮ ಬೀದೀಲಿ ಮೆರವಣಿಗೆಗಳು, ಅದೆಷ್ಟೊಂದು ಕಟೌಟುಗಳು, ಬ್ಯಾನರ್‌ಗಳು, ತಮಟೆ, ಕುಣಿತ, ಪಟಾಕಿ, ಊಟ, ಹೂಹಾರಗಳು, ಇನ್ನೂ ಏನೇನೋ. ಅವರ ಮನೆಯಲ್ಲಿ ಈಗ ನಿತ್ಯ ಪಾರ್ಟಿ.

**ವಾಸುದೇವ ಶರ್ಮಾ**

''ಆ ರಾಜಕೀಯ ನಾಯಕರು ನಿಮ್ಮನೆ ರಸ್ತೇಲೇ ಮನೆ ನೋಡಿದ್ದಾರಂತೆ'' ಎಂದು ಮನೆಗೆಲಸದ ರಂಗಮ್ಮ ಹೇಳಿದಾಗ ಮೊದಲು ಪ್ರತಿಕ್ರಿಯಿಸಿದ್ದು ಅಪ್ಪ. ''ಇನ್ನು ಶುರುವಾಯ್ತು ನಮಗೆಲ್ಲಾ ಶನಿಕಾಟ''. ''ಎಲ್ಲದಕ್ಕೂ ನಿಮ್ದು ಇದ್ದದ್ದೇ ಕೊಂಕು'' ಅಂತ ಅಮ್ಮ ಮರುಕುಟುಕಿದಾಗ ನಾನೂ ಸ್ವಲ್ಪ ಗುರುಗುರು ಅಂದದ್ದು ಸುಳ್ಳಲ್ಲ. ಯಾಕೆ ಇವ್ರೆಲ್ಲಾ ಹೀಗಾಡ್ತಾರೆ ಅಂತ ನನ್ನ ಹೆಂಡತಿ ಅಯೋಮಯವಾಗಿ ನೋಡಿದ್ಲು.

''ಮುಂದಿನ ವಾರವೇ ಗೃಹಪ್ರವೇಶ, ಗೃಹಪ್ರವೇಶ'' ರಂಗಮ್ಮನ ವಾರ್ತೆ. ಆದರೆ, ಯಾವ ಮನೆ ಅಂತ ಕೇಳೋದಕ್ಕೆ ನನಗೆ ಬಿಂಕ. ಎರಡೇ ದಿನದಲ್ಲಿ ಗೊತ್ತಾಯ್ತು. ಜೊತೆಗೊಂದು ಪ್ರಶ್ನೆ, ವಿಠಲ್ ತಮಗೆಂದು ಕಟ್ಟಿಕೊಂಡ ಮನೇನ ಮಾರಿಬಿಟ್ರ ? ಅದೇ ಹೇಳಿದ್ನಲ್ಲ, ಕೇಳಕ್ಕೆ ಬಿಂಕ. ಹೇಗೋ ಸುದ್ದಿ ಬರುತ್ತೆ. ಗೃಹಪ್ರವೇಶದ ದಿನ ನಾವು ನಮ್ಮ ಮನೆಯಿಂದ ಆಚೆಗೆ ಹೋಗೋಕ್ಕೂ ಆಗ್ಲಿಲ್ಲ. ಮತ್ತೆ ಬಂದು ಒಳಗ್ಹೋಗಕ್ಕೂ ಪರದಾಡ್ಬೇಕಾಗಿ ಬಂತು. ಆ ಹಿರಿಯ ರಾಜಕಾರಣಿಗಳ ಹೆಸರಿನೊಂದಿಗೆ 'ಸಾಮಾಜಿಕ ನ್ಯಾಯ ಮತ್ತು ಸಮತೆ' ಅಂತ ಕೆತ್ತಿಸಿಕೊಂಡಿದ್ದ ಕಲ್ಲು ಹೊಸ ಮನೆಗೆ ಅಂಟಿತು. ಯಾವುದೋ ಸ್ವಾಮೀಜಿಗಳಿಗೆ ಪಲ್ಲಕ್ಕಿ ಉತ್ಸವ, ಪಾದಪೂಜೆಗಳು ನಡೆದವು. ಅಂದರೆ ವಿಠಲ್ ಮಾರಿದ್ದಾರೆ ಎಂದಾಯಿತು.

ಒಂದೆರೆಡು ವಾರದ ಮೇಲೆ ವಿಠಲ್ ಬೀದೀಲಿ ಕಂಡಿದ್ರು. ನಾನು ಮಾತಾಡಿಸ್ಲಿಲ್ಲ, ಆಮೇಲೆ ಗೊತ್ತಾಯ್ತು. ಆ ಮನೆಯ ಮೂರನೆ ಮಹಡಿ ಮೇಲೆ ಒಂದು ಚಪ್ಪರ ಹಾಕಿಸ್ತಾರಂತೆ ಅವ್ರ ಪಾರ್ಟಿ ಹುಡುಗ್ರುದು ಮೀಟಿಂಗ್ ಮಾಡಕ್ಕೆ. ''ಹೂ ! ಮಾಡ್ತಾರೆ ಮೀಟಿಂಗ್. ಬರೀ ಪಾರ್ಟಿ ಅಷ್ಟೆ!'' ಎಂಬ ಅಪ್ಪನ ಟೀಕೆಗೆ ಪ್ರತಿಕ್ರಿಯಿಸುವುದು ಬೇಡವೆಂದು ಸುಮ್ಮನಿದ್ದೆ. ಆದರೆ, ಒಂದೆರಡು ತಿಂಗಳಲ್ಲೇ ಹೆಂಡತಿಯ ಚಡಪಡಿಕೆ ಅರ್ಥ ಮಾಡಿಸಿತು. ಮಾಡುವುದೇನು ? ಸುಮ್ಮನಿದ್ದೆ.

ಆದರೆ, ಒಂದು ಒಳ್ಳೇದಾಗಿತ್ತು. ನಗರದ ಸೆರಗಿನಲ್ಲಿರುವ ನಮ್ಮ ಬಡಾವಣೆಯ, ಅದರಲ್ಲೂ ನಮ್ಮ ಬೀದಿಗೆ ಯಾಕೋ ಏನೋ ನೀರಿಗೆ, ವಿದ್ಯುತ್‌ಗೆ ನಮಗೆ ಬೇಕಾದಾಗ ದಾರಿ ಗೊತ್ತಾಗುತ್ತಿರಲಿಲ್ಲ. ಈಗ ಅವು ಬಿಟ್ಟು ಹೋಗೋದೇ ಇಲ್ಲ! ಇದರಿಂದ ನಮಗೆ ಮಾತ್ರವಲ್ಲ, ನಂಬೀದಿಯವರಷ್ಟೆ ಅಲ್ಲ, ನಮ್ಮನೆ ಹತ್ತಿರದಲ್ಲೇ ಕ್ಯಾಂಟೀನ್ ನಡೆಸುವ ಕಾರಂತರಿಗೆ, ಹಾಲು ತರಕಾರಿ ಅಂಗಡಿ ಕೃಷ್ಣಪ್ಪ, ಮೆಟಲ್ ವರ್ಕ್ಸ್‌ನ ಹುಸೇನ್, ಮೆಡಿಕಲ್ ಶಾಪ್‌ನ ಜೈನ್‌ಗೂ ಆನಂದವಾಗಿತ್ತು.

ಒಂದು ಭಾನುವಾರ, ನಮ್ಮನೆಯವರೆಲ್ಲಾ ಮಧ್ಯಾಹ್ನದ ಸವಿನಿದ್ದೆಯಲ್ಲಿದ್ದೆವು. ನಂಬೀದಿ ಮಕ್ಕಳೆಲ್ಲಾ ಕ್ರಿಕೆಟ್ಟೋ ಮತ್ತೊಂದೋ ಆಡುವ ಆಟದ ಕೇಕೆ ಹಿತವಾಗಿತ್ತು. ಇದ್ದಕ್ಕಿದ್ದ ಹಾಗೆ ಏನೋ ಬಿದ್ದು ಗಾಜು ಒಡೆದ ಶಬ್ದ. ಹಿಂದೆಯೇ ಯಾರೋ ಕೂಗಿದ್ದು, ಜೊತೆಗೆ ಮಕ್ಕಳ ಕೇಕೆ ನಿಂತದ್ದು ಕೇಳಿ ಒಟ್ಟಿಗೆ ಮನೆಯವರೆಲ್ಲಾ ದಿಗ್ಗನೆದ್ದೆವು. ಏನಾಯ್ತು ಅಂತ ನನ್ನ ಹೆಂಡತಿ ವರದಿ ತಂದಳು. ಅದೇ ಅವ್ರ ಮನೇಗೆ ಬಂದಿರೋ ಕಾರುಗಳು ಬೀದಿ ತುಂಬ ನಿಂತಿವೆ. ಮಕ್ಕಳು ಆಡ್ತಾ ಇರೋವಾಗ ಬ್ಯಾಟು ತಗಲಿ ಒಂದು ಕಾರಿನ ಗಾಜು ಒಡೆದಿದೆ... ಇನ್ಮೇಲೆ ಮಕ್ಕಳು ರಸ್ತೇಲಿ ಆಡಬಾರದಂತೆ !



ಒಂದು ದಿನ ಕೆಲಸ ಮುಗಿಸಿ ಬಸ್ ಇಳಿದು ಮನೆ ಕಡೆ ಬರ್ತಿದ್ದೆ. ಮೆಟಲ್ ವರ್ಕ್ಸ್‌ನ ಹುಸೇನ್ ಮತ್ತವನ ಸಹಾಯಕ ಕೆಲಸ ಬಿಟ್ಟು ಏನೋ ಗಹನವಾಗಿ ಮಾತಾಡ್ತಿದ್ರು. ''ಸಾರ್, ಬನ್ನಿ ಸಾರ್'' ಎಂದು ಅಪರೂಪಕ್ಕೆ ಕರೆದಿದ್ದ ಹುಸೇನ್, ''ನಮ್ದು ಅಂಗ್ಡೀದು ತುಂಬ ಗಲಾಟೆ ಅಂತೆ ಸಾರ್. ಆದ್ರೆ, ಅವ್ರು ಅಂಗ್ಡಿ ಖಾಲಿ ಮಾಡಿ ಅಂತ ಹೇಳಿ ಕಳ್ಸಿದ್ದಾರೆ. ಇನ್ನೊಂದು ವಾರದಲ್ಲಿ ಹೋಗ್ಬೇಕಂತೆ''. ಈ ವಿಷಯ ಅಮ್ಮನಿಗೆ ಗೊತ್ತಾದ್ರೆ ಬಾಳಾ ಖುಷಿಪಡ್ತಾಳೆ ಅಂತ ಅಂದ್ಕೊಂಡೆ. ''ನೀವೇ ಹೇಳಿ ಸಾರ್, ಇದು ನ್ಯಾಯಾನ ? ನೀವೆಲ್ಲಾ ಮನೆ ಕಟ್ಟೋದಕ್ಕುಂಚೆಯಿಂದ ನಾನಿಲ್ಲಿ ಕೆಲ್ಸ ಮಾಡ್ಕೊಂಡಿದ್ದೀನಿ. ಹೆಚ್ಚೂ ಕಡಿಮೆ ಇಲ್ಲಿನ ಎಲ್ಲ ಮನೆಗಳ ಕಬ್ಬಿಣದ ಕೆಲಸ ನಾನೇ ಮಾಡಿರೋದು. ಶಬ್ದಾನ ನೀವೆಲ್ಲಾ ಸಹಿಸ್ಕೊಂಡಿಲ್ವಾ ? ನೆನ್ನೆ ಮೊನ್ನೆ ಬಂದ ಇವ್ರು ನನ್ನ ಓಗಂತಾರೆ. ನಾನೂ... ಏನಾದ್ರೂ ಮಾಡ್ಬೇಕು... ನೀವೊಂಚೂರು ನನಗೆ ಸಹಾಯ ಮಾಡ್ಬೇಕು ಸಾರ್...''

ಆದ್ರೆ ಮುಂದಿನ ಹದಿನೈದು ದಿನದಲ್ಲೇ ಹುಸೇನ್ ಅಂಗಡಿ ಬೋರ್ಡಿಳಿಸಿ ಯಾವ್ದೋ ದೂರದ ಬಡಾವಣೆ ಹೊರಗೆ ಹೋದಾಂತ ರಂಗಮ್ಮ ಸುದ್ದಿ ತಂದರು. ''ಇನ್ಯಾರ್ಯಾರು ಹೋಗಬೇಕೋ ಈ ಮಹಾಶಯ ನಂಬೀದೀಗೆ ಬಂದದ್ರಿಂದ'' ಎಂಬ ಅಪ್ಪನ ಸ್ವಗತಕ್ಕೆ ಉತ್ತರಿಸಿದ್ದು ಅಮ್ಮ: ''ನಿಮ್ಮನ್ಯಾರೂ ಹೊರಡಿಸಲ್ಲ, ಸುಮ್ಮನೆ ರಾಮಾ ಕೃಷ್ಣಾಂತ ಇರಬಾರದೆ ?''

ಆ ರಾಜಕಾರಣಿಯ ಮನೆಗೆ ಜನ ಬರೋದು ಇತ್ತೀಚೆಗೆ ತುಂಬ ಜಾಸ್ತಿಯಾಗಿತ್ತು. ಅದೇನೋ ಅವರು ಯಾವುದಕ್ಕೋ ನಾಯಕರಾದರಂತೆ, ಅವರ ಪಕ್ಷದಲ್ಲಿ ಅವರಿಗೆ ದೊಡ್ಡ ಸ್ಥಾನವಂತೆ. ಅದಾಗಿದ್ದೇ ಆಗಿದ್ದು, ಅವರ ಮನೆ ಮೇಲೆ ಅವರ ಪಕ್ಷದ ಧ್ವಜ ಹಾರಾಡತೊಡಗಿತು, ಪ್ರತಿದಿನ ನಮ್ಮ ಬೀದೀಲಿ ಮೆರವಣಿಗೆಗಳು, ಅದೆಷ್ಟೊಂದು ಕಟೌಟುಗಳು, ಬ್ಯಾನರ್‌ಗಳು, ತಮಟೆ, ಕುಣಿತ, ಪಟಾಕಿ,




ಬಹುಶಃ ಅದ್ಕೇ ಕಣ್ರೀ, ನಮ್ಮ ಶಾಸಕರು ಚುನಾವಣೆಯಲ್ಲಿ ಓಟನ್ನೂ ಹಣ ಕೊಟ್ಟು ಖರೀದಿ ಮಾಡುತ್ತಾರೆ...?

ಊಟ, ಫಲಾಹಾರಗಳು, ಇನ್ನೂ ಏನೇನೋ. ಅವರ ಮನೆಯಲ್ಲಿ ಈಗ ನಿತ್ಯ ಪಾರ್ಟಿ. ಅಪ್ಪ ಹೇಳಿದ್ದು ನಿಜ.

ವರ್ಷದ ಕೊನೆ. ಮನೆಗಂದಾಯ ಕಟ್ಟಲಿಕ್ಕೆ ಸರದಿಯಲ್ಲಿ ನಿಂತಿದ್ದೆ. ನನ್ನ ಹಿಂದೇನೆ ವಿಠಲ್ ಬಂದರು. ಅರ್ಧ ನಗೆ ವಿನಿಮಯ ಆದ ಎಷ್ಟೋ ಹೊತ್ತಾದ ಮೇಲೆ ಪ್ರಜ್ಞೆ ಬಂತು. ಆರೆ ಇವ್ರ್ಯಾಕೆ ಬಂದ್ರು ? ಕೇಳೇ ಬಿಟ್ಟೆ. ಅದು ಹೇಗೆ ಕೇಳಿದೆನೋ ಗೊತ್ತಿಲ್ಲ. ಈಗಲೂ ಆಶ್ಚರ್ಯವಾಗುತ್ತೆ! ಮನೆ ಮಾರಿಲ್ವಂತೆ. ಅವರು ಬಾಡಿಗೆಗೆ ಇರೋದಂತೆ. ವರ್ಷದ ಬಾಡಿಗೆ ಒಟ್ಗೆ ಕೊನೇಲಿ ಕೊಡ್ತಾರಂತೆ. ಮತ್ತೆ ಮನೇ ಮೇಲೆ ಹಾಕಿದ ಕಲ್ಲು!? ಕೇಳ್ಲಿಲ್ಲ.

ಒಂದಿನ ಪಾಪುಗೆ ಜ್ವರ ಅಂತ ತಿನ್ನಕ್ಕೆ ಕಾರಂತರ ಕ್ಯಾಂಟೀನ್‌ನಿಂದ ಇಡ್ಲಿ ತರೋದಕ್ಕೆ ಅಪ್ಪಣೆಯಾಯ್ತು. ನಾನು ಆಫೀಸಿಗೆ ಹೊರಟಿದ್ದೆ. ''ಬೇಡಮ್ಮ. ಅವ್ರಿಲ್ಲ ನೆನ್ನೆ ಖಾಲಿ ಮಾಡಿದ್ರು. ಇಡ್ಲಿ ಹತ್ತಿರದಲ್ಲೆಲ್ಲೂ ಸಿಕ್ಕಲ್ಲ'' ''ನೀನು ಹೋಗೋ. ನಾನು ಇಲ್ಲೇ ಎಲ್ಲಾದ್ರೂ ಬ್ರೆಡ್ ತಂದ್ಕೊಡ್ತೀನಿ'' ಅಂದರು ಅಮ್ಮ. ಅಲ್ಲ, ಕಾರಂತರು ಇಲ್ಲ ಅಂದ್ರೆ? ಇತ್ತೀಚೆಗೆ ಒಳ್ಳೆ ವ್ಯಾಪಾರ ಆಗ್ತಿತ್ತು. ಸಾಯಂಕಾಲ ಗೊತ್ತಾಯ್ತು. ಆ ಅವರ ಬೆಂಬಲಿಗರ ಕಾಟ ತಡೆಯಕ್ಕೆ ಕಾರಂತರಿಗೆ ಆಗಲಿಲ್ಲವಂತೆ. ಅವರಿಗೆ ಸರಬರಾಜು ಮಾಡಿದ ಕಾಫಿ, ತಿಂಡಿ, ಊಟದ ಲೆಕ್ಕ ಎಲ್ಲಕ್ಕೂ ತಿಲಾಂಜಲಿ ಕೊಟ್ಟು ಎಲ್ಲೋ ಹೊರಟು ಹೋದರಂತೆ. ಹಾಲಂಗಡಿ ಕೃಷ್ಣಪ್ಪ ಜಾಗ ಬದಲಾಯಿಸ್ತಾರಂತೆ ಅಂತ ಕೇಳಿದಾಗ ಇದೊಳ್ಳೆ ವಿಚಿತ್ರ ಅನ್ನಿಸಿತು. ಆದರೆ, ಸಾಯಂಕಾಲ ಮೆಡಿಕಲ್ ಶಾಪ್ ಜೈನ್ ಹೇಳಿದ ಮಾತು ನನ್ನ ಕಣ್ಣು ತೆರೆಸಿತು. ಅವರ ಕಡೆ ಜನ ಬಂದು ಅವರು ಹೇಳಿದ್ದಾರೆ ಅಂತ ತೆಗೆದುಕೊಂಡು ಹೋಗಿರೋ ಔಷಧಿ ಸಾಮಾನುಗಳ ಲೆಕ್ಕಾನೇ ಎರಡು ಲಕ್ಷ ಮುಟ್ಟಿದೆಯಂತೆ. ಈಗ ಅಂಗಡಿ ಮುಚ್ಚದಿದ್ದರೆ, ಕುಟುಂಬ ಬೀದಿಗೆ ಬರೋದು ಗ್ಯಾರಂಟಿ.

ಅದೇ ವಿಚಾರದ ಗುಂಗಿನಲ್ಲೇ ಇದ್ಯಾಕೆ ಹೀಗೆ ಆಗುತ್ತೆ ಅಂತ ಅಂದುಕೊಂಡು ಮನೆಗೆ ಬಂದಾಗ, ಅಮ್ಮ ಹೇಳಿದ್ರು, ''ಅದೇ ಅವರ ಮನೆ ಎದುರಿನ ಪದ್ಮಕ್ಕ ಮನೆ ಮಾರಿ ಬೇರೆ ಕಡೆ ಹೋಗೋ ಹಾಗೆ ಕಾಣುತ್ತೆ.'' ಪರಿಸ್ಥಿತಿಯ ಪೂರ್ಣ ಚಿತ್ರ ಕಣ್ಣೆದುರಿಗೆ ಬಂದದ್ದು ರಾತ್ರಿ ಹೆಂಡತಿ ಹೇಳಿದ್ದು ಕೇಳಿದಾಗ, ''ರೀ, ನಾವೂ ಎಲ್ಲಾದ್ರೂ ಬೇರೆ ಕಡೆ ಬಾಡಿಗೆಗೆ ಮನೆ ನೋಡೋಣ್ವಾ ?''

**ವಾಸುದೇವ ಶರ್ಮಾ**
ನಂ. ೧೧, 'ಶ್ರದ್ಧಾ', ೮ನೇ ಮುಖ್ಯರಸ್ತೆ, ೩ನೇ ಅಡ್ಡರಸ್ತೆ
ಶ್ರೀನಿಧಿ ಬಡಾವಣೆ, ಕೋಣನಕುಂಟೆ, ಬೆಂಗಳೂರು - ೫೬೦ ೦೬೨

# ನಾ ಮರವಾಗುವೆ...



ನೀನು ಮಂಗನಾಗು,
ನಾನು ಮರವಾಗುವೆ...

ಕೀಟಲೆಗಳ ಹೊರೆ
ಹೊರುವೆ;
ಚಿಗುರು ಹೂವು
ಹೀಚು ಕಾಯಿ
ಹಣ್ಣು ಗಿಣ್ಣು
ಹೊದ್ದು ನಿಲುವೆ;
ತರಚಿ ಕಿರುಚಿ ಬಳಿದು ಬಾಚಿ
ತಿಂದರೂನು ಸರಿಯೆ,
ಅಮ್ಮನಂತೆ ಸುಮ್ಮಕಿರುವೆ...!

ಜೀಕಿದರೂ ಪುಳಕ;
ಮುರಿದರೂ ಹರಿ-
ರೆಂಬೆ-ಕೊಂಬೆ
ಇಲ್ಲ ಇನಿತೂ ಅಳುಕ !
ಕೊನರುವೆನೆ ವಿನಾ
ಕೊರಡಾಗಲಾರೆ;
ಬಯಸಲಾರೆ ಕೆಡುಕ...!

ಮುನಿದಾಗ ಮಳೆ
ಬಿರಿದಾಗ ಇಳೆ
ಹಸಿ ಊಡು ಅಡಿಗೆ;
ಉಸುರು ಕೊಡು
ನನಗೆ,
ಹೆಗಲು ಕೊಡುವೆ
ನಿನಗೆ...!

ತೂಗಿ ಬಾಗಿ ಒನೆದಾಡಿ
ಮಗುವಂತೆ ಪೊರೆವೆ,
ಜೀವ ಕಟ್ಟಿಕೊಡುವೆ;
ನೆತ್ತಿಗೆ ನೆರಳಾಗಿ
ಹೊತ್ತಿಗೆ ಅನ್ನವಾಗಿ
ನೂರು ಕಾಲ ನಗುವೆ...!

**ವಿಜಯಕಾಂತ್ ಪಾಟೀಲ**
ನ್ಯಾಯವಾದಿ, ಚಿಕ್ಕಾಂಶಿ, ಹೊಸೂರು - ೫೮೧ ೧೦೪
ಹಾನಗಲ್ಲ, ಹಾವೇರಿ

# ಕನ್ನಡಕ್ಕೆ ಬಂದ ತಮಿಳಿನ ವೈರಮುತ್ತು–೫೫ ಕವಿತೆಗಳು

ಡಾ|| ಬಿ. ಸಿ. ನಾಗೇಂದ್ರ ಕುಮಾರ್




ಲೇಖಕರು : **ವೈರಮುತ್ತು** ಅನುವಾದ : **ಮಲರ್‌ವಿಳಿ**
ಪುಟಗಳು : xviii+೧೭೨ ಬೆಲೆ : ರೂ. ೧೧೦
ಪ್ರಕಾಶನ : **ಕ್ರೈಸ್ಟ್ ಯೂನಿವರ್ಸಿಟಿ**
ಕನ್ನಡ ಸಂಘ, ಬೆಂಗಳೂರು

**ತು**ಳು ಭಾಷಿಕರಾದ ಮಲರ್‌ವಿಳಿ ಹುಟ್ಟಿ ಬೆಳೆದಿದ್ದು ಕನ್ನಡ ನೆಲವಾದ ಬೆಂಗಳೂರಿನಲ್ಲಿ, ಕಲಿತದ್ದು ಕನ್ನಡ ಶಾಲೆಯಲ್ಲಿ; ಮಾಡುತ್ತಿರುವುದು ಕನ್ನಡದ ಪ್ರಾಧ್ಯಾಪಕ ವೃತ್ತಿ. ಹಲವು ವರ್ಷಗಳಿಂದ ಇಲ್ಲೇ ಬಾಳುತ್ತಲಿದ್ದರೂ ಇಲ್ಲಿನ ನೆಲಭಾಷೆಯ ನಂಟು ಅಂಟದ ಹಾಗೆ ದ್ವೀಪಗಳಂತೆ ಜೀವಿಸುವ ಹಲವು ಪರಭಾಷಿಕರಿಗೆ ಮಲರ್‌ವಿಳಿಯವರು ಅಪವಾದದಂತೆಯೂ ಪಾತ್ರಮಾದರಿಯ ಹಾಗೂ ಕಾಣಿಸುತ್ತಾರೆ.

ಭಾಷಾಂತರವೆನ್ನುವುದು ಶುಷ್ಕ ಕ್ರಿಯೆಯಲ್ಲ, ಅದೊಂದು ಸೃಜನಶೀಲ ಅನುಸಂಧಾನ. ಅದರಲ್ಲೂ ಕವಿತೆಯಂತಹ ಪ್ರತಿಮಾ ಪ್ರಧಾನ ಸಾಹಿತ್ಯ ಪ್ರಕಾರದೊಂದಿಗೆ ವ್ಯವಹರಿಸುವಾಗ ಅನುವಾದಕರಿಗೂ ಕವಿತ್ವದ ಕನಿಷ್ಠ ಗ್ರಹಿಕೆಯಾದರೂ ಇರಬೇಕಾಗುತ್ತದೆ. ಇಂತಹ ಅರ್ಹತೆ ಮಲರ್‌ವಿಳಿಯವರಿಗೆ ಖಂಡಿತವಾಗಿಯೂ ಇದೆ. ಹೀಗಾಗಿಯೇ ವೈರಮುತ್ತು ಅವರು ಈ ಪುಸ್ತಕವನ್ನು ಬಿಡುಗಡೆ ಮಾಡುವಾಗ ಹೇಳಿದ ಈ ಮಾತುಗಳ ಉಲ್ಲೇಖ ಇಲ್ಲಿ ಮುಖ್ಯವೆನಿಸುತ್ತದೆ : ''ಈಕೆ ನನ್ನ ಕವನಗಳ ಭಾವವನ್ನಷ್ಟೆ ಅಲ್ಲ, ಲಯವನ್ನಷ್ಟೆ ಅಲ್ಲ, ಅರ್ಥವನ್ನಷ್ಟೆ ಅಲ್ಲ, ಅವುಗಳ ಹೃದಯವನ್ನೂ ಅನುವಾದದಲ್ಲಿ ತಂದಿದ್ದಾರೆ.'' ಅನುವಾದಕರೊಬ್ಬರು ಹೀಗೆ ಮೂಲ ಲೇಖಕರಿಂದ ಮುಕ್ತಕಂಠ ಶ್ಲಾಘನೆಗೆ ಒಳಗಾಗುವುದಕ್ಕಿಂತ ಬೇರೊಂದು ಪ್ರತಿಫಲ ಇನ್ನೇನಿದೆ! ಏಕೆಂದರೆ ಅನುವಾದಕರು ವಿಶ್ವಾಸಘಾತುಕರೆಂಬ ನಿಂದನೆಗೆ ಗುರಿಯಾಗಿರುವುದೇ ಹೆಚ್ಚು. ವೈರಮುತ್ತು ಅವರ ನೂರಾರು ಕವಿತೆಗಳಲ್ಲಿ ಅನುವಾದಕ್ಕೆ ಹೆಕ್ಕಿಕೊಳ್ಳುವಾಗಲೂ ಮಲರ್‌ವಿಳಿಯವರು ಸೂಕ್ಷ್ಮ ಸಂವೇದನೆಯನ್ನು ಮೆರೆದಿದ್ದಾರೆ. ಹಲವು ವೈವಿಧ್ಯಮಯ ಕವಿತೆಗಳು ಈ ಸಂಕಲನದಲ್ಲಿವೆ. ಈ ಮಾತು ಇಲ್ಲಿನ ಕವನಗಳ ವಸ್ತು, ಶೈಲಿ ಹಾಗೂ ನಿರೂಪಣಾ ತಂತ್ರ, ಈ ಮೂರಕ್ಕೂ ಅನ್ವಯಿಸುತ್ತದೆ. ಇಲ್ಲಿನ ಕವಿತೆಗಳು ನಿರೂಪಣಾ ತಂತ್ರ, ಭಾಷಾವೈವಿಧ್ಯ, ರೂಪಕಾತ್ಮಕತೆ ಮೊದಲಾದ ಒಳಮುಖಿ ವಿಮರ್ಶೆಯ ಮಾನದಂಡಗಳಿಂದಲೂ ಗಟ್ಟಿಯೆನಿಸುವಂತಹವು. ಅದೇ ರೀತಿ ಕಾವ್ಯವಸ್ತು, ಪ್ರಖರ ಸಾಮಾಜಿಕ ಕಳಕಳಿ, ವೈಚಾರಿಕತೆ, ಹೃದಯವಂತಿಕೆ, ಹೋರಾಟದ ಕಿಚ್ಚು ಹಚ್ಚುವ ಪ್ರಗತಿಪರತೆ ಮುಂತಾದ ಸಮಾಜಶಾಸ್ತ್ರೀಯ ವಿಮರ್ಶಾ ಸಿದ್ಧಾಂತದ ನೆಲೆಗೂ ದಕ್ಕುವಂತಾಗಿ, ಏಕೆ ವೈರಮುತ್ತು ಪ್ರಸ್ತುತರಾಗುತ್ತಾರೆ, ಎಂಬ ಪ್ರಶ್ನೆಗೆ ಉತ್ತರರೂಪಿಗಳಾಗಿವೆ.

ಕವನ ಸಂಕಲನದ ಕವಿತೆಗಳ ವೈದಳನಕ್ಕೆ ತೊಡಗುವ ಮೊದಲು ಕವಿ ವೈರಮುತ್ತು ಅವರು ಸಿನಿಮಾ ಕ್ಷೇತ್ರದೊಂದಿಗೆ ಎಡೆಬಿಡದ ನಂಟು ಹೊಂದಿದವರಾದುದರಿಂದ ಒಂದು ಮಾತನ್ನು ತುಲನಾತ್ಮಕವಾಗಿ ಹೇಳಬೇಕೆನಿಸುತ್ತದೆ. ನಮ್ಮ ಕನ್ನಡ ಚಿತ್ರ ರಂಗದಲ್ಲಿ ವೈರಮುತ್ತು ಅವರಿಗೆ ಹೋಲಿಸಬಲ್ಲಂತಹ ಗೀತರಚನೆಕಾರರು-ಸಾಹಿತಿಗಳು ಇಲ್ಲ. ಇದನ್ನು ಗುಣಾತ್ಮಕ ದೃಷ್ಟಿಯ ಹೇಳಿಕೆಯಾಗಿ ನೋಡಬೇಕಿಲ್ಲ. ಕನ್ನಡ ಚಿತ್ರರಂಗ ಬಹಳ ಹಿಂದಿನಿಂದಲೂ ನಮ್ಮ ಕವಿಗಳನೇಕರ ಭಾವಗೀತೆಗಳನ್ನು, ಕಾದಂಬರಿಕಾರರ ಕತೆಗಳನ್ನು ಬಳಸಿಕೊಂಡಿದೆ. ಆದರೆ ವೈರಮುತ್ತು ಅವರಂತೆ ಸವ್ಯಸಾಚಿಗಳೆನ್ನಬಹುದಾದ ಉದಾಹರಣೆಗಳು ಕನ್ನಡದಲ್ಲಿಲ್ಲ. ತೆಲುಗಿನಲ್ಲಾದರೂ ಡಾ|| ಸಿ. ನಾರಾಯಣ ರೆಡ್ಡಿಯವರಿದ್ದಾರೆ. ಕಾರಣವೆಂದರೆ, ಇಲ್ಲಿ ಸಾಹಿತ್ಯ ಕೃಷಿಯಲ್ಲಿ ತೊಡಗಿಕೊಂಡಿದ್ದವರು ಸಿನಿಮಾವನ್ನು ಗಂಭೀರವಾಗಿ ತೆಗೆದುಕೊಳ್ಳಲಿಲ್ಲ. (ಲಂಕೇಶ್, ಚಂದ್ರಶೇಖರ ಕಂಬಾರ ಮುಂತಾದವರು ಹಾಡುಗಳನ್ನು ಬರೆದಿದ್ದು ತಮ್ಮ ಸಿನಿಮಾಗಳಿಗಷ್ಟೇ. ತರಾಸು, ಲಕ್ಷ್ಮೀನಾರಾಯಣ ಭಟ್ಟ, ಸಿದ್ದಲಿಂಗಯ್ಯ ಮೊದಲಾದವರು ಅಲ್ಲೊಂದು ಇಲ್ಲೊಂದು ರಚನೆಗಳಿಗಷ್ಟೇ ಸೀಮಿತಗೊಳಿಸಿಕೊಂಡರು. ಇತ್ತೀಚೆಗೆ ಈ ಮಾತುಗಳಿಗೆ ಅಪವಾದವಾಗಿ ಜಯಂತ ಕಾಯ್ಕಿಣಿ ಕಂಡುಬರುತ್ತಾರೆ). ಅದೇ ರೀತಿ ಸಿನಿಮಾಗಾಗಿಯೇ ಗೀತ ರಚನೆ ಮಾಡುತ್ತಿದ್ದರೂ ನೈಜಕಾವ್ಯದ ಧಾತುಗಳನ್ನು ಹಿಡಿದು ಒಳ್ಳೆಯ ಕವಿಗಳಾಗಬಲ್ಲಂಥವರು ಈ ನಿಟ್ಟಿನಲ್ಲಿ ಗಮನ ಹರಿಸಲಿಲ್ಲ. ವೈರಮುತ್ತು ಅವರು ಸಂದರ್ಭಾನುಸಾರವಾಗಿ ಈಗಾಗಲೇ ಸಿದ್ಧಗೊಂಡ ರಾಗಕ್ಕೆ ಅನುಗುಣವಾಗಿ ಹಾಡುಗಳನ್ನು ಬರೆಯಬೇಕಾದ ಸಿನಿಮಾ ಮಾಧ್ಯಮಕ್ಕಾಗಿಯೇ ಏಳು ಸಾವಿರ ಹಾಡುಗಳನ್ನು ಬರೆದಿದ್ದಾರೆ. ಇದರಿಂದ ಕುಂಠಿತಗೊಂಡ ಸೃಜನಶೀಲ ಸ್ವಾತಂತ್ರ್ಯವನ್ನು ತುಂಬಿಕೊಳ್ಳಲಿಕ್ಕಾಗಿಯೇ ಕಾವ್ಯ, ಕಾದಂಬರಿ ಮೊದಲಾದ ಪ್ರಕಾರಗಳಲ್ಲೂ ತೊಡಗಿಕೊಂಡು ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಪದ್ಮಶ್ರೀ, ಡಾಕ್ಟರೇಟ್‌ಗಳಿಗೂ ಭಾಜನರಾಗಿದ್ದಾರೆ. ವಸಾಹತೋತ್ತರ ಚಿಂತನೆಗಳು ಜನಪ್ರಿಯ, ಗಂಭೀರ ಎಂಬ ಅವಳಿ ವೈರುದ್ಧ್ಯಗಳನ್ನು ನಿರಾಕರಿಸುತ್ತಿರುವ ಇಂದಿನ ಸಂದರ್ಭದಲ್ಲಿ ವೈರಮುತ್ತು ಅವರು ಈ ಸಿದ್ಧಾಂತಗಳ ಸೃಜನಶೀಲ ಅವತರಣಿಕೆಯಂತೆ ಕಾಣಿಸುತ್ತಾರೆ.

ವೈರಮುತ್ತು ಅವರ ೫೫ ಕವಿತೆಗಳ ವಸ್ತುವೈವಿಧ್ಯ ಅಗಾಧವಾದದ್ದು. ವಿಮರ್ಶೆಯ ಅನುಕೂಲತೆಯ ದೃಷ್ಟಿಯಿಂದ ಇವುಗಳನ್ನು ಇಲ್ಲಿ ೪ ಭಾಗಗಳಾಗಿ ವಿಂಗಡಿಸಿಕೊಳ್ಳಲಾಗಿದೆ:

೧. ಸಾಮಾಜಿಕ ಹೋರಾಟದ ಆಕ್ಟಿವಿಸ್ಟ್ ಎನ್ನಬಹುದಾದ ಕವಿತೆಗಳು.
೨. ಜೀವನ ದರ್ಶನವನ್ನು ಮಾಡಿಸುವ ಫಿಲಾಸಫಿಕಲ್ ಕವನಗಳು.
೩. ನವಿರು ಭಾವನೆಗಳ ರೊಮ್ಯಾಂಟಿಕ್ ಪದ್ಯಗಳು.
೪. ಸೃಜನಶೀಲತೆ ಕುರಿತಂಥವು.

ತಾಯ ಎದೆಯ
ಕತ್ತರಿಸುವುದ ಕಂಡು
ಬೆದರಿ ಓಡಿದ ಮಗು
ತಂದೆಯ ತಲೆಬುರುಡೆಯಲಿ
ಎಡವಿ ಬಿತ್ತಂತೆ (ರಕ್ತಶಾಸನ)

– ಕ್ರೌರ್ಯದ ಪರಮಾವಧಿಗೆ ಇದಕ್ಕಿಂತ ಅದ್ಭುತ ರೂಪಕ ಬೇಕಾಗಿಲ್ಲ. ಹೀಗೆ ಬೆಚ್ಚಿಬೀಳಿಸುವ, ಮನಸ್ಸನ್ನು ಹಿಂಡಿ ಕಾಡುವ ಗುಣ ಈ ಹೋರಾಟದ ಕವಿತೆಗಳಿಗಿದೆ. ಸಾದತ್ ಹಸನ್ ಮಂಟೋ ಬರೆದ ಅತಿ ಸಣ್ಣ ಕತೆಗಳ ಭಾವತೀವ್ರತೆ ಇಂತಹ ಸಾಲುಗಳಲ್ಲಿ ಎಡೆಕಿರಿದಿದೆ. ಈ ಕವನವು ಶ್ರೀಲಂಕಾದಲ್ಲಿ ನಡೆದ ಜನಾಂಗೀಯ ಕಗ್ಗೊಲೆಗೆ ಸಂಬಂಧಿಸಿದ್ದು. ಈ ರೀತಿಯ ಪ್ರತಿಭಟನೆಯ ದನಿಯ ಕವನಗಳು ಕೇವಲ ಯಾವುದೋ ಸಂಘಟನೆಯೊಂದರ ಮ್ಯಾನಿಫೆಸ್ಟೊ ಆಗದಂತೆ ಕಲೆಗಾರಿಕೆಯಲ್ಲಿಯೂ ಗೆಲ್ಲುವಂತೆ ಮಾಡುವ ಶಕ್ತಿ ವೈರಮುತ್ತು ಅವರ ಲೇಖನಿಯಲ್ಲಿ ಅಡಗಿದೆ. 'ಒಂದು ನದಿಯ ವಿಧಿ' ಕವನವನ್ನು ಈ ಮಾತುಗಳಿಗೆ ಋಜುವಾತಾಗಿ ನೋಡಬಹುದು. ಮೈತುಂಬಿ ಹರಿಯುತ್ತಿದ್ದ ನದಿಯೊಂದು ನಾಲ್ಕು ದಶಕಗಳಲ್ಲಿ ಅವಸಾನಮುಖಿ ಅವಸ್ಥಾಂತರವನ್ನು ಹೊಂದುವ ಬಗೆಯನ್ನು ಈ ಕವಿತೆ ಕಟ್ಟಿಕೊಡುತ್ತದೆ. ಇದು ಪರಿಸರ ಪ್ರೇಮಿಯೊಬ್ಬನ ಹಳಹಳಿಕೆಯಾಗಷ್ಟೇ ಉಳಿಯದೆ ಬರಡಾಗುತ್ತಿರುವ ಜೀವನದ ಪ್ರತಿಮೆಯೂ ಆಗಿ



ಚಿತ್ರಣಗೊಳ್ಳುತ್ತದೆ. ವ್ಯಕ್ತವಾಗಿ ಪ್ರಕಟಗೊಳ್ಳದಿದ್ದರೂ ಮುಂದಿನ ಪೀಳಿಗೆಗೆ ನಾವು ಬರಡನ್ನು ಬಳುವಳಿಯಾಗಿ ಬಿಟ್ಟು ಹೋಗುತ್ತಿದ್ದೇವೆ ಎನ್ನುವ ಆತ್ಮನಿಂದನೆ ಅಂತಸ್ಥವಾಗಿ ಕಾಣಿಸುತ್ತದೆ :

*ಅಣುಸ್ಥಾವರಗಳ ನಿಟ್ಟುಸಿರು*
*ಗಿರಣಿಗಳ ಕಪ್ಪುಸಿರು*
*ಕಾರ್ಖಾನೆಗಳ ಬಿಸಿಯುಸಿರು*
*ಎಲ್ಲ ಮಿಶ್ರಣಗೊಂಡರೆ*
*ಮುಂದಿನ ಶತಮಾನದಿ*
*ಮನುಕುಲಕ್ಕೆ ಉಳಿಗಾಲವೋ ?*

(*ಅಮೃತದೊಳಗೆ ವಿಷ*)

–ಎಂದು ನೇರವಾದ ಪ್ರಶ್ನೆಯನ್ನೂ ಕವಿ ಹಾಕುತ್ತಾರೆ. ಹೀಗೆ ಇಲ್ಲಿನ ಕವಿತೆಗಳ ಒಳಗೊಳಗೇ ಅಂತರ್ ಸಂಬಂಧದ ಎಳೆಯು ಹೆಣೆದುಕೊಂಡಿದೆ. ಅಂದರೆ ಒಂದರ ಮುಂದುವರಿಕೆಯಾಗಿ ಮತ್ತೊಂದು ಕವನವನ್ನು ಓದಿಕೊಳ್ಳಬಹುದು.

ರಾಜಕೀಯ-ರಾಜಕಾರಣಿಗಳ ನಾಜೂಕಿನ ಭಾಷೆಯನ್ನು ಐತಿಹಾಸಿಕ ಪಲ್ಲಟಗಳೊಂದಿಗೆ ಅರ್ಥಾಂತರಗೊಳಿಸಿ ಗ್ರಹಿಸಬೇಕೆಂಬ ಕವಿಮಾತನ್ನೂ ಇವರ ಕಾವ್ಯ ಹೇಳುತ್ತದೆ:

*ಅರಸರಿಗಲ್ಲಯ್ಯಾ*
*ಗೌರವ ?*
*ಎಲ್ಲರೂ ಈ ನಾಡಿನ*
*ಮಂತ್ರಿಗಳಾಗುವುದು ಎಂದು ?*

(*ಎಲ್ಲರೂ ಈ ನಾಡಿನ ಅರಸರು*)

'ಕಬ್ಬಿಣ ಬಡಿವ ಗುಲಾಬಿಗಳೇ' ಶೀರ್ಷಿಕೆಯೇ ಬಾಲಕಾರ್ಮಿಕರ ಬವಣೆಯನ್ನು ಬಿಚ್ಚಿಡುವ ಬೃಹತ್ ಗ್ರಂಥದಂತಿದೆ. 'ನೆಹರು ಮಹಾಶಯನೆ, ಮಕ್ಕಳ ದಿನಾಚರಣೆ ಆಚರಿಸಬೇಕು ಕರೆಯಿರಿ ಮಕ್ಕಳ' ಎಂಬ ವ್ಯಂಗ್ಯದೊಂದಿಗೆ ಶುರುವಾಗುವ ಈ ಕವನ ಶಿವಕಾಶಿಯ ಪಟಾಕಿ ಕಾರ್ಖಾನೆಗಳಲ್ಲಿ, ಕಾಶ್ಮೀರದ ಕಂಬಳಿ ಉದ್ದಿಮೆಗಳಲ್ಲಿ, ಪಶ್ಚಿಮ ಬಂಗಾಳದ ಇಟ್ಟಿಗೆ ಗೂಡುಗಳಲ್ಲಿ, ಸೂರತ್ತಿನ ವಜ್ರದ ಗಣಿಗಳಲ್ಲಿ, ದೆಹಲಿಯ ಟೀ ಅಂಗಡಿಗಳಲ್ಲಿ, ಫಿರೋಜಾಬಾದಿನ ಗಾಜಿನ ಬಳೆ ತಯಾರಿಕೆಯಲ್ಲಿ ಬದುಕ ಕಳೆದುಕೊಳ್ಳುತ್ತಿರುವ ಹಸುಳೆಗಳ ದಾರುಣ ಚಿತ್ರಣ ನುಡಿರೂಪದಲ್ಲಿ ಅನುರಣಿಸಿದೆ:

*ನೆಹರೂಜಿ*
*ಆ ತಳಿರುಗಳಿಲ್ಲದೆ*
*ಮಕ್ಕಳ ದಿನಾಚರಣೆ*
*ಆಚರಿಸಿದಲ್ಲಿ*
*ಅಂಗಿಯಲ್ಲಿ ನಾನೂ*
*ಖಂಡಿತವಾಗಿ ಧರಿಸುವೆ*
*ಒಂದು ಕಪ್ಪು ಗುಲಾಬಿಯನು*

– ಎಂಬ ಸಾಲುಗಳು ನೆಹರು ತಮ್ಮ ಕೋಟಿನಲ್ಲಿ ಸದಾ ಧರಿಸುತ್ತಿದ್ದ ಬಣ್ಣದ ಅಲಂಕಾರಿಕ ಗುಲಾಬಿಗೆ ಸೆಡ್ಡು ಹೊಡೆಯುವಂತೆ ಅಂತ್ಯಗೊಳ್ಳುತ್ತವೆ.

ಇತಿಹಾಸ ಹಾಗೂ ಪುರಾಣಗಳಿಂದ ವೈರಮುತ್ತು ಅವರು ವಸ್ತು, ಪಾತ್ರ, ಸನ್ನಿವೇಶಗಳನ್ನು ಹೆಕ್ಕಿಕೊಂಡು, ಅವುಗಳನ್ನು ಸಮಕಾಲೀನ ಅರ್ಥಕ್ಕೆ ದುಡಿಸಿಕೊಳ್ಳುವ




**ಪಾಲಿಸುವುದಕ್ಕಲ್ಲ, ಕಾನೂನು ಉಲ್ಲಂಘಿಸಲು ಎಷ್ಟೆಲ್ಲ ದಾರಿಗಳಿವೆ ಅಂತ ಅಭ್ಯಾಸ ಮಾಡ್ತಿದ್ದೆ!**

ಬಗೆ ವಿಶಿಷ್ಟವಾದುದು. 'ರಾಮಂದಿರಿಗಿಂದು ರಕ್ತವಿಲ್ಲ', 'ನಿರಾಕರಿಸಲ್ಪಟ್ಟವರು' ಮೊದಲಾದ ಕವಿತೆಗಳನ್ನು ಈ ನಿಟ್ಟಿನಿಂದ ನೋಡಬಹುದು. ಹಲವು ಬಗೆಯ ನಿರೂಪಣಾ ತಂತ್ರಗಳನ್ನು ಬಳಸುವ ವೈರಮುತ್ತು ಲೇಖನಿಯ ನವನವೋನ್ಮೇಶ ಶಾಲಿನಿಗೆ ಶಿಖರ ನಿದರ್ಶನ 'ಹೆಣ್ಣು ನಿನ್ನೆ-ಇಂದು-ನಾಳೆ'. ಇತಿಹಾಸ, ಆಧುನಿಕ ಆಧುನಿಕೋತ್ತರ ಕಾಲಗಳಲ್ಲಿ ಸ್ಥಿತ್ಯಂತರಗೊಳ್ಳುತ್ತಿರುವ ಮಹಿಳೆಯ ಎಚ್ಚೆತ್ತ ಪ್ರಜ್ಞಾಪಾತಳಿಯ ಪ್ರತಿಭಟನೆಯ ನೆಲೆಯನ್ನು ಈ ಕವಿತೆ ಉಪಮೀಕರಿಸಿರುವ ಕ್ರಮ ಅನನ್ಯವಾಗಿದೆ. 'ಆಹ್ವಾನ' ಕವಿತೆಯಂತೂ ಸಂಭೋಗದ ಕರೆಯಂತೆ ಆರಂಭವಾಗಿ ತಾಯಿಯ ಒಡಲತ್ತ ಸೆಳೆಯುವ, ಪ್ರಕೃತಿಯ ಮೂಲ ಚೈತನ್ಯ(ಅನಿಮಾ)ವೇ ಆಗಿಬಿಡುವ ಊರ್ಧ್ವಮುಖಿ ಅರ್ಥಸಂಚಾರ ಅಚ್ಚರಿ ಹುಟ್ಟಿಸುತ್ತದೆ. 'ಇರುವೆಗಳೊಂದಿಗೆ ಸಂವಾದ' ಕುವೆಂಪು ಅವರ ಸಾಮಾನ್ಯತೆಯಲ್ಲಿ ಅಸಮಾನ್ಯತೆಯನ್ನು ಕಾಣುವ ದರ್ಶನದಂಥದ್ದು. ಕ್ಷುದ್ರಜೀವಿಯೆಂದುಕೊಂಡಿರುವ ಇರುವೆಯ ಮುಂದೆ ಮಾನವನ ಅಲ್ಪತೆಯನ್ನು ಪ್ರತಿಪಾದಿಸುವ ಕವಿ 'ಇಲ್ಲಿ ಯಾವುದೂ ಅಮುಖ್ಯವಲ್ಲ' ಎಂದು ಮನಗಂಡವನು. 'ಮರಗಳೊಂದಿಗೆ ಸಂವಾದಿಸುವೆ' ಸಹ ಇದೇ ಬಗೆಯ ಕವನ. ವೈರಮುತ್ತು ಒಂದು ರೀತಿಯಲ್ಲಿ ಮರಣಪ್ರಜ್ಞೆಯ ಕವಿ. ಸಾವಿನ ಸಾತತ್ಯದಲ್ಲಿ ಬದುಕಿನ ಪೂರ್ಣತೆ ಇದೇ ಎನ್ನುವುದು ಮುತ್ತು ಅವರ ನಿಲುವು. ಹೀಗಾಗಿ ಮರಣವೆನ್ನುವುದನ್ನು ಇವರು ಋಣಾತ್ಮಕವಾಗಿ ವ್ಯಾಖ್ಯಾನಿಸಿಕೊಳ್ಳುವುದಿಲ್ಲ. ಆದರೆ ಮಾನವ ನಿರ್ಮಿತ ಹಿಂಸೆ ಇವರ ಕವಿ ಮನವನ್ನು ಬಹುವಾಗಿ ಘಾಸಿಗೊಳಿಸಿದೆ. 'ರೆಕ್ಕೆಯಾಯಣ' ಕವಿತೆಗೆ ಪ್ರೇರಕವಾದ ಸನ್ನಿವೇಶವನ್ನು ಪೀಠಿಕೆಯಲ್ಲಿ ಹೀಗೆ ಬರೆದಿದ್ದಾರೆ : 'ತೇನಿ ತಾಲ್ಲೂಕಿನ ಜಯಮಂಗಲದಲ್ಲಿರುವ 'ವೇಟ್ಟುವನ್ನಕುಳಂ' ಪಕ್ಷಿಧಾಮವ ಅರಸಿ ವಲಸೆ ಬಂದಿದ್ದ ವಿದೇಶಿ ಹಕ್ಕಿಯೊಂದು ಸ್ವದೇಶಿ ಬಂದೂಕಿನಿಂದ ಕೊಲ್ಲಲ್ಪಟ್ಟಿದ್ದರಿಂದ ನನ್ನ ಮಾಂಸಾಹಾರಿ ಮನಸ್ಸಿಗೂ ಮರುಕವುಂಟಾಯಿತು.' ಈ ಕವನವು ಧ್ವನಿಪೂರ್ಣತೆಯಿಂದ ಸಮಕಾಲೀನ ಭಯೋತ್ಪಾದನೆಯು ಹರಡಿರುವ ಹೆಣ ಸುಟ್ಟ ಕಮಟು ವಾಸನೆಯನ್ನು ಪಸರಿಸಿ ಸಂವೇದನಾಶೀಲ ಮನಸ್ಸುಗಳನ್ನು ಭಾರವಾಗಿಸುತ್ತದೆ.

ನವೋದಯದ ಪರಿಸರ ಪ್ರೇಮ, ಮಾನವೀಯತೆ, ನವ್ಯದ ಅಂತರ್ಮುಖತೆ, ಬಂಡಾಯದ ಕೆಚ್ಚು, ಸ್ತ್ರೀವಾದದ ಲಿಂಗತಾರತಮ್ಯ ವಿರೋಧಿ ನೆಲೆ ಹಾಗೂ ಜಾಗತೀಕರಣದ ಸಂಕೀರ್ಣ ಅನುಭವಗಳು ಈ ಕವನಗಳಲ್ಲಿ ಹಾಸುಹೊಕ್ಕಾಗಿ ಆಧುನಿಕ ಕನ್ನಡ ಸಾಹಿತ್ಯದ ವಿವಿಧ ಘಟ್ಟಗಳನ್ನು ನೆನಪಿಸುತ್ತವೆ. ಸವ್ಯಸಾಚಿ ವೈರಮುತ್ತು ಅವರಿಗೆ ಸಿನಿಮಾ ಗೀತೆಗಳು ಸಿದ್ಧಿಸಿರುವಂತೆಯೇ ಸಾಹಿತ್ಯವೂ ಕರಗತವಾಗಿದೆ.

ಅನುವಾದದ ಬಗ್ಗೆ ಹೇಳುವಾಗ ಮೇಲೆ ವಿವರಿಸಲಾದ ಗುಣಗಳ ಜತೆಗೆ ಕೆಲವು ಕೊರತೆಗಳನ್ನೂ ಮಲರ್‌ವಿಳಿಯವರು ಮೀರಬೇಕಿದೆ. ಕೆಲವು ಕಡೆ ಅರ್ಥ ಪ್ರಧಾನತೆಗೆ ಹೆಚ್ಚಿನ ಗಮನ ಹರಿಸಿ,ಲಯವನ್ನು ಕಡೆಗಣಿಸಲಾಗಿದೆ. ತಮಿಳು ಸಂಸ್ಕೃತಿಯ ಪರಿಚಯವಿಲ್ಲದಿರುವ ಕನ್ನಡ ಓದುಗರಿಗೆ ಅನುಬಂಧದಲ್ಲಿ ನೀಡಿರುವ ಟಿಪ್ಪಣಿಗಳಿಂದ ಉಪಯೋಗವಿದೆಯಾದರೂ ಮತ್ತಷ್ಟು ವಿವರಗಳ ಅಗತ್ಯವಿತ್ತು ಎನಿಸುತ್ತದೆ. ಉದಾಹರಣೆಗೆ :

*ಹಿಂದೆಲ್ಲಾ*
'*ಆಂಡಾಳ*'*ನ್ನು ಓದಲು ಹೇಳುತ್ತಿದ್ದ*
*ಅಪ್ಪ*
*ಇಂದು*
'*ಪಟ್ಟಿನತ್ತಾರಾ*'*ದರೂ ಪರವಾಗಿಲ್ಲ*
*ಎನ್ನುತ್ತಾರೆ.*

ಇಲ್ಲಿನ 'ಆಂಡಾಳ್' ಹಾಗೂ 'ಪಟ್ಟಿನತ್ತಾರ'ರು ರೂಪಕಗಳಾಗಿ ಮೂಡಿಬಂದಿರುವ ಬಗೆ ಅನುಬಂಧದ ಪರಾಮರ್ಶೆಯ ನಂತರವೂ ಗ್ರಹೀತವಾಗುವುದಿಲ್ಲ. ಯಥಾನುವಾದಕ್ಕೆ ನಿಷ್ಠರಾಗುವುದಕ್ಕಿಂತ ಭಾವಾನುವಾದದ ನೆಲೆಯತ್ತಲೂ ಚಿತ್ತ ಹರಿಸಿದರೆ ಮಲರ್‌ವಿಳಿಯವರಿಂದ 'ಶಿಲಪ್ಪದಿಕಾರಂ'ನಂತಹ, ಇನ್ನೂ ಕನ್ನಡಕ್ಕೆ ಅನುವಾದಗೊಳ್ಳದ ಸುಂದರ ಪ್ರೇಮ ಕಾದಂಬರಿಯಂತಹ ಕೃತಿಯನ್ನು ನಿರೀಕ್ಷಿಸಬಹುದಾಗಿದೆ. ಕ್ರೈಸ್ಟ್ ಯೂನಿವರ್ಸಿಟಿಯವರು ಈ ಹೊತ್ತಿಗೆಯನ್ನು ಬಹಳ ಅಂದವಾಗಿ ಹೊರತಂದಿದ್ದಾರೆ. ಹಿರಿಯ ಸಾಹಿತಿ ಶೇಷನಾರಾಯಣರು ಸಾಕಷ್ಟು ಒಳನೋಟಗಳುಳ್ಳ ಮುನ್ನುಡಿಯನ್ನು ಬರೆದಿದ್ದಾರೆ. ಕೆಲವು ಕವಿತೆಗಳ ಹುಟ್ಟಿಗೆ ಕಾರಣವಾದ ಹಿನ್ನೆಲೆಯನ್ನು ಟಿಪ್ಪಣಿ ರೂಪದಲ್ಲಿ ನೀಡಿರುವುದು ಸೂಕ್ತವಾಗಿದೆ.

ಕಡೆಯಲ್ಲಿ ಹೇಳಲೇಬೇಕಾದ ಒಂದು ಮಾತು. ವೈರಮುತ್ತು ಅವರು ಸೃಜನಶೀಲ ಪ್ರಕ್ರಿಯೆಯ ಸ್ವರೂಪದ ಸಂಕೀರ್ಣತೆಯ ಬಗೆಗೆ ಗಾಢವಾಗಿ ಚಿಂತನಮಂಥನಗಳನ್ನು ನಡೆಸಿದ್ದಾರೆ. ಆದುದರಿಂದಲೇ ಅವರಿಗೆ ತಮ್ಮ ಲೇಖನಿಯ ಬಗ್ಗೆ ಬಹಳಷ್ಟು ಹೆಮ್ಮೆ, ಅಚಲವಾದ ಹೆಗ್ಗಳಿಕೆ.

*ನನ್ನ ಕವಿತೆ*
*ನನ್ನ ಭಾಷೆಗೊಂದು ಉಡುಪಾಗಿದೆ.*
*ನಾನು ಸ್ವಾರ್ಥಕ್ಕಾಗಿ ಬರೆಯುವುದ*

(೫೮ನೇ ಪುಟಕ್ಕೆ)

# ಬಹುಮುಖ ಪ್ರತಿಭೆಯ ಭೂಪೇನ್ ಹಜಾರಿಕ

**ಯು. ಎಸ್. ವೆಂಕಟರಾಮನ್**

ನಮ್ಮ ದೇಶದ ಈಶಾನ್ಯ ರಾಜ್ಯ ಅಸ್ಸಾಮಿನ ಸಣ್ಣ ಪಟ್ಟಣ, ಭಾರತ – ಮಯಿನ್‌ಮಾರ್ ಗಡಿಯಲ್ಲಿರುವ ಸದಿಯ ಎಂಬಲ್ಲಿ ೧೯೨೬ರಲ್ಲಿ ಭೂಪೇನ್ ಹಜಾರಿಕ ಜನಿಸಿದರು. ಇನ್ನೂ ಬಾಲ್ಯಾವಸ್ಥೆಯಲ್ಲಿರುವಾಗಲೇ ಭೂಪೇನ್ ಅದ್ಭುತ ಪ್ರತಿಭೆ ತೋರಿದರು. ಐದು ವರ್ಷ ವಯಸ್ಸಿನಲ್ಲಿ ಬಹಿರಂಗವಾಗಿ ಶಾಲೆಯಲ್ಲಿ ಹಾಡಿದರು. ಅಂದು ಮುಖ್ಯ ಅತಿಥಿಯಾಗಿ ಆಗಮಿಸಿದ್ದ, ಅಸ್ಸಾಮಿ ಸಾಹಿತ್ಯ ಸಾರ್ವಭೌಮ ಲಕ್ಷ್ಮೀಕಾಂತ ಬೇಜ್‌ಬರೂವ ಮಗುವನ್ನು ಮೆಚ್ಚಿಕೊಂಡರು.

ಹತ್ತನೇ ವಯಸ್ಸಿನಲ್ಲಿರುವಾಗಲೇ ಭೂಪೇನ್‌ನ ಧ್ವನಿ ಮುದ್ರಿತವಾಯಿತು. ಜ್ಯೋತಿಪ್ರಸಾದ್ ಮತ್ತು ವಿಷ್ಣುರಭ 'ಜಯಮತಿ' ಎಂಬ ಸಂಗೀತ ನಾಟಕಕ್ಕೆ ಹಾಡುಗಳನ್ನು ಧ್ವನಿಮುದ್ರಿಸಲು ಹತ್ತು ವರ್ಷದ ಹಜಾರಿಕಾನನ್ನು ಆಯ್ಕೆಮಾಡಿದರು. ಧ್ವನಿ ಮುದ್ರಣಕ್ಕಾಗಿ ಕಲ್ಕತ್ತದಲ್ಲಿನ ಅರೋರ ಸ್ಟುಡಿಯೋವಿಗೆ ಪದೇ ಪದೇ ಹೋಗಬೇಕಾಯಿತು. ಆ ಹುಡುಗನ ಸಂಗೀತ ಮೆಚ್ಚಿದ ಸೆನೋಲಿ ಕಂಪನಿಯವರು ಅವನದೇ ಹಾಡುಗಳ ಸಂಕಲನವನ್ನು ತರಲು ನಿಶ್ಚಯಿಸಿದರು. ಈ ಸಂಕಲನದ ವಿವರಣೆಯನ್ನು ಹೀಗೆ ಬರೆಯಲಾಗಿತ್ತು: ''ಬಾಲಕ ಭೂಪೇನ್ ಹಜಾರಿಕ ಹವ್ಯಾಸಿ ಸಂಗೀತಗಾರ, ಹಿಸ್ ಮಾಸ್ಟರ್ಸ್ ಆಫ್ ಇಂಡಿಯಾದ ಕಲಾವಿದರಲ್ಲಿ ಅತ್ಯಂತ ಕಿರಿಯವ.''

ಜ್ಯೋತಿ ಪ್ರಸಾದ್ ಮತ್ತು ವಿಷ್ಣುರಭ ಬಾಲಕನ ಸಹೃದಯ ಪೋಷಕರಾದರು. ಇವರ ಪ್ರಭಾವ ಮಹತ್ತರವಾಗಿತ್ತು. ಇಬ್ಬರೂ ಸಮಾಜ ಪರಿವರ್ತನೆಯ ಬಗ್ಗೆ ಒಮ್ಮತಾಭಿಪ್ರಾಯ ಹೊಂದಿದ್ದರೂ, ಕಾರ್ಯಾಚರಣೆಯ ಬಗ್ಗೆ ವಿಭಿನ್ನಮನಸ್ಕರಾಗಿದ್ದರು. ಜ್ಯೋತಿಪ್ರಸಾದ್ ಆದರ್ಶವಾದಿ ಹಾಗೂ ಅಧ್ಯಾತ್ಮವಾದಿ. ವಿಷ್ಣುರಭ ಕಮ್ಯುನಿಸ್ಟ್ ಸಿದ್ಧಾಂತ ಒಪ್ಪಿದ ಕ್ರಾಂತಿಕಾರಿ. ವಿಷ್ಣುರಭ ತನ್ನ ಗುರುವೆಂದು ಭೂಪೇನ್ ಹೇಳುತ್ತಾರೆ.

೧೯೪೦ರಲ್ಲಿ ತೇಜ್‌ಪುರದಲ್ಲಿ ಭೂಪೇನ್ ಮೆಟ್ರಿಕ್ಯುಲೇಷನ್ ಪರೀಕ್ಷೆ ಮುಗಿಸಿದರು. ಆಗ ಅವರ ತಂದೆಗೆ ಗೌಹಾತಿಗೆ ವರ್ಗವಾಯಿತು. ಅಲ್ಲಿನ ಕಾಟನ್ ಕಾಲೇಜಿಗೆ ಇಂಟರ್ ಮೀಡಿಯಟ್ ವ್ಯಾಸಂಗಕ್ಕಾಗಿ ಸೇರಿದರು. ಆ ಸಂದರ್ಭದಲ್ಲಿ ೧೦,೦೦೦ ರೂಪಾಯಿಗಳ ತಲೆದಂಡ ಹೊತ್ತಿದ್ದು ತಲೆಮರೆಸಿಕೊಂಡಿದ್ದ ವಿಷ್ಣುರಭ ಭೂಗತ ಚಟುವಟಿಕೆಯಲ್ಲಿ ತೊಡಗಿದ್ದರು. ಇವರನ್ನು ಯಾವುದೇ ರೀತಿ ಸಂಪರ್ಕಿಸಕೂಡದೆಂಬ ಕಟ್ಟಾಜ್ಞೆಯನ್ನು ಅವರ ತಂದೆ ನೀಡಿದ್ದರು. ವಿದ್ಯಾರ್ಥಿ ಸಂಘಟನೆಯಲ್ಲಿದ್ದ ಭೂಪೇನ್ ರಾಷ್ಟ್ರೀಯತೆ ಹುರಿದುಂಬಿಸುವ ಹಾಡುಗಳನ್ನು ರಚಿಸಿ ತಾನೇ ಹಾಡುತ್ತಾ ಸಕ್ರಿಯವಾಗಿ ಚಳುವಳಿಯಲ್ಲಿ ಭಾಗವಹಿಸಿದರು. ಅಲ್ಲದೆ ಆಗಿಂದಾಗ್ಗೆ ವಿಷ್ಣುರಭರವರನ್ನು ರಹಸ್ಯವಾಗಿ ಬೆಟ್ಟದ ತಪ್ಪಲಿನಲ್ಲಿ ಭೇಟಿ ಮಾಡುತ್ತಿದ್ದರು. ಇದರಿಂದ ಕೋಪಗೊಂಡ ಅವರ ತಂದೆ ಮುದ್ದು ಮಗನ ಕಪಾಳಕ್ಕೆ ಬಿರುಸಾಗಿ ಹೊಡೆದರು. ಆ ಸಮಯದಲ್ಲಿ ತಂದೆ ಮಗ ಇಬ್ಬರೂ ಏನೂ ಮಾತನಾಡಲಿಲ್ಲ. ಭೂಪೇನ್ ಚಳುವಳಿಯಲ್ಲಿ ಭಾಗವಹಿಸಿದ್ದರೂ ೧೯೪೨ರಲ್ಲಿ ಇಂಟರ್‌ಮೀಡಿಯಟ್ ಪರೀಕ್ಷೆಯಲ್ಲಿ ತೇರ್ಗಡೆಯಾಗಿ ಬೆನಾರಸ್ ಹಿಂದೂ ವಿಶ್ವವಿದ್ಯಾಲಯದಲ್ಲಿ ಪದವಿ ವ್ಯಾಸಂಗಕ್ಕಾಗಿ ಸೇರಿದರು. ಬನಾರಸ್ ವಿಶ್ವವಿದ್ಯಾನಿಲಯದಲ್ಲಿ, ಭಾರತದಲ್ಲಿನ ಎಲ್ಲಾ ರಾಜ್ಯಗಳಿಂದ ಬಂದಿದ್ದವರಲ್ಲದೆ, ವಿದೇಶೀಯರು ಸಹ ವಿದ್ಯಾರ್ಥಿಗಳಾಗಿದ್ದರು. ಭೂಪೇನ್ ಭಾರತದ ಹಾಗೂ ವಿಶ್ವದ ವೈಶಾಲ್ಯತೆಯನ್ನು ಅರಿತುಕೊಂಡರು. ೧೯೪೬ರಲ್ಲಿ ಸ್ನಾತಕೋತ್ತರ ಪದವಿ ಪಡೆದು ತಮ್ಮ ಊರು ಸೇರಿದರು. ಆ ಸಮಯದಲ್ಲಿ ತಂದೆಯವರಿಗೆ ಸಿಗುತ್ತಿದ್ದ ವಿಶ್ರಾಂತಿ ವೇತನ ಕುಟುಂಬ ನಿರ್ವಹಣೆಗೆ ಸಾಕಾಗುತ್ತಿರಲಿಲ್ಲ. ಭೂಪೇನ್ ಅನಿವಾರ್ಯವಾಗಿ ಕೆಲಸಕ್ಕೆ ಸೇರಬೇಕಾಗಿತ್ತು. ಹೀಗಾಗಿ, ಅವರು ಸಂಗೀತ, ಚಲನಚಿತ್ರ, ಇವುಗಳಲ್ಲಿ ತೊಡಗಬೇಕೆಂದು ಇಚ್ಛಿಸಿದರು. ಕಾಲೇಜಿನಲ್ಲಿ ಉಪಾಧ್ಯಾಯರಾಗಿ ಕೆಲಸಕ್ಕೆ ಸೇರಿದರು. ಆದರೆ ಸಂಬಳ ಬರುತ್ತಿದ್ದರೂ ಕೆಲಸದಲ್ಲಿ ತೃಪ್ತಿಯಿರಲಿಲ್ಲ. ಇದೇ ಸಮಯದಲ್ಲಿ, ಒಂದೂವರೆ ವರ್ಷ ಉಪಾಧ್ಯಾಯ ವೃತ್ತಿಯಲ್ಲಿ ತೊಡಗಿದ್ದಾಗ ಭೂಪೇನ್‌ರವರಿಗೆ ಗೌಹಾತಿ ಆಕಾಶವಾಣಿಯಲ್ಲಿ ಸಂಗೀತಗಾರನ ನೌಕರಿ ದೊರೆತು, ತಮ್ಮ ಸಂಗೀತ ಹೆಚ್ಚು ಜನರನ್ನು ತಲುಪುತ್ತದೆಯೆಂದು ಸಂತೋಷಪಟ್ಟರು. ಅಲ್ಲಿ ಇತರರ ರಚನೆಗಳನ್ನು ಹಾಡುವುದರೊಂದಿಗೆ ತಾವೇ ರಚಿಸಿದ ಕೃತಿಗಳನ್ನು ಹಾಡತೊಡಗಿದರು. ಇವರ ಸಂಗೀತ ಜನಪ್ರಿಯವಾಯಿತು.

೧೯೪೮ರಲ್ಲಿ ಭಾರತೀಯ ಜನತಾ ರಂಗಭೂಮಿ ಸಂಘ ಸ್ಥಾಪನೆಯಾಯಿತು. ಈ ಚಳುವಳಿಯಲ್ಲಿ ರಂಗಭೂಮಿ, ಚಲನಚಿತ್ರ, ಸಂಗೀತ, ಸಾಹಿತ್ಯ, ಇವುಗಳಲ್ಲಿ ತೊಡಗಿರುವ ವೃತ್ತಿಪರರೊಂದಿಗೆ ಬುದ್ಧಿಜೀವಿಗಳು ಸಹ ಸೇರಿದರು. ಕಲಾ ಮಾಧ್ಯಮಗಳ ಮೂಲಕ ಸಾಮಾಜಿಕ ಪರಿವರ್ತನೆ ತರುವುದೇ ಈ ಚಳುವಳಿಯ ಮುಖ್ಯ ಉದ್ದೇಶ. ಅಸ್ಸಾಂನಲ್ಲಿ ಶಾಖೆ ತೆರೆದಾಗ, ಜ್ಯೋತಿಪ್ರಸಾದ್ ಅಧ್ಯಕ್ಷರಾದರು ಮತ್ತು ವಿಷ್ಣುರಭ ಸಕ್ರಿಯ ಸದಸ್ಯರಾದರು. ಇವರಿಬ್ಬರ ಇಚ್ಛೆಗೆ ಅನುಗುಣವಾಗಿ ಭೂಪೇನ್ ಬಹಳ ಉತ್ಸಾಹದಿಂದ ಕೆಲಸ ಆರಂಭಿಸಿದರು. ಈ ಶಾಖೆಯ ಮೊದಲನೆ ಅಧಿವೇಶನಕ್ಕೆ ಬಲರಾಜ ಸಹಾನಿ, ಹೇಮಾಂಗ ಬಿಶ್ವಾಸ್ ಮೊದಲಾದ ಪ್ರಮುಖ ಕಲಾವಿದರು ಬಂದಿದ್ದರು.

ಆಕಾಶವಾಣಿಯಲ್ಲಿ ಕೆಲಸದಲ್ಲಿರುವಾಗಲೇ ೧೯೪೯ರಲ್ಲಿ ಅಮೇರಿಕದ ಕೊಲಂಬಿಯ ವಿಶ್ವವಿದ್ಯಾನಿಲಯದಿಂದ ಎರಡು ವರ್ಷಗಳ ವಿದ್ಯಾರ್ಥಿ ವೇತನ ಭೂಪೇನ್‌ಗೆ ಲಭಿಸಿತು.



ಆಕಾಶವಾಣಿಯಿಂದ ರಜಾ ಪಡೆದು ಅಮೆರಿಕಕ್ಕೆ ತೆರಳಿದರು. ಆಗ ಅಮೆರಿಕದಲ್ಲಿ ಮೆಕಾರ್ಥಿ ಪ್ರತಾಪ ಪ್ರಬಲವಾಗಿತ್ತು. ಕಮ್ಯೂನಿಸ್ಟ್ ದ್ವೇಷದಿಂದ 'ಅಮೇರಿಕ ವಿರೋಧಿ ಚಟುವಟಿಕೆಗಳು' ಎಂಬ ಹೆಸರಿನಲ್ಲಿ ಎಲ್ಲಾ ಪ್ರಜಾ ಹಕ್ಕುಗಳನ್ನು ಕಸಿದುಕೊಳ್ಳಲಾಗುತ್ತಿತ್ತು. ಅನುಮಾನದ ಮೇಲೆ ದಸ್ತಗಿರಿ ಮಾಡಿ ಚಿತ್ರ ಹಿಂಸೆ ನೀಡಲಾಗುತ್ತಿತ್ತು. ಸಾಧಾರಣ ಜನರಲ್ಲದೆ ಹೆಸರಾಂತ ವಿಜ್ಞಾನಿಗಳು, ಬುದ್ಧಿಜೀವಿಗಳು, ಕಲಾವಿದರು ಎಲ್ಲರೂ ಈ ವ್ಯಾಪಕ ದೌರ್ಜನ್ಯಕ್ಕೆ ಒಳಪಟ್ಟಿದ್ದರು. ಈ ಸನ್ನಿವೇಶದಲ್ಲಿ ಭೂಪೇನ್ ಅಮೇರಿಕದ ವಿಮಾನ ನಿಲ್ದಾಣದಲ್ಲಿ ಪ್ರಯಾಣಿಕರು ಹೊರಗೆ ಹೋಗುವ ಕ್ಯೂನಲ್ಲಿ ನಿಂತಿದ್ದಾಗ ವಲಸಿಗರ ತನಿಖಾಧಿಕಾರಿಯೊಬ್ಬ ಬಂದು ಅವರನ್ನು ಗುರ್ತಿಸಿ ತನ್ನೊಡನೆ ಬರಬೇಕೆಂದು ಆದೇಶಿಸಿದ್ದು ಭೂಪೇನ್‌ರವರಿಗೆ ಸಿಡಿಲು ಬಡಿದಂತಾಯಿತು. ನಂತರ ಅವರನ್ನು ಎಲ್ಲಿಸ್ ದ್ವೀಪಕ್ಕೆ ವಿಚಾರಣೆಗಾಗಿ ಕರೆದೊಯ್ಯಲಾಯಿತು. ಇದಕ್ಕೆ ಕಾರಣ ಅವರ ಕ್ರಾಂತಿಕಾರಿ ಧೋರಣೆ. ವಿಚಾರಣೆ ದೀರ್ಘವಾಗಿತ್ತು. ಈ ತೊಡಕನ್ನು ಚಾಕಚಕ್ಯತೆಯಿಂದ ಭೂಪೇನ್ ಪರಿಹರಿಸಿಕೊಂಡರು.

ಭೂಪೇನ್‌ರವರ ಸಹಜ ಕುತೂಹಲ ಮನೋಭಾವ, ಅವರನ್ನು ಸಾಧಾರಣವಾಗಿ ವಿದ್ಯಾರ್ಥಿಗಳು ಹೋಗಬಾರದೆನ್ನುವ ಕಡೆಗಳತ್ತ ಸಾಗಿಸಿತು. ಇಂತಹವುಗಳಲ್ಲಿ ಹೇರ್ಲಂ ಒಂದು ಪ್ರದೇಶ. ಇಲ್ಲಿ ನೀಗ್ರೋ ಜನರು ಮೂಲಭೂತ ಸೌಕರ್ಯಗಳಿಲ್ಲದೆ ವಾಸಿಸುತ್ತಿದ್ದು, ತಮ್ಮ ಹಕ್ಕುಗಳಿಗಾಗಿ ಹೋರಾಡುತ್ತಿದ್ದರು. ವಿಶ್ವ ವಿಖ್ಯಾತ ಸಂಗೀತಕಾರ ಪಾಲ್ ರಾಬ್ಸನ್, ಮಾರ್ಟಿನ್ ಲೂತರ್ ಕಿಂಗ್ ಮೊದಲಾದವರು ನಾಯಕತ್ವ ವಹಿಸಿದ್ದರು. ಸ್ವತಃ ಸಂಗೀತಗಾರರಾಗಿದ್ದ ಭೂಪೇನ್, ಪಾಲ್ ರಾಬ್ಸನ್‌ರವರನ್ನು ಬಹಳ ಉತ್ಸಾಹದಿಂದ ಭೇಟಿಯಾಗಿ ಅವರ ಮಿತ್ರರಾದರು. ಇಂತಹ ಸಂಬಂಧಗಳು ಮತ್ತು ಚಟುವಟಿಕೆಗಳು ಅಪಾಯಕಾರಿಯೆಂದು ರಾಯಭಾರಿ ಶ್ರೀಮತಿ ವಿಜಯಲಕ್ಷ್ಮಿ ಪಂಡಿತರೇ ಭೂಪೇನ್‌ರವರಿಗೆ ಎಚ್ಚರಿಕೆ ನೀಡಿದರು. ಭೂಪೇನ್‌ರಂತೆ, ನ್ಯೂಯಾರ್ಕಿನ ಅಂತರರಾಷ್ಟ್ರೀಯ ನಿವಾಸದಲ್ಲಿ ತಂಗಿದ್ದ ಹಾರ್ವಡಿನ ಪ್ರೊಫೆಸರ್ ಅಮಿಯೋ ಚಕ್ರವರ್ತಿ, ಇವರ ಮಾರ್ಗದರ್ಶಿ ಹಾಗೂ ಹಿತೈಷಿಯಾದರು. ಭೂಪೇನ್ ಆದಷ್ಟು ಶೀಘ್ರವಾಗಿ, ಸಾಮೂಹಿಕ ಸಂಪರ್ಕಗಳ ವಿಷಯದಲ್ಲಿ ಸ್ನಾತಕೋತ್ತರ ಪದವಿ ಪಡೆಯಬೇಕೆಂದು ಒತ್ತಾಯಿಸಿದರು. ಈ ಪದವಿ ಪಡೆದಲ್ಲಿ ಮಾತ್ರ ಕೊಲಂಬಿಯಾ ವಿಶ್ವವಿದ್ಯಾಲಯದಲ್ಲಿ ಡಾಕ್ಟರೇಟ್ ಪಡೆಯಲು ಸಾಧ್ಯವೆಂದು ತಿಳಿಸಿದರು. ಇದಕ್ಕೆ ಕಾರಣವೇನೆಂದರೆ ಭೂಪೇನ್‌ರವರು ಭಾರತದಲ್ಲಿ ಪಡೆದಿದ್ದ ಎಂ. ಎ. ಪದವಿ ರಾಜನೀತಿ ಶಾಸ್ತ್ರಕ್ಕೆ ಸಂಬಂಧಿಸದಂತಿತ್ತು. ಈ ಹಿತವಚನವನ್ನು ಪಾಲಿಸಿ, ಎಂ.ಎ. ಮಾಡಿ ನಂತರ ಡಾಕ್ಟರೇಟ್ ಸಹ ಪಡೆದುಕೊಂಡರು. ಅವರು ವಿದ್ಯಾರ್ಥಿಯಾಗಿ ಸಹಪಾಠಿಗಳೊಡನೆ ಉತ್ತಮ ಸಂಬಂಧ ಹೊಂದಿದ್ದರು. ವಿಶ್ವವಿದ್ಯಾನಿಲಯದ ಭಾರತೀಯ ವಿದ್ಯಾರ್ಥಿಗಳ ಸಂಘದ ಕಾರ್ಯದರ್ಶಿಯಾಗಿದ್ದರು. ಅಂತರ ರಾಷ್ಟ್ರೀಯ ಸಮ್ಮೇಳನದಲ್ಲಿ ಶಂಕರ ದೇವರ ಭಕ್ತಿಗೀತೆಯನ್ನು ಹಾಡಿ ಎಲಿನಾರ್ ರೂಸವೆಲ್ಟರಿಂದ ಚಿನ್ನದ ಪದಕ ಪಡೆದರು. ಅಮೆರಿಕದಲ್ಲಿದ್ದಾಗ ಅನೇಕ ಪ್ರಮುಖರೊಡನೆ ಸಂಪರ್ಕವಿಟ್ಟುಕೊಂಡಿದ್ದರು. ಹವರ್ಡ್ ಫಾಸ್ಟ್, ಆರನಾಲ್ಡ್ ಟೊಯನ್‌ಬಿ, ಸಾಮರ್‌ಸೆಟ್ ಮಾಂ, ಪರ್ಲ್ ಎಸ್. ಬಕ್, ಪಾಲ್ ರಾಬ್ಸನ್ ಇತ್ಯಾದಿ.

ಭೂಪೇನ್ ಅಮೆರಿಕದಲ್ಲಿದ್ದ ನಾಲ್ಕು ವರ್ಷಗಳಲ್ಲಿ ಅಲ್ಲಿನ ಸಾಮಾಜಿಕ ಸಮಸ್ಯೆಗಳನ್ನು ಅರಿತುಕೊಂಡರು. ಅಮೆರಿಕದಲ್ಲಿ ಅವರು ಪ್ರೀತಿಸಿದ ಗುಜರಾತಿ ಮೂಲದ ಪ್ರಿಯಂವದ ಪಟೇಲರನ್ನು ೧೯೫೦ರಲ್ಲಿ ವಿವಾಹವಾದರು. ೧೯೫೩ರಲ್ಲಿ ಅವರಿಗೆ ತೇಜ್ ಎಂಬ ಪುತ್ರ ಜನಿಸಿದ. ಭೂಪೇನ್ ಭಾರತಕ್ಕೆ ಹಿಂದಿರುಗಿ ಗೌಹಾತಿ ತಲುಪಿದಾಗ ಅವರಿಗೆ ಆಶ್ಚರ್ಯವೊಂದು ಕಾದಿತ್ತು. ಮಂಜೂರಾದ ರಜ ದಿನಗಳಿಗಿಂತ ಹೆಚ್ಚಾಗಿ ಗೈರುಹಾಜರಾಗಿದ್ದರಿಂದ ಆಕಾಶವಾಣಿಯ ಕೆಲಸ ಕಳೆದುಕೊಂಡರು. ೧೯೫೫ರಲ್ಲಿ ಶಿಕ್ಷಣ ಇಲಾಖೆಯಲ್ಲಿ ಉಪಾಧ್ಯಾಯರ ಕೆಲಸ ಸಿಕ್ಕಿತು. ಭೂಪೇನ್ ಉಪಾಧ್ಯಾಯರಾಗಿ ಕೆಲಸ ಮಾಡುತ್ತಿದ್ದಾಗ ಹೆಲ್ಸಿಂಕಿಯಲ್ಲಿ ಜರುಗಿದ ವಿಶ್ವಶಾಂತಿ ಸಮ್ಮೇಳನಕ್ಕೆ ಪ್ರತಿನಿಧಿಯಾಗಿ ಹೋಗಿದ್ದರು. ಮೂರು ದಿನ ಹೆಚ್ಚಾಗಿದ್ದ ಗೈರು ಹಾಜರಿಕೆಗೆ ಅಧಿಕಾರಿಗಳು ಸಂಬಳ ಹಿಡಿದುಕೊಂಡರು. ಭೂಪೇನ್ ಇದನ್ನು ಸಹಿಸದೆ ಕೆಲಸಕ್ಕೆ ರಾಜೀನಾಮೆ ನೀಡಿದರು. ಆಗ ಅವರು ಸ್ವತಂತ್ರವಾಗಿ ಹಾಡಿನಿಂದ ಮತ್ತು ಬರಹದಿಂದ ಬಂದ ಅಲ್ಪ ಹಣದಲ್ಲಿ ಜೀವನ ಸಾಗಿಸಬೇಕಿತ್ತು. ಶ್ರೀಮಂತ ಕುಟುಂಬದಿಂದ ಬಂದಿದ್ದ ಪ್ರಿಯಂವದ ಈ ಕಷ್ಟ ಜೀವನಕ್ಕೆ ಒಗ್ಗಿಕೊಳ್ಳಲಾರದೆ, ಮಗ ತೇಜ್‌ನೊಂದಿಗೆ ತವರುಮನೆ ಸೇರಿ ಭೂಪೇನ್‌ರವರನ್ನು ತ್ಯಜಿಸಿದಳು.

ಅಮೇರಿಕದ ಹಾಲಿವುಡ್‌ನಲ್ಲಿನ ಅಧ್ಯಯನವನ್ನು ಬಳಸಿಕೊಂಡು ಚಲನಚಿತ್ರ ರಂಗಕ್ಕಿಳಿದರು. 'ಎಕ ಬತೋರ್ ಸುರ್' (ಹಿಂದುಳಿದ ಮಾಧುರ್ಯದ ಹಾದಿ) ಎಂಬ ಮೊದಲನೆ ಅಸ್ಸಾಮಿ ಚಲನ ಚಿತ್ರ ತಯಾರಿಸಿದರು. ಈ ಚಿತ್ರಕ್ಕಾಗಿ ಲತಾ ಮಂಗೇಶ್‌ಕರ್ ಹಾಡಿದ 'ಜೋಣಕರೆರಾತಿ ಅಸಾಮರೆ ಮಾತಿ' ಎಂಬ ಬಹಳ ಇಂಪಾದ ಹಾಡು ಜನಪ್ರಿಯವಾಯಿತು. ಈ ಚಿತ್ರ ಒಂದು ವಿಧದಲ್ಲಿ ಆತ್ಮಕತೆ ಎನ್ನಬಹುದು. ಅಸ್ಸಾಂನಲ್ಲಿ ಚಿತ್ರ ತಯಾರಿಸುವುದು ಸುಲಭಸಾಧ್ಯವಾಗಿರಲಿಲ್ಲ. ಹಣದ ಹೂಡಿಕೆ, ಚಿತ್ರ ನಿರ್ಮಾಣದ ಸಾಧನೆಗಳ ಕೊರತೆ, ಸ್ಟುಡಿಯೋಗಳಿಗಾಗಿ ಕಲ್ಕತ್ತೆಗೆ ಹೋಗುವುದು, ತಂತ್ರಜ್ಞರನ್ನು ಇತರೆ ಕಡೆಗಳಿಂದ ಕರೆಸುವುದು ಇಂತಹ ಹಲವಾರು ಸಮಸ್ಯೆಗಳಿದ್ದವು. ಈ ಸನ್ನಿವೇಶದಲ್ಲಿ ಭೂಪೇನ್ ಚಲನಚಿತ್ರ ನಿರ್ಮಾಣಕ್ಕಾಗಿ ಸಾರ್ವಜನಿಕರಿಂದ ಹಣ ಪಡೆಯಲು ನಿರ್ಧಾರ ಕೈಗೊಂಡರು. ಅವರನ್ನು ಹಾಡಲು ಕರೆದ ಎಲ್ಲಾ ಸಭೆಗಳಲ್ಲಿ ಹಾಗೂ ಕಛೇರಿಗಳಲ್ಲಿ ತಲಾ ಒಂದೊಂದು ರೂಪಾಯಿ ನೀಡಲು ಕೋರುತ್ತಿದ್ದರು. ಒಂದು ವಿಶೇಷವೇನೆಂದರೆ ರೈತರು ಸಹ ಹೆಚ್ಚಿನ ರೀತಿ ಧನಸಹಾಯ ಮಾಡಿದರು. ಈ ಹಣದಿಂದ ತಯಾರಿಸಿದ 'ಪ್ರತಿಧ್ವನಿ' ಚಿತ್ರ ರಾಷ್ಟ್ರೀಯ ಪುರಸ್ಕಾರ ಪಡೆಯಿತು. ಅಸ್ಸಾಮಿ, ಬಂಗಾಲಿ ಮತ್ತು ಹಿಂದಿ ಚಿತ್ರಗಳಿಗಾಗಿ ಹಾಡುಗಳನ್ನು ರಚಿಸಿದರು. ಸ್ವತಃ ಹಾಡಿದರು, ನಿರ್ದೇಶಕರಾದರು. ಚಲನಚಿತ್ರ ರಂಗದಲ್ಲಿ ಪ್ರಖ್ಯಾತರಾದರು.

ಭೂಪೇನ್ ಸಾಮಾನ್ಯ ಜನರೊಂದಿಗೆ ಗುರುತಿಸಿಕೊಂಡಿದ್ದರು. ಸಾಮಾನ್ಯ ಜನರ ಕಷ್ಟಕಾರ್ಪಣ್ಯಗಳನ್ನು ಕಂಡಿದ್ದರು ಮತ್ತು ತಾವೇ ಸ್ವತಃ ಅನುಭವಿಸಿದ್ದರು. ಹೀಗಾಗಿ ಅವರ ಕೃತಿಗಳೆಲ್ಲಾ ಜನರ ಜೀವನಕ್ಕೆ ಸ್ಪಂದಿಸುತ್ತಿದ್ದವು. ಶೋಷಣೆರಹಿತ, ವರ್ಗರಹಿತ ಸಮಾಜದ ಕಲ್ಪನೆ ಅವರಿಗಿದ್ದರೂ ಪಕ್ಷಾತೀತರಾಗಿದ್ದರು.(ಒಮ್ಮೆ ಮಾತ್ರ ಭಾಜಪ ಅಭ್ಯರ್ಥಿ !)

ಭೂಪೇನ್‌ರವರಿಗೆ ಅನೇಕ ಪುರಸ್ಕಾರಗಳು ಲಭಿಸಿವೆ. ಅದರಲ್ಲಿ ಮುಖ್ಯವಾದವು ಪದ್ಮಭೂಷಣ ಮತ್ತು ದಾದಾ ಸಾಹೇಬ್ ಫಾಲ್ಕೆ ಪುರಸ್ಕಾರ. ಈ ವರ್ಷ (೨೦೧೨) ಗಣರಾಜ್ಯ ದಿನದಂದು ಮರಣೋತ್ತರ ಪದ್ಮವಿಭೂಷಣ ಪ್ರಶಸ್ತಿ ನೀಡಿ ಗೌರವಿಸಲಾಗಿದೆ.

**ಯು. ಎಸ್. ವೆಂಕಟರಾಮನ್**
ನಂ. ೩೮೭, ೮ನೇ ಮುಖ್ಯರಸ್ತೆ, ಮಿಲ್ಕ್ ಕಾಲೋನಿ , ಬೆಂಗಳೂರು -೫೬೦ ೦೫೫

---

(೫೬ನೇ ಪುಟದಿಂದ)

*ಬಿಟ್ಟುಬಿಟ್ಟೆ.*
*ಸಮೂಹದ ಸಮ್ಮತಿಯೊಂದಿಗೆ*
*ನಾನು*
*ಸೊಕ್ಕಿನಿಂದಿರುವೆ*
*(ಹೂಳಿದರೂ ಮೊಳಕೆಯೊಡೆವೆ)*

– ಈ ಸೊಕ್ಕು ಅಹಂಕಾರವಲ್ಲ. ಜನರ ಪ್ರತಿನಿಧಿಯಾಗಿ ಲೇಖಕ ಪಡೆದುಕೊಂಡಿರುವ ಆತ್ಮವಿಶ್ವಾಸ. ಇಂಥ ಆತ್ಮವಿಶ್ವಾಸದ ಹಿಂದೆ ಹುಂಬತನವಿಲ್ಲ. ಕಾಲಪ್ರವಾಹದಲ್ಲಿ ಗಟ್ಟಿ ಯಾವುದು, ಜೊಳ್ಳು ಯಾವುದು, ಎಂಬ ತಕ್ಕಡಿಯಿಂದ ಯಾವ ಕಲಾವಿದನೂ ತಪ್ಪಿಸಿಕೊಳ್ಳಲಾರನೆಂಬ ವಿಮರ್ಶಾ ಪ್ರಜ್ಞೆಯ ತಳಹದಿಯಲ್ಲಿ ಮೂಡಿಬಂದಿದೆ.

*ಆದರೆ*
*ನಾಳಿನ*
*ಕಾಲದ ವಿಮರ್ಶೆ*
*ನಿಮ್ಮ ಹೆಣಗಳನ್ನು ಕೂಡ*
*ಅಗೆದು ತೆಗೆದುಕೊಂಡು ಬಂದು*
*ನೇಣಿಗೆ ಹಾಕುತ್ತೆ*
*ಎಂಬುದು ಮಾತ್ರ*
*ನೆನಪಿರಲಿ (ನಡೆಸಿರಿ)*

ಕಾವ್ಯವೆನ್ನುವುದು ಕೇವಲ ಕಲಾಕೌಶಲಗಳನ್ನು ಮೆರೆಸುವ ವ್ಯಕ್ತಿನಿಷ್ಠ ಕಸುಬುದಾರಿಕೆ ಎಂಬ ನೆಲೆಯನ್ನು ನಿರಾಕರಿಸಿ ಅದು ಸದಾ ಜನಸಮುದಾಯಗಳ ಜೀವನಲಯಗಳಿಗೆ ಸ್ಪಂದಿಸುವ, ಸಂವೇದಿಸುವ ಕ್ರಿಯಾಶೀಲ ಸೃಷ್ಟಿಯೆಂಬುದು ವೈರಮುತ್ತು ಅವರ ಗ್ರಹಿಕೆ. ಅವರು ಎಂತಹ ಜಾನಪದ ಸೊಗಡಿನ ಕವಿಯೆನ್ನುವುದಕ್ಕೆ ರೈತರ ಸಂಕಷ್ಟಗಳನ್ನು ಗ್ರಾಮ್ಯ ಪರಿಭಾಷೆಯಲ್ಲಿ ನಿರೂಪಿಸುವ 'ಬಿತ್ತನೆ ಜೋಳ' ಕವಿತೆಯೇ ಸಾಕ್ಷಿ. ಹೊಡಿ, ಬಡಿ, ಲವ್-ಡವ್, ಕಾಳ್‌ಹಾಕು ಮುಂತಾದ ಕೊಳಕು ರೂಪದ ಗೀತೆಗಳನ್ನು ರಚಿಸುವುದರಲ್ಲಿ ಮುಳುಗಿರುವ ನಮ್ಮ ಕನ್ನಡದ ಸಿನಿಮಾ ಕವಿಗಳು ವೈರಮುತ್ತು ಅವರ ಕವಿತೆಯನ್ನು ಓದಬೇಕಿದೆ. ಭಾಷಾಂತರ ಕ್ಷೇತ್ರಕ್ಕೆ ಇದೊಂದು ಮುಖ್ಯವಾದ ಕೊಡುಗೆಯಾಗಿದೆ. ಇದಕ್ಕಾಗಿ ಮಲರ್‌ವಿಳಿಯವರು ವೈರಮುತ್ತು ಅಷ್ಟೇ ಅಭಿನಂದನಾರ್ಹರು.

**ಡಾ|| ಬಿ. ಸಿ. ನಾಗೇಂದ್ರ ಕುಮಾರ್**
'ಅವ್ವ', ನಂ. ೬೮೪/೪೩, ೪ನೇ ಮುಖ್ಯರಸ್ತೆ, ಶ್ರೀನಗರ
ಬೆಂಗಳೂರು - ೫೬೦ ೦೫೦



# ಇರಾನ್-ಸಿರಿಯಾಗಳ ಮೇಲೆ ತೂಗು ಕತ್ತಿ

**ಪ**ಶ್ಚಿಮ ಏಶಿಯಾದಲ್ಲೀಗ ಪಶ್ಚಿಮ ರಾಷ್ಟ್ರಗಳ ಹಸ್ತಕ್ಷೇಪಕ್ಕೆ ಸಿರಿಯಾ ಮತ್ತು ಇರಾನ್‌ಗಳ ಸರದಿ. ಪ್ರಯತ್ನ ಸಫಲವಾದರೆ ತೈಲ ಸಂಪದ್ಭರಿತ ಈ ಪ್ರದೇಶ ನ್ಯಾಟೋ ರಾಷ್ಟ್ರಗಳ ಸುಬರ್ದಿಗೆ ಬಂದಂತೆ. ಈ ಪ್ರದೇಶದಲ್ಲಿ ತನ್ನ ಅಧಿನಾಯಕತ್ವ ಸ್ಥಾಪಿಸುವುದು ಅಮೆರಿಕದ ಬಹುದಿನಗಳ ಬಯಕೆ. ವಿಶ್ವಸಂಸ್ಥೆಯ ಭದ್ರತಾ ಮಂಡಳಿಯಲ್ಲಿ ರಷ್ಯ-ಚೀಣಾಗಳ ವೀಟೋದಿಂದ ಸಿರಿಯಾ ಸದ್ಯಕ್ಕೆ ಬಚಾವು. ಇರಾನಿನ ಮೇಲೆ ಆಕ್ರಮಣ ನಡೆಸಲು ಅಮೆರಿಕ ತುದಿಗಾಲ ಮೇಲೆ ನಿಂತಿದೆ. ಇದು ಹಲವು ವರ್ಷಗಳಿಂದ ಬೆಳೆದು ಬಂದಿರುವ ಹಗೆತನ. ಇರಾನಿನಲ್ಲಿ ಅಮೆರಿಕದ ಆಪ್ತನಾಗಿದ್ದ ಷಾ ದೊರೆಯ ಆಡಳಿತ ಅಂತ್ಯಗೊಂಡಾಗಿನಿಂದಲೂ ಅಮೆರಿಕ ಇರಾನಿನ ಮೇಲೆ ಆಕ್ರೋಶಗೊಂಡಿದೆ. ಇರಾನಿನ ಮೇಲೂ ಇರಾಕಿನಂತೆ ಸಾಮೂಹಿಕ ವಿನಾಶಕಾರಿ ಅಸ್ತ್ರಗಳ ದಾಸ್ತಾನಿನ ಆರೋಪ ಹೊರಿಸಿದ್ದು ಅಧ್ಯಕ್ಷ ಜಾರ್ಜ್ ಬುಷ್. ಇರಾನ್ ಅಣ್ವಸ್ತ್ರ ತಯಾರಿಕೆಯಲ್ಲಿ ತೊಡಗಿದೆ ಎನ್ನುವುದೇ ಆರೋಪ. ಇರಾಕಿನ ಮೇಲಿನ ಮಿಥ್ಯಾರೋಪ ಬಯಲಾಗಿದೆ. ಅದರ ಆಕ್ರಮಣ ಮತ್ತು ಅಧ್ಯಕ್ಷ ಸದ್ದಾಮ ಹುಸೇನನ ಪತನ ಅಮೆರಿಕದ ಮುಖ್ಯ ಗುರಿಯಾಗಿತ್ತು. ಆದರೆ ಇರಾನಿನ ವಿಚಾರದಲ್ಲಿ ದುಸ್ಸಾಹಸ ಸುಲಭವಾಗಿಲ್ಲ. ಸಿರಿಯಾದಲ್ಲಿ ಮಧ್ಯೆ ಪ್ರವೇಶಿಸಲು ಸಬೂಬು ಮಾನವ ಹಕ್ಕುಗಳ ಉಲ್ಲಂಘನೆ.




ಅರಬ್ ಜಗತ್ತಿನಲ್ಲಿ ಕಳೆದ ವರ್ಷ ಸರ್ವಾಧಿಕಾರಿ ಆಡಳಿತಗಳ ವಿರುದ್ಧ ಪ್ರಾರಂಭವಾದ ಆಂದೋಳನ ಪಾಶ್ಚಾತ್ಯ ರಾಷ್ಟ್ರಗಳಿಗೆ ವರದಾನವಾಗಿ ಪರಿಣಮಿಸಿತು. ಹಠಾತ್ತಾಗಿ ಟ್ಯುನೀಷಿಯದಿಂದ ಪ್ರಾರಂಭವಾದ ಜನಾಂದೋಳನ ಕಾಡ್ಗಿಚ್ಚಿನಂತೆ ಹರಡಿದ್ದು ಒಂದು ವಿಶೇಷ ಬೆಳವಣಿಗೆ. ಸರಿಯಾದ ನಾಯಕತ್ವ ಹಾಗೂ ಗೊತ್ತುಗುರಿಯಿಲ್ಲದ ಚಳವಳಿಗಳು ಬಲಪಂಥೀಯರ, ಮೂಲಭೂತವಾದಿಗಳ ಕೈಗೆ ಸಿಲುಕಿ ಪಶ್ಚಿಮ ರಾಷ್ಟ್ರಗಳ ಪ್ರವೇಶಕ್ಕೆ ಅನುವಾದ್ದು ಒಂದು ದುರಂತ. ಈಜಿಪ್ಟ್, ಲಿಬಿಯಾಗಳು ಅದಕ್ಕೆ ಉದಾಹರಣೆ. ಇನ್ನೂ ಈ ದೇಶಗಳಲ್ಲಿ ಅಸ್ಥಿರತೆ ಕಾಡುತ್ತಿದೆ. ವಿದೇಶೀ ತೈಲ ಕಂಪನಿಗಳು ತೈಲ ಸಂಪತ್ತಿನ ಮೇಲೆ ಹಿಡಿತ ಸಾಧಿಸಿವೆ. ಹೊಸ ಒಪ್ಪಂದ ಮಾಡಿಕೊಂಡು, ಟ್ಯುನೀಷಿಯ ಮತ್ತು ಈಜಿಪ್ಟ್‌ಗಳಲ್ಲಿ ಪರೋಕ್ಷ ಬೆಂಬಲ ನೀಡಿದ ಪಶ್ಚಿಮ ರಾಷ್ಟ್ರಗಳು, ಲಿಬಿಯಾದಲ್ಲಿ ಗಡಾಫಿ ಆಡಳಿತವನ್ನು ಅಂತ್ಯಗೊಳಿಸಲು ನೇರವಾಗಿ ಹಸ್ತಕ್ಷೇಪದಲ್ಲಿ ತೊಡಗಿದವು. ಸಿರಿಯಾದಲ್ಲಿ ಕೂಡ ಅದೇ ರೀತಿ ಮಧ್ಯೆ ಪ್ರವೇಶಿಸಲು ನಡೆಸಿದ ಪ್ರಯತ್ನ ಕೈಗೂಡಿಲ್ಲ. ಕಳೆದ ಹನ್ನೊಂದು ತಿಂಗಳಿಂದ ಸಿರಿಯಾದ ಅಧ್ಯಕ್ಷ ಬಷಾರ್ ಅಲ್ ಅಸ್ಸಾದ್ ಆಡಳಿತದ ವಿರುದ್ಧ ಜನ ಹೋರಾಟ ನಡೆಸುತ್ತಿದ್ದಾರೆ. ಇದುವರೆಗೆ ಸಂಭವಿಸಿದ ಘರ್ಷಣೆಗಳಲ್ಲಿ ೬೦೦೦ ಅಮಾಯಕ ಜನರು ಹತರಾಗಿದ್ದಾರೆಂದು ಅಂದಾಜು. ಇತ್ತೀಚೆಗೆ ನಡೆದ ಹತ್ಯಾಕಾಂಡದಲ್ಲಿ ಒಂದೇ ದಿನ ಇನ್ನೂರು ಮಂದಿ ಸಾವಿಗೀಡಾದರೆಂದು ವರದಿ. ಸಿರಿಯಾದಲ್ಲಿ ನಡೆಯುತ್ತಿರುವ ಈ ಆಂದೋಳನಕ್ಕೆ ಹೊರಗಿನಿಂದ ಕುಮ್ಮಕ್ಕು ಇದೆ ಎನ್ನುವುದು ಸಾಬೀತಾಗಿದೆ. ಲಿಬಿಯಾದಲ್ಲಿರುವಂತೆ ಸಿರಿಯಾದಲ್ಲಿ ಅಂತರ್ಯುದ್ಧದ ಪರಿಸ್ಥಿತಿ ಇಲ್ಲ. ಆದರೂ ಪಶ್ಚಿಮ ರಾಷ್ಟ್ರಗಳು ಹಸ್ತಕ್ಷೇಪ ನಡೆಸಲು ಮುಂದಾಗಿವೆ. ವಿಶ್ವಸಂಸ್ಥೆಯ ಭದ್ರತಾ ಮಂಡಳಿಯಲ್ಲಿ ಸಿರಿಯಾದ ಅಧ್ಯಕ್ಷ ಅಸ್ಸಾದ್ ಪದತ್ಯಾಗ ಮಾಡಬೇಕೆಂದು ಒತ್ತಾಯಪಡಿಸುವ ನಿರ್ಣಯವೊಂದನ್ನು ಅರಬ್ ರಾಷ್ಟ್ರಗಳು ಮಂಡಿಸಿದ್ದುವು. ರಷ್ಯ ಮತ್ತು ಚೀಣಾಗಳ ವಿಟೋ ಹಕ್ಕು ಚಲಾವಣೆಯಿಂದಾಗಿ ನಿರ್ಣಯ ಬಿದ್ದುಹೋಯಿತು. ಅಮೆರಿಕ, ಬ್ರಿಟನ್, ಫ್ರಾನ್ಸ್, ಭಾರತವನ್ನು ಒಳಗೊಂಡಂತೆ ಹದಿಮೂರು ರಾಷ್ಟ್ರಗಳು ಬೆಂಬಲ ಸೂಚಿಸಿದ್ದುವು. ಇಂಥ ಒಂದು ನಿರ್ಣಯ ಮಂಡಿತವಾಗುತ್ತಿದ್ದುದು ಎರಡನೇ ಬಾರಿ. ಕಳೆದ ಅಕ್ಟೋಬರ್ ತಿಂಗಳಲ್ಲೂ ರಷ್ಯ, ಚೀಣಾಗಳು ನಿರ್ಣಯವನ್ನು ವಿರೋಧಿಸಿದ್ದುವು. ಭಾರತ ಅಮೆರಿಕದ ಜೊತೆ ಸಹಕರಿಸುತ್ತಿರುವುದು ಹೊಸದೇನಲ್ಲ. ಆದರೂ ಈ ವಿಚಾರದಲ್ಲಿ ತಟಸ್ಥವಾಗಿರ ಬಹುದಾಗಿತ್ತು. ನಿರ್ಣಯ ಅಂಗೀಕಾರವಾಗಿದ್ದರೆ ಹಸ್ತಕ್ಷೇಪ ಸುಲಭವಾಗುತ್ತಿತ್ತು.

ಇರಾನಿನ ಮೇಲೆ ಯುದ್ಧಕ್ಕಾಗಿ ಅಮೆರಿಕ ಸಕಲ ಸಿದ್ಧತೆಗಳನ್ನು ಮಾಡಿಕೊಂಡಿದೆ. ಇತ್ತೀಚೆಗೆ ಕುವೇತ್‌ನಲ್ಲಿ ತನ್ನ ಸೈನಿಕ ನೆಲೆಯನ್ನು ಬಲಗೊಳಿಸಲು ೧೫,೦೦೦ ಸೈನಿಕರನ್ನು ಹೊಸದಾಗಿ ತಂದಿರಿಸಿದೆ. ಇರಾಕಿನಿಂದ ಹಿಂತೆಗೆದುಕೊಂಡ ಸೈನ್ಯದಲ್ಲಿನ ಒಂದು ಭಾಗ ಇನ್ನೂ ಕುವೇತ್‌ನಲ್ಲೇ ಇದೆ. ಇದರ ಮೇಲೆ ಅಮೆರಿಕದ ಐದನೇ ನೌಕಾದಳ ಗಲ್ಫ್ ಪ್ರದೇಶದಲ್ಲಿ ಗಸ್ತು ತಿರುಗುತ್ತಿದೆ. ಮಿಲಿಟರಿ ಕವಾಯಿತುಗಳನ್ನು ನಿರಂತರವಾಗಿ ನಡೆಸುತ್ತಿದೆ. ಈ ಪ್ರದೇಶದಲ್ಲಿ ತನ್ನ ಚೇಲನಂತೆ ಇರುವ ಇಸ್ರೇಲ್‌ಅನ್ನು ಇರಾನಿನ ವಿರುದ್ಧ ಎತ್ತಿಕಟ್ಟಿದೆ. ಈ ಮೊದಲೇ ಆರ್ಥಿಕ ದಿಗ್ಬಂಧನ ಹೇರಿರುವ ಅಮೆರಿಕ ಹಲವು ರೀತಿಯಲ್ಲಿ ಇರಾನಿನ ಆಡಳಿತದ ಮೇಲೆ ಒತ್ತಡ ಹೇರುತ್ತಿದೆ. ಈ ಮಧ್ಯೆ ಯೂರೋಪಿಯನ್ ಯೂನಿಯನ್ನಿಗೆ ಸೇರಿದ ರಾಷ್ಟ್ರಗಳು ಇರಾನಿನ ತೈಲ ಆಮದಿನ ಮೇಲೆ ದಿಗ್ಬಂಧನ ಹೊರಿಸಲು ನಿರ್ಧರಿಸಿವೆ. ಮುಂದಿನ ಜುಲೈ ೧ ರಿಂದ ಇರಾನಿನಿಂದ ತೈಲವನ್ನು ಆಮದು ಮಾಡಿಕೊಳ್ಳದಿರಲು ತೀರ್ಮಾನಿಸಿವೆ. ಇರಾನಿನ ತೈಲ ಉತ್ಪಾದನೆಯಲ್ಲಿ ಐದನೇ ಒಂದು ಭಾಗವನ್ನು ಯೂರೋಪಿನ ದೇಶಗಳು ಆಮದುಮಾಡಿಕೊಳ್ಳುತ್ತಿವೆ. ಯೂರೋಪಿನ ದೇಶಗಳ ಈ ನಿರ್ಧಾರ ಯುದ್ಧಕ್ಕೆ ನಾಂದಿ ಎಂದು ಹೇಳಬಹುದು. ಇರಾನ್ ಇದಕ್ಕೆ ಪ್ರತಿಯಾಗಿ ಗಲ್ಫ್ ಪ್ರದೇಶದಿಂದ ತೈಲ ಸಾಗಾಣಿಕೆಗೆ ಮುಖ್ಯ ದ್ವಾರವಾಗಿರುವ ಹೊರ್ಮುಜ್ ಜಲಮಾರ್ಗದ ಮೇಲೆ ದಿಗ್ಬಂಧನ ಹೇರಲು ನಿರ್ಧರಿಸಿದೆ. ಇಪ್ಪತ್ತು ಮೈಲಿಗಳ ಅಗಲವಿರುವ ಈ ಜಲಮಾರ್ಗದಿಂದ ಪ್ರಪಂಚದ ಮೂರನೆ ಒಂದು ಭಾಗ ತೈಲ ಸಾಗಣೆಯಾಗುತ್ತಿದೆ. ಅಂದರೆ ಸುಮಾರು ೧೭ ಮಿಲಿಯ ಬ್ಯಾರಲ್ ಕಚ್ಚಾತೈಲ ರವಾನೆಯಾಗುತ್ತಿದೆ. ಹಾಗಾದಲ್ಲಿ ಪ್ರಪಂಚದಲ್ಲಿ ತೈಲ ಬೆಲೆಗಳು ಬ್ಯಾರಲ್‌ಗೆ ನೂರು ಡಾಲರುಗಳಿಂತಲೂ ಅಧಿಕ ವಾಗುವುದೆಂದು ನಿರೀಕ್ಷಿಸಲಾಗಿದೆ. ಅಮೆರಿಕ ಈಗಾಗಲೇ ಹೊರ್ಮುಜ್ ಜಲಮಾರ್ಗದ ಮೇಲೆ ದಿಗ್ಬಂಧನ ಹೇರಿದರೆ ಪರಿಣಾಮದ ಬಗ್ಗೆ ಇರಾನಿಗೆ ಎಚ್ಚರಿಕೆ ನೀಡಿದೆ.

ಈ ಮಧ್ಯೆ ನವದೆಹಲಿಯಲ್ಲಿ ಇಸ್ರೇಲಿ ರಾಯಭಾರಿ ಕಚೇರಿಯ ವಾಹನವೊಂದರ ಮೇಲೆ ನಡೆದ ಭಯೋತ್ಪಾದಕ ಬಾಂಬು ಸ್ಫೋಟದ ಘಟನೆಗೆ ಇರಾನಿನ ಮೇಲೆ ಗೂಬೆ ಕೂರಿಸಲು ಇಸ್ರೇಲ್ ಆಡಳಿತ ಪ್ರಯತ್ನಿಸುತ್ತಿದೆ. ಪ್ರಧಾನಿ ನಿವಾಸದ ಸಮೀಪದಲ್ಲೇ ಇರುವ ಇಸ್ರೇಲ್ ರಾಯಭಾರಿ ಕಚೇರಿಯ ಸಮೀಪದಲ್ಲಿ ಸಂಭವಿಸಿದ ದುರ್ಘಟನೆಯಲ್ಲಿ ರಾಯಭಾರಿ ಕಚೇರಿಯ ಅಧಿಕಾರಿಯೊಬ್ಬರ ಸಾವು ಒಂದು ದುರಂತ. ಘಟನೆ ಸಂಭವಿಸಿದ ಕೆಲವೇ ನಿಮಿಷಗಳಲ್ಲಿ ಇಸ್ರೇಲಿ ಸರಕಾರ ಇದರ ಹಿಂದೆ ಇರಾನಿನ ಕೈವಾಡ ಇದೆ ಎಂದು ಹೇಳಿಕೆ ನೀಡಿದ್ದು ಆಶ್ಚರ್ಯಕರ. ಇದು ದುರುದ್ದೇಶದಿಂದ ಕೂಡಿದ್ದಾಗಿದೆ ಹಾಗೂ ಇರಾನಿನ ವಿರುದ್ಧ ಯುದ್ಧಕ್ಕೆ ಕಾಲು ಕೆರೆಯುವ ಸಂಚಾಗಿದೆ. ಇನ್ನೂ ತನಿಖೆ ಪ್ರಾರಂಭವಾಗುವುದಕ್ಕೆ ಮುನ್ನವೆ ಇಸ್ರೇಲ್ ಹೇಳಿಕೆ ನೀಡಿರುವುದು ಅದನ್ನು ಸ್ಪಷ್ಟಪಡಿಸಿದೆ.

**ಸೀಯಾರ್ಕೆ**

(೬೧ನೇ ಪುಟಕ್ಕೆ)

# ಮೈಲಾಪುರ ಮೈಲಾರಲಿಂಗನ ಸೇವಾದಾರರು

ರಾಘವೇಂದ್ರ ಭೀಮನಳ್ಳಿ



ಮೈಲಾರಲಿಂಗನ ಸೇವಕರಲ್ಲಿ ಗೊರವರೇ ಪ್ರಮುಖರಾಗಿದ್ದರೂ ಮೈಲಾಪುರ ಕ್ಷೇತ್ರದಲ್ಲಿ ಇನ್ನುಳಿದ ಸೇವಾದಾರರು ಕೂಡ ಕಂಡುಬರುತ್ತಾರೆ. ಅವರಲ್ಲಿ ವಗ್ಗರು, ಕಹಳೆಯವರು, ಕಂಚಾವೀರರು ಮತ್ತು ಗುಡ್ಡದವರು ಪ್ರಮುಖರು. ಈ ಐದು ಜನ ವಿಭಾಗದ ಸೇವಾದಾರರು ಮೈಲಾರಲಿಂಗನ ಪ್ರತಿಯೊಂದು ಆಚರಣೆ ಯಲ್ಲಿಯೂ ಸದಾ ಹಾಜರಿರುತ್ತಾರೆ. ಇವರೆಲ್ಲರು ತಮ್ಮನ್ನು ಮೈಲಾರಲಿಂಗನ ಆಜ್ಞೆಯಂತೆ ಸೇವಕರಾಗಿ ಮುಂದುವರಿದುಕೊಂಡು ಬಂದವರು ಎಂದು ನಂಬಿದ್ದಾರೆ.

**ದೇ**ವರನ್ನು ಇದುವರೆಗೆ ಪ್ರತ್ಯಕ್ಷ ಕಂಡವರಿಲ್ಲ. ಅವನ ವಾಸಸ್ಥಾನ ಕೈಲಾಸವೋ, ವೈಕುಂಠವೋ, ನೋಡಿಬಂದವರಿಲ್ಲ . ನಂಬಿಕೆ ಮಾತ್ರ ಸತ್ಯ. ಆದರೆ ಈ ಭೂಮಿಯ ಮೇಲೆ ಅಸಂಖ್ಯಾತ ದೇವರುಗಳು ಮತ್ತು ದೇವಾಲಯಗಳು ನಮ್ಮ ಕಣ್ಮುಂದೆ ಲಕ್ಷಗಟ್ಟಲೆ ಇರುವುದಂತೂ ಸತ್ಯ. ಅಂತಹ ದೇವರುಗಳ ಕುರಿತು ಸೃಷ್ಟಿಗೊಂಡ ಪುರಾಣ, ಕಾವ್ಯ, ಮಹಾಕಾವ್ಯಗಳ ರಾಶಿ-ರಾಶಿ ಸಾಹಿತ್ಯ ನಮ್ಮ ಗ್ರಂಥ ಭಂಡಾರದಲ್ಲಿವೆ. ಆ ಪುರಾಣ, ಸಾಹಿತ್ಯವನ್ನು ನಂಬಿಕೊಂಡು ಓದುವ, ಕೇಳುವ ಜನಸಮೂಹ ಕೋಟಿಗಟ್ಟಲೆ ಬೆಳೆದಿದೆ. ಅದರಂತೆ ದೇವರುಗಳ ಸೇವೆಗೈಯ್ಯುವ ಸಲುವಾಗಿಯೇ ಕೆಲವು ಬಣಗಳು ತಮ್ಮ ಇಡೀ ಜೀವನವನ್ನು ದೇವರಿಗೆ ಅರ್ಪಿಸಿಕೊಂಡಿರುತ್ತವೆ. ಅಂಥವರಲ್ಲಿ ಯಲ್ಲಮ್ಮನ ಚೌಡಿಕೆಯವರು, ಮಾದೇಶ್ವರನ ಕಂಸಾಳೆಯವರು, ಮಂಟೇಸ್ವಾಮಿಯ ನೀಲಗಾರರಿದ್ದಂತೆ ಮೈಲಾರಲಿಂಗನಿಗೆ ಗೊರವರು ಸೇವಕರಾಗಿರುತ್ತಾರೆ. ಇವರುಗಳ ದಿನನಿತ್ಯದ ಕಾರ್ಯವೇ ದೇವರ ಪೂಜೆ- ಪುನಸ್ಕಾರದ ಜೊತೆಗೆ ದೇವರ ನಾಮಸ್ಮರಣೆ ಮಾಡುತ್ತ ಭಿಕ್ಷಾಟನೆ ಮಾಡಿ ಅದರಿಂದಲೇ ತಮ್ಮ ಜೀವನ ಸಾಗಿಸುವುದಾಗಿರುತ್ತದೆ.

ಮೈಲಾರಲಿಂಗನ ಸೇವಕರಲ್ಲಿ ಗೊರವರೇ ಪ್ರಮುಖ ರಾಗಿದ್ದರೂ ಮೈಲಾಪುರ ಕ್ಷೇತ್ರದಲ್ಲಿ ಇನ್ನುಳಿದ ಸೇವಾದಾರರು ಕೂಡ ಕಂಡುಬರುತ್ತಾರೆ. ಅವರಲ್ಲಿ ವಗ್ಗರು, ಕಹಳೆಯವರು, ಕಂಚಾವೀರರು ಮತ್ತು ಗುಡ್ಡದವರು ಪ್ರಮುಖರು. ಈ ಐದು ಜನ ವಿಭಾಗದ ಸೇವಾದಾರರು ಮೈಲಾರಲಿಂಗನ ಪ್ರತಿಯೊಂದು ಆಚರಣೆ ಯಲ್ಲಿಯೂ ಸದಾ ಹಾಜರಿರುತ್ತಾರೆ. ಇವರೆಲ್ಲರೂ ತಮ್ಮನ್ನು ಮೈಲಾರಲಿಂಗನ ಆಜ್ಞೆಯಂತೆ ಸೇವಕರಾಗಿ ಮುಂದುವರಿದು ಕೊಂಡು ಬಂದವರು ಎಂದು ನಂಬಿದ್ದಾರೆ.

**ಗೊರವರು**

ಮೈಲಾರಲಿಂಗನ ಆರಾಧಕರಲ್ಲಿ ಗೊರವರಿಗೆ ಅಗ್ರಸ್ಥಾನವಿದೆ. ಮೈಲಾಪುರ ಕ್ಷೇತ್ರದಲ್ಲಿ ಕುರುಬ ಜನಾಂಗದವರೇ ಗೊರವದೀಕ್ಷೆ ಪಡೆದುಕೊಂಡು ಅವನ ಸೇವಕರಾಗಿ ಕಾರ್ಯ ನಿರ್ವಹಿಸುತ್ತಾರೆ. ಜಾತ್ರೆ ಸಮಯದಲ್ಲಿ ಕುದುರೆಯನ್ನು ಹೊತ್ತುಕೊಳ್ಳುವುದು, ಸರಪಳಿ ಹರಿಯುವುದು, ಮಲ್ಲಯ್ಯ ಮತ್ತು ಗಂಗೆ ಮಾಳಮ್ಮರ ಮದುವೆ ಶಾಸ್ತ್ರ ನಡೆಸುವುದು ರೂಢಿಯಲ್ಲಿವೆ. ಗೊರವರು ಗಂಡಿನ ಕಡೆಯವರಾದರೆ ವಗ್ಗರು ಹೆಣ್ಣಿನ ಕಡೆಯವರಾಗಿ ಮದುವೆ ಶಾಸ್ತ್ರವನ್ನು ಅಚ್ಚುಕಟ್ಟಾಗಿ ನೆರವೇರಿಸುತ್ತಾರೆ. ಮುಖ್ಯವಾಗಿ ಗೊರವರ ಭಂಡಾರ ಪೂಜೆ ಪ್ರಮುಖವೆನಿಸುತ್ತದೆ.

**ವಗ್ಗರು**

ವಗ್ಗರೆಂದು ಮಲ್ಲಯ್ಯನ ಸೇವೆ ಮಾಡುವ ಇವರು ಕುರುಬ ಜನಾಂಗದವರೇ ಆಗಿದ್ದಾರೆ. ಮಲ್ಲಯ್ಯನ ಪ್ರೀತಿಯ ಪ್ರಾಣಿಗಳಲ್ಲೊಂದಾದ ನಾಯಿಯೇ ಈ ವಗ್ಗರು, ವಗ್ಗೇರು. ಇವರು ಜಾತ್ರೆ, ಉತ್ಸವ ಸಂದರ್ಭಗಳಲ್ಲಿ ಯಾವಾಗಲೂ ಮಲ್ಲಯ್ಯನ ಜೊತೆಯಲ್ಲಿಯೇ ಇರುತ್ತಾರೆ. ಕೊರಳಲ್ಲಿ ಸರಪಳಿ ಹಾಕಿಕೊಂಡು ಬೌ... ಬೌ... ಎಂದು ಯಾವಾಗಲೂ ಬೊಗಳುತ್ತಲೇ ಇರುತ್ತಾರೆ. ಇವರಿಲ್ಲದೆ ಪೂಜಾ ವಿಧಿ-ವಿಧಾನಗಳು ನಡೆಯುವುದೇ ಇಲ್ಲ. ಪ್ರಮುಖವಾಗಿ ದೋಣಿ ಸೇವೆಯ ಸಂದರ್ಭದಲ್ಲಿ ವಗ್ಗರದೇ ಪ್ರಮುಖ ಪಾತ್ರ. ಭಕ್ತರು ತಂದಂಥ ಹಾಲು, ಮೊಸರು, ಬೆಣ್ಣೆ, ತುಪ್ಪ , ಹಣ್ಣು ಮುಂತಾದ ನೈವೇದ್ಯ ಪದಾರ್ಥಗಳನ್ನು ದೋಣಿ ( ಒರಳು) ಯಲ್ಲಿ ತುಂಬಿರುತ್ತಾರೆ. ಅದನ್ನು ಇವರು ನಾಯಿಯಂತೆ ಬೊಗಳಿ ನೇಮಕ್ಕಾಗಿ ಬಾಯಿಯಿಂದಲೇ ಒಂದು ಸಲ ತಿಂದು ನಂತರ ಕೈಯಿಂದ ತೆಗೆದುಕೊಳ್ಳುವ ವಾಡಿಕೆಯುಂಟು. ಹೀಗಾಗಿ ಮೈಲಾಪುರ ಪ್ರದೇಶದಲ್ಲಿ ನಾಯಿಯನ್ನು ಮಲ್ಲಯ್ಯನೆಂದು ಕರೆಯುತ್ತಾರೆ. ಕೆಲವರು ನಾಯಿಗೆ ನಮಸ್ಕರಿಸುತ್ತಾರೆ.

**ಕಹಳೆಯವರು**

ಮೈಲಾಪುರ ಕ್ಷೇತ್ರದಲ್ಲಿ ಕಹಳೆ ನಾದ ಮಾಡುವವರು ಕೂಡ ಕುರುಬ ಜಾತಿಯವರೆ. ಮೈಲಾರಲಿಂಗನು ಮಾರ್ತಾಂಡ ಭೈರವನಾಗಿ ಮಣಿಮಲ್ಲಾಸುರರೊಂದಿಗೆ ಯುದ್ಧ ಸಾರಿದಾಗ ರಣಕಹಳೆಯನ್ನೂದಿಸಿದರ ಪ್ರತೀಕವಾಗಿ ಮೈಲಾರಲಿಂಗನ ಜಾತ್ರೆಯಲ್ಲಿ ಕಹಳೆಯೂದುವ ವಾಡಿಕೆಯಿದೆ. ಬೇಟೆಯಾಡಲು ಹೋಗುವಾಗ ಪಲ್ಲಕ್ಕಿಯನ್ನು ಹೊಲಗದ್ದೆಗಳಲ್ಲಿ ಓಡಾಡಿಸಿಕೊಂಡು ತರುತ್ತಾರೆ. ಆ ಸಮಯದಲ್ಲಿ ಕೂಡ ಕಹಳೆ ನಾದ ಬೇಕೇ ಬೇಕು. ಇವರು ಕೂಡ ಪ್ರಮುಖ ಸೇವಾದಾರರಾಗಿದ್ದಾರೆ.

**ಕಂಚಾವೀರರು**

ಪುರವಂತರಂತೆ ವೇಷ-ಭೂಷಣಗಳನ್ನು ಧರಿಸಿ ವೀರಭದ್ರನ ಅವತಾರ ತಾಳಿ ಒಡಪುಗಳನ್ನು ಹೇಳುವುದರ ಜೊತೆಗೆ ನಾಲಿಗೆ ಪವಾಡ ಮತ್ತು ಶಾಸ್ತ್ರ ಪವಾಡ ಮಾಡುವುದು ಮುಂತಾದ ಕಾರ್ಯಕ್ರಮಗಳನ್ನು ನಡೆಸಿಕೊಡುವ ಇವರು ಮೈಲಾರಲಿಂಗನ ಕಡುವೈರಿಗಳಂತೆ



ಅವನನ್ನು ಪ್ರತಿ ಹೆಜ್ಜೆ ಹೆಜ್ಜೆಗೂ ಒಡಪುಗಳ ಮುಂಖಾಂತರ ತೆಗಳುತ್ತಾರೆ. ಕಂಚಾವೀರರು ರಾಕ್ಷಸರಾದ ಮಣಿಕಾಸುರ, ಮಲ್ಲಾಸುರರ ವಂಶಸ್ಥರಂತೆ ಕಂಡುಬರುತ್ತಾರೆ. ಭೈರವನಾದ ಮಲ್ಲಯ್ಯನೊಂದಿಗೆ ಯುದ್ಧಮಾಡುವ ಸಂದರ್ಭದಲ್ಲಿ ಈ ರಾಕ್ಷಸ ಸಹೋದರರು ಭೈರವನಿಗೆ ಬೈಯುವುದರೊಂದಿಗೆ ಯುದ್ಧಕ್ಕೆ ಅಣಿಗೊಳಿಸುವ ಪ್ರತೀಕವಾಗಿ ಕಂಚಾವೀರರ ಪ್ರಾತ್ಯಕ್ಷಿಕೆ ನಡೆಯುತ್ತದೆ. ಮೈಲಾರಲಿಂಗನ ಉತ್ಸವಮೂರ್ತಿಯು ಬೇಟೆಯಾಡಲೆಂದು ಹೊರಡುವ ಮುಂಚೆಯೇ ಈ ಕಂಚಾವೀರರ ಮನೆತನದ ಯಾವುದೇ ಗಂಡಸರು ಮನೆಯಿಂದ ಹೊರಬರುವುದಿಲ್ಲ. ಬಾಗಿಲ ಚಿಲಕ ಹಾಕಿಕೊಂಡು ಮುಂಜಾನೆಯಿಂದ ಸಾಯಂಕಾಲದವರೆಗೆ ಮನೆಯೊಳಗೆ ಇರುತ್ತಾರೆ. ಕಾರಣ ಮಲ್ಲಯ್ಯನು ರಾಕ್ಷಸರ ಸಂಹಾರಕ್ಕಾಗಿ ಬರುತ್ತಾನೆ, ಕಂಚಾವೀರರೇ ಆ ರಾಕ್ಷಸ ಕುಟುಂಬದವರು ಎಂಬ ನಂಬಿಕೆಯಿರುವುದರಿಂದ ಅವರೇನಾದರೂ ಅಂದು ಹೊರಭಾಗದಲ್ಲಿ ಕಂಡದ್ದೇ ಆದರೆ ಕಂಚಾವೀರರ ರುಂಡವನ್ನು ಚೆಂಡಾಡುವ ಪದ್ಧತಿ ಇಂದಿಗೂ ಜಾರಿಯಲ್ಲಿದೆ. ಈ ಮೈಲಾರಪುರ ಕ್ಷೇತ್ರದಲ್ಲಿ ಕಂಚಾವೀರರು ಮಾದಿಗ ಜನಾಂಗಕ್ಕೆ ಸೇರಿದವರಾಗಿದ್ದಾರೆ.

**ಗುಡ್ಡದವರು**

ಮೈಲಾರಲಿಂಗನ ದೇವಾಲಯದ ಮುಂಭಾಗದಲ್ಲಿ ಸುಮಾರು ೩೦ ಅಡಿ ಎತ್ತರದ ಬಹುದೊಡ್ಡ ಕಲ್ಲುಬಂಡೆ ಇದೆ. ಅದನ್ನೇ ಮಾಲಗಂಬ ಎಂದು ಭಾವಿಸಿ ಅದಕ್ಕೆ ಪೂಜೆ ಸಲ್ಲಿಸುವುದುಂಟು. ಅದನ್ನು ತುಪ್ಪ ಸೇದುವ ಗುಂಡು ಎಂದು ಕರೆಯುತ್ತಾರೆ. ಅದೇ ಬಂಡೆಗೆ ಹೊಂದಿಕೊಂಡಂತೆ ಅಷ್ಟೇ ಎತ್ತರದಲ್ಲಿ ಇನ್ನೊಂದು ಬಂಡೆಯುಂಟು. ಎರಡು ಬಂಡೆಗಳ ನಡುವೆ ಕೇವಲ ಒಂದು ಅಡಿ ಅಂತರವಿದ್ದು ಮೇಲೇರಲು ಯಾವುದೇ ಮೆಟ್ಟಿಲುಗಳಿಲ್ಲ. ಕೇವಲ ಎರಡು ಬಂಡೆಗಳ ನಡುವಿನ ಒಂದು ಅಡಿಯಷ್ಟಿರುವ ಸಂದಿಯನ್ನು ಬಳಸಿ ಮೇಲೇರುತ್ತಾರೆ. ಅಂದರೆ ಒಂದು ಗೋಡೆಗೆ ಬೆನ್ನು ತಾಗಿಸಿ, ಮತ್ತೊಂದು ಗೋಡೆಗೆ ಕೈ-ಕಾಲು ಚಾಚಿ, ಹಿಡಿದುಕೊಳ್ಳಲು ಯಾವುದೇ ಆಧಾರವಿಲ್ಲದಿದ್ದರೂ ಸರಳವಾಗಿ ಮೇಲೇರುತ್ತಾರೆ. ಈ ಎರಡು ಬಂಡೆಗಳು ಕಟ್ಟಿದ ಗೋಡೆಯಂತೆ ನುಣುಪಾಗಿದ್ದು ಅವರು ಮೇಲೇರುವುದು ಅದ್ಭುತವೆನಿಸುತ್ತದೆ. ಈ ಬಂಡೆಯನ್ನು ಏರುವವರೇ ಗುಡ್ಡದವರು. ಇವರಿಗೆ ಗುಡ್ಡದೋರು, ಗುಡ್ಡೇರು, ತುಪ್ಪ ಸೇದೋರು ಎಂಬಿತ್ಯಾದಿ ಹೆಸರುಗಳಿವೆ. ಇವರು ಜಾತಿಯಿಂದ ಹೊಲೆಯರು.

ಕೇವಲ ಗುಡ್ಡದವರ ಮನೆತನದವರು ಮಾತ್ರ ಮೇಲೇರುತ್ತಾರೆ. ಅವರನ್ನು ಹೊರತುಪಡಿಸಿ ಇದುವರೆಗೆ ಬೇರೆಯವರು ಮೇಲೇರುವ ಪ್ರಯತ್ನ ಮಾಡಿದ್ದಾರಾದರೂ ಇಲ್ಲಿಯವರೆಗೆ ಯಾರಿಗೂ ಸಾಧ್ಯವಾಗಿಲ್ಲ. ಗುಡ್ಡದವರ ಮನೆತನದವರು ಕೇವಲ ಹತ್ತು ಹನ್ನೊಂದು ವರ್ಷದ ಮಕ್ಕಳನ್ನು ಅಷ್ಟು ಸಣ್ಣ ವಯಸ್ಸಿನಲ್ಲೇ ತುಪ್ಪ ಸೇದುವ, ಗುಂಡು ಏರುವ ಕಾರ್ಯಕ್ಕೆ ಅಣಿಗೊಳಿಸುತ್ತಾರೆ. ಅದನ್ನು ವಿಶೇಷವಾಗಿ ಕಾರಹುಣ್ಣಿಮೆಯ ದಿನದಂದು ಪ್ರಾರಂಭ ಮಾಡುತ್ತಾರೆ. ಅಂದು ಬಂಡೆ ಏರುವ ಮಕ್ಕಳ ಬಾಯಿಗೆ ಸಕ್ಕರೆ ಸಿಹಿ ತಿನ್ನಿಸಿ ಸಂಭ್ರಮಿಸುತ್ತಾರೆ. ನಂತರ ಮುಂದಿನ ದಿನಗಳಲ್ಲಿ ಆ ಮಕ್ಕಳು ಮೈಲಾರಲಿಂಗನ ಸೇವಕರಾಗಿ ಭಕ್ತರು ತಂದಂಥ ಎಣ್ಣೆ ಅಥವಾ ತುಪ್ಪವನ್ನು ಬಿಂದಿಗೆಯಲ್ಲಿ ತುಂಬಿ ಹಗ್ಗದ ಮುಖಾಂತರ ಮೇಲೆಳೆದುಕೊಂಡು ದೀಪ ಹಚ್ಚುವ ಕಾರ್ಯದಲ್ಲಿ ನಿರತರಾಗುತ್ತಾರೆ.

ಈ ಐದು ಜನ ಸೇವಾದಾರರು ಮಲ್ಲಯ್ಯನ ಪ್ರತಿಯೊಂದು ಆಚರಣೆಯಲ್ಲೂ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಂಡು ಬಂದಿದ್ದಾರೆ. ಇದುವೇ ಯಾದಗಿರಿ ಜಿಲ್ಲೆಯ ಮೈಲಾಪುರ ಕ್ಷೇತ್ರದಲ್ಲಿನ ಸೇವಾದಾರರ ಸೇವಾ ಮನೋಭಾವ.

**ರಾಘವೇಂದ್ರ ಭೀಮನಳ್ಳಿ**

ಅಂಚೆ : ಬೆಳಗುಂದಿ, ಯಾದಗಿರಿ ತಾಲೂಕು ಮತ್ತು ಜಿಲ್ಲೆ, ಪಿನ್ - ೫೮೫ ೨೨೧

---

(೫೯ನೇ ಪುಟದಿಂದ)

ಇಸ್ರೇಲ್-ಇರಾನ್‌ಗಳ ಈ ಸೆಣಸಾಟದಲ್ಲಿ ಭಾರತವನ್ನೂ ಎಳೆದು ತಂದಿದೆ ಈ ಪ್ರಕರಣ. ಭಾರತದಲ್ಲಷ್ಟೇ ಅಲ್ಲದೆ ಜಾರ್ಜಿಯಾದಲ್ಲಿ, ಥಾಯಲೆಂಡಿನಲ್ಲಿ ಬಾಂಬು ಸ್ಫೋಟಗಳಾಗಿವೆ. ಇದು ಯಾವ ತಿರುವು ಪಡೆದೀತೆಂದು ಕಾದು ನೋಡಬೇಕಾಗಿದೆ.

# ಮಾಲ್ಡೀವ್ಸ್‌ನಲ್ಲಿ ಪ್ರಜಾಪ್ರಭುತ್ವದ ಹರಣ

**ಭಾ**ರತದ ಆಸುಪಾಸಿನಲ್ಲಿ ಹಿಂದೂ ಮಹಾಸಾಗರದಲ್ಲಿರುವ ದ್ವೀಪಸ್ತೋಮ ಮಾಲ್ಡೀವ್ಸ್. ಇಲ್ಲಿ ಅನಾದಿಕಾಲದಿಂದ ಭಾರತೀಯ ವಲಸೆಗಾರರಿದ್ದಾರೆ. ೩,೨೦,೦೦೦ ಜನಸಂಖ್ಯೆ ಇರುವ ಈ ದ್ವೀಪಸ್ತೋಮ ೧೨೦೦ ದ್ವೀಪಗಳನ್ನೊಳಗೊಂಡಿದೆ. ಇವುಗಳಲ್ಲಿ ಅನೇಕ ದ್ವೀಪಗಳಲ್ಲಿ ಜನ ವಾಸಿಸುತ್ತಿಲ್ಲ. ಪ್ರವಾಸೋದ್ಯಮ ಮತ್ತು ಮೀನುಗಾರಿಕೆ ಜೀವಾಳವಾಗಿರುವ ಈ ದ್ವೀಪಸ್ತೋಮ ಆಯಕಟ್ಟಿನ ಪ್ರದೇಶದಲ್ಲಿದೆ. ಸುನ್ನಿ ಮುಸಲ್ಮಾನರೇ ಅಧಿಕ ಸಂಖ್ಯೆಯಲ್ಲಿರುವ ಈ ದ್ವೀಪಸ್ತೋಮ ಇಪ್ಪತ್ತೈದು ವರ್ಷ ಅಬ್ದುಲ್ ಗಯೂಮ್ ಸರ್ವಾಧಿಕಾರಿ ಆಡಳಿತದಲ್ಲಿತ್ತು. ೨೦೦೮ರಲ್ಲಿ ದೇಶದಲ್ಲಿ ಚುನಾವಣೆಗಳು ನಡೆದು ಮೊಹಮದ್ ನಶೀದ್ ನೇತೃತ್ವದಲ್ಲಿ ಪ್ರಜಾಪ್ರಭುತ್ವ ಆಡಳಿತ ಸ್ಥಾಪಿತವಾಗಿತ್ತು. ಕೆಲ ದಿನಗಳ ಹಿಂದೆ ನಡೆದ ರಕ್ತರಹಿತ ಕ್ಷಿಪ್ರಕ್ರಾಂತಿಯಿಂದ ಪತನಗೊಂಡ ನಶೀದ್ ಸರಕಾರದ ಸ್ಥಾನದಲ್ಲಿ ಈಗ ಅಧ್ಯಕ್ಷ ಮೊಹಮದ್ ವಹೀದ್ ಹಸನ್ ಅಧಿಕಾರ ವಹಿಸಿಕೊಂಡಿದ್ದಾರೆ. ಈ ಹಠಾತ್ ಬೆಳವಣಿಗೆಯಿಂದ ಪದಚ್ಯುತರಾದ ನಶೀದ್ ಈಗ ಬಂಧನದಲ್ಲಿದ್ದಾರೆ. ಇದು ಸಂಪೂರ್ಣವಾಗಿ ಒಂದು ಆಂತರಿಕ ಬೆಳವಣಿಗೆ. ರಕ್ತಪಾತ ಮತ್ತು ಘರ್ಷಣೆಗಳನ್ನು ತಪ್ಪಿಸುವ ಉದ್ದೇಶದಿಂದ ತಾವು ಅಧ್ಯಕ್ಷ ಪದವಿಗೆ ರಾಜೀನಾಮೆ ನೀಡಿರುವುದಾಗಿ ನಶೀದ್ ಹೇಳಿದ್ದಾರೆ. ಚುನಾಯಿತ ಸರಕಾರವೊಂದರ ಪದಚ್ಯುತಿ ಕುರಿತು ವಿಶ್ಲೇಷಣೆ ಮಾಡದೆ, ಪರಿಸ್ಥಿತಿಯನ್ನು ಪರಿಶೀಲಿಸದೆ ಭಾರತ ತರಾತುರಿಯಿಂದ ಹೊಸ ಸರಕಾರಕ್ಕೆ ಮಾನ್ಯತೆ ನೀಡಿದೆಯೇ ಎಂಬ ಅನುಮಾನ ಬರುತ್ತದೆ. ಕಾದು ನೋಡಿ ಪರಿಸ್ಥಿತಿಯನ್ನು ಅವಲೋಕಿಸಿ



ನಿರ್ಧರಿಸುವುದಕ್ಕೆ ಪ್ರತಿಯಾಗಿ ಥಟ್ಟನೆ ಭಾರತ ಸರಕಾರ ತೀರ್ಮಾನ ಕೈಗೊಂಡಿರುವುದು ಎದ್ದುಕಾಣುತ್ತಿದೆ. ಈ ದ್ವೀಪಸ್ತೋಮದಲ್ಲಿ ಈಗ ನಶೀದ್ ಬೆಂಬಲಿಗರು ಮತ್ತು ಹೊಸ ಸರಕಾರದ ಬೆಂಬಲಿಗರ ಮಧ್ಯೆ ಘರ್ಷಣೆಗಳು ಸಂಭವಿಸುತ್ತಿವೆ. ಅಸ್ಥಿರತೆ ಉಂಟಾಗಿದೆ. ಅಮೆರಿಕ ಮತ್ತು ಪಶ್ಚಿಮ ರಾಷ್ಟ್ರಗಳು ಪರಿಸ್ಥಿತಿಯನ್ನು ಗಮನಿಸುತ್ತಿವೆ. ಈ ದ್ವೀಪಸ್ತೋಮದಲ್ಲಿ ತೈಲ ನಿಕ್ಷೇಪ ಮತ್ತು ಖನಿಜ ಸಂಪತ್ತಿನ ಶೋಧೆಯಲ್ಲಿ ಆಸಕ್ತಿ ಇದೆ. ಭಾರತ ಪರಿಸ್ಥಿತಿಯನ್ನು ಎಚ್ಚರಿಕೆಯಿಂದ ಗಮನಿಸಬೇಕಾಗಿದೆ.

**ಸೀಯಾರ್ಕೆ**

'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್

ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫

# ಒಬ್ಬ ಅಪರೂಪದ ದಾನಿ




ಶ್ರೀಮಂತರು, ಬೃಹತ್ ಉದ್ಯಮಿಗಳು, ಗುತ್ತಿಗೆದಾರರು ಮುಂತಾದವರು ಆಗಾಗ ದಾನ ಮಾಡುತ್ತಾರೆ, ದತ್ತಿಗಳನ್ನು ಸ್ಥಾಪಿಸುತ್ತಾರೆ, ಸಂತ್ರಸ್ತರ ನಿಧಿಗೆ ದೇಣಿಗೆ ನೀಡುತ್ತಾರೆ, ಶ್ರೀ ವೆಂಕಟೇಶ್ವರನಿಗೆ ಚಿನ್ನದ ಕಿರೀಟವನ್ನು ಅರ್ಪಿಸುತ್ತಾರೆ. ಈ ಮೂಲಕ ಅವರು 'ಕೊಡುಗೈ ಧಣಿ'ಗಳೆಂದು ಬಿರುದು ಪಡೆದುಕೊಳ್ಳುತ್ತಾರೆ; ಮಾಧ್ಯಮಗಳಲ್ಲಿ ಸಾಕಷ್ಟು ಪ್ರಚಾರವನ್ನೂ ಗಿಟ್ಟಿಸಿಕೊಳ್ಳುತ್ತಾರೆ. ಈ ಪರೋಪಕಾರಿ ಕೃತ್ಯಗಳಲ್ಲಿ ನಾವು ಮಾನವ ಪ್ರೇಮವನ್ನು ಕಂಡುಕೊಳ್ಳುತ್ತೇವೆ; ಆದರೆ ಅದರ ಹಿಂದೆ ಅಡಗಿರಬಹುದಾದ 'ಸ್ವಹಿತ'ವನ್ನು ಕಡೆಗಾಣಿಸುತ್ತೇವೆ. ಇಂಥ ದಾನ ಧರ್ಮಗಳ ಹಿಂದೆ ಬಗೆಬಗೆಯ ಉದ್ದೇಶಗಳು ಇರಬಹುದು. ತೆರಿಗೆ ವಿನಾಯಿತಿ ಪಡೆಯುವ, ತಮ್ಮ ಪ್ರತಿಷ್ಠೆಯನ್ನು ಬೆಳೆಸಿಕೊಳ್ಳುವ, ಪ್ರಭಾವೀ ವ್ಯಕ್ತಿಗಳ ಕೃಪಾಕಟಾಕ್ಷಗಳಿಗೆ ಒಳಗಾಗುವ ಹುನ್ನಾರಗಳು ಇಲ್ಲದೆ ಇರುವುದಿಲ್ಲ. ತಮ್ಮ ದೇಣಿಗೆಗಳ ಮೂಲಕ ಅವರು ಕಳೆದುಕೊಳ್ಳುವುದು ಏನೇನೂ ಅಲ್ಲ - ತಮ್ಮ ಅಪಾರ ಸಂಪತ್ತು ಅಥವಾ ಲಾಭದಲ್ಲಿ ಅತ್ಯಲ್ಪ ಅಂಶವನ್ನು ಮಾತ್ರ; ಬದಲಿಗೆ ಅವರು ಪಡೆದುಕೊಳ್ಳುವುದೇ ಹೆಚ್ಚು. ಈ ಬಗೆಯ ದಾನ ಧರ್ಮಗಳಿಗೆ ಯಾವುದೇ ಮಹತ್ವವನ್ನು ಕೊಡುವ ಉದಾರ ಮನೋಭಾವ ಅನವಶ್ಯಕ ಎಂದು ನಾನಾದರೋ ಭಾವಿಸುತ್ತೇನೆ. ನನ್ನ ಈ ನಿಲುವಿನಲ್ಲಿ ಯಾರಾದರೂ 'ಸಿನಿಕತೆ'ಯನ್ನು ಕಂಡರೆ ನನ್ನ ಆಕ್ಷೇಪಣೆಯೇನೂ ಇಲ್ಲ.

ಹಾಗೆಂದ ಮಾತ್ರಕ್ಕೆ ಎಲ್ಲ ದಾನ ಧರ್ಮಗಳನ್ನೂ ನಾವು ಹಳದಿ ಕಣ್ಣುಗಳಿಂದಲೇ ನೋಡಬೇಕಿಲ್ಲ; ಪ್ರಾಮಾಣಿಕ ಮಾನವ ಪ್ರೇಮಿಗಳು ಅಪರೂಪವಾಗಿ ಇರುತ್ತಾರೆ ಎನ್ನುವ ಸತ್ಯವನ್ನು ಒಪ್ಪಿಕೊಳ್ಳಬೇಕು. ಈ ಸಂದರ್ಭದಲ್ಲಿ, ರಾಜಕೋಟೆಯ ಸಮೀಪದಹಳ್ಳಿ ಒಂದರ ದಾನಶೂರ ಭಿಕ್ಷುಕನೊಬ್ಬನ ಅಪೂರ್ವ ಮಾನವೀಯ ಕೃತ್ಯ ಇತ್ತೀಚೆಗೆ ವರದಿಯಾಗಿದೆ. ಇದನ್ನು ಯಾವುದೇ ಮಾಧ್ಯಮಗಳು ಪ್ರಮುಖವಾಗಿ ಸುದ್ದಿ ಮಾಡಿದ್ದು ನನ್ನ ಗಮನಕ್ಕೆ ಬಂದಿಲ್ಲ. ಅವನ ಹೆಸರು ಕಿಮ್ಜೀಬಾಯಿ ಪ್ರಜಾಪತಿ. ೬೪ ವಯಸ್ಸಿನ ಭಿಕ್ಷುಕ. ಅವನು ರಾಜಕೋಟೆಯ ಸಮೀಪದ ಪಟ್ಟಣವೊಂದರಲ್ಲಿ, ಜೈನ ದೇವಾಲಯ ಮತ್ತು ಹನುಮ ದೇವಾಲಯಗಳ ಮುಂದೆ ಭಿಕ್ಷೆ ಎತ್ತುತ್ತಾನೆ. ಈ ಭಿಕ್ಷುಕ ತನ್ನ ಗಳಿಕೆಯಲ್ಲಿ ಮೂರು ಸಾವಿರ ರೂಪಾಯಿಗಳನ್ನು ಕಲೆಹಾಕಿ, ಆ ಹಣದಿಂದ ಹೊಸ ಬಟ್ಟೆಗಳನ್ನು ಖರೀದಿಸಿ, ಶ್ರೀಮತಿ ಕೇಸರಿಬಾಯಿ ಕಿಲಾಚಂದರ ಕಿವುಡು ಮಕ್ಕಳ ಶಾಲೆಯ ೧೧ ಜನ ಹುಡುಗಿಯರಿಗೆ ದಾನ ಮಾಡಿದ್ದಾನೆ. ಅವನು ತನ್ನ ಹರಿದ ಕೊಳಕು ಬಟ್ಟೆಯಲ್ಲಿಯೇ ಕುಂಟುತ್ತಾ ಶಾಲೆಗೆ ತೆರಳಿ, ಮಕ್ಕಳಿಗೆ ಹೊಸ ಬಟ್ಟೆಯನ್ನು ಹಂಚಿ, ಆ ಮಕ್ಕಳ ಸಂತೋಷದಲ್ಲಿ ಪಾಲ್ಗೊಂಡಿದ್ದಾನೆ. ಕಿಮ್ಜೀಬಾಯಿ ಮೇಲಿನ ಸಂದರ್ಭದಲ್ಲಿ ಹೇಳಿದ ಮಾತುಗಳಲ್ಲಿ ಕಾಣಬರುವ ಉದಾತ್ತ ಮನೋಭಾವವನ್ನು ಮೆಚ್ಚಿಕೊಳ್ಳಬೇಕು. ಕಿಮ್ಜೀಬಾಯಿ ಹೀಗೆ ಹೇಳುತ್ತಾನೆ : ''ನನಗೆ ದಿನಕ್ಕೆ ಎರಡು ಹೊತ್ತಿನ ಊಟ ಸಾಕು. ಸ್ವಲ್ಪ ಹಣವನ್ನು ರಾಜಕೋಟೆಯಲ್ಲಿರುವ ನನ್ನ ಅನಾರೋಗ್ಯ ಪೀಡಿತ ಪತ್ನಿಗೆ ಕಳಿಸುತ್ತೇನೆ. ಇದಕ್ಕೆ ಹೊರತಾಗಿ, ನಾನು ಗಳಿಸುವ ಎಲ್ಲಾ ಹಣವನ್ನೂ ಬಡಜನರಿಗೆ ಊಟ ಕೊಂಡು ಕೊಡುವುದಕ್ಕೆ ಬಳಸುತ್ತೇನೆ. ತುಂಬ ಕಾಲದಿಂದ ಈ ಶಾಲೆಯ ಹುಡುಗಿಯರಿಗೆ ಏನಾದರೂ ಸಹಾಯ ಮಾಡಬೇಕೆಂಬುದು ನನ್ನ ಆಶಯ; ಅವರಿಗೆ ದಾನ ಮಾಡುವುದಕ್ಕೆ ನನಗೆ ಸಂತೋಷವಾಗುತ್ತಿದೆ.'' ಸ್ವಲ್ಪ ಕಾಲದ ಹಿಂದೆ ಕಿಮ್ಜೀಬಾಯಿ ಅನಾಥ ಹುಡುಗಿಯೊಬ್ಬಳ ಮದುವೆಗೂ ಸಹ ಹಣಸಹಾಯ ಮಾಡಿದನೆಂದು ವರದಿಯಾಗಿದೆ.

ತಾನೇ ಭಿಕ್ಷೆ ಬೇಡಿ ಬದುಕುವ ಮನುಷ್ಯನೊಬ್ಬ ಇತರರಿಗೆ ದಾನ ಮಾಡುವುದರಲ್ಲಿ ಸಂತೋಷ ಕಂಡುಕೊಳ್ಳುತ್ತಾನೆ ಎಂದರೆ, ಇದಕ್ಕೆ ಏನು ಹೇಳಬೇಕು ? ಇದರಲ್ಲಿ ಯಾವುದೇ ಸ್ವಪ್ರತಿಷ್ಠೆ ಬೆಳೆಸಿಕೊಳ್ಳುವ, ಪ್ರಚಾರ ಗಿಟ್ಟಿಸಿಕೊಳ್ಳುವ, ಕೃಪಾಕಟಾಕ್ಷಕ್ಕೆ ಹಾತೊರೆಯುವ ದುಷ್ಟ ಉದ್ದೇಶಗಳಿವೆ ಎಂದು ಆರೋಪಿಸುವುದಕ್ಕೆ ಬರುವುದಿಲ್ಲ. ಇದು ಕೇವಲ ಮಾನವ ಪ್ರೀತಿಗೆ ಸಂಬಂಧಪಟ್ಟ ಕೃತ್ಯ. ಇದು ಶುದ್ಧ ಪ್ರೀತಿ; ಯಾವುದೇ ದುರುದ್ದೇಶಗಳಿಂದ ಕಲುಷಿತಗೊಂಡದ್ದಲ್ಲ. ''ನಿಜವಾದ ದಾನಿ ಎಂದರೆ, ಒಂದೇ ರೊಟ್ಟಿ ಹೊಂದಿರುವವನೊಬ್ಬ, ಅದರಲ್ಲಿ ಅರ್ಧವನ್ನು ಬೇರೆಯವರೊಂದಿಗೆ ಹಂಚಿಕೊಳ್ಳುವವನು'', ಎಂಬುದಾಗಿ ದಾನ ಸ್ವೀಕರಿಸಿದ ಮಕ್ಕಳ ಶಾಲೆಯ ಧರ್ಮದರ್ಶಿಯೊಬ್ಬನು ಹೇಳಿದನೆಂದು ವರದಿಯಾಗಿದೆ. ಇದು ಸತ್ಯವಾದ ಮಾತು. ಇಂಥ ದಾನಿಗಳ ಬುಡಕಟ್ಟು ವೃದ್ಧಿಯಾಗಲಿ ಎಂದು ಹಾರೈಸೋಣ.

**ಎಚ್. ಎಸ್. ಈಶ್ವರ**
ಎಚ್.ಐ.ಜಿ. ೧೧, ಕೆ. ಎಚ್. ಬಿ. ಕಾಲೋನಿ, ಮೊದಲನೆಯ ಹಂತ
ಬಸವೇಶ್ವರನಗರ, ಬೆಂಗಳೂರು - ೫೬೦ ೦೭೯

## ಸಂವಾದ

''ಮಗಳೇ''
''ಅಮ್ಮ''
''ನಿನ್ನನ್ನು ಯಾರಾದರೂ
ಅಂದರೆ ಆಡಿಕೊಂಡರೆ
ಕರುಳು ಕಿವುಚುತ್ತದೆ ಕಣೇ.''
''.....''
''ಅದಕ್ಕೇ ನಿನ್ನನ್ನು
ತಿದ್ದುತ್ತೇನೆ ಮಗು,
ತಿದ್ದುತ್ತಿರುತ್ತೇನೆ...''
''ಹಾಗಾದರೆ
ನಾನು ಸರಿಯಿಲ್ಲವೇನಮ್ಮ ?''
''ಅದು ಹಾಗಲ್ಲ ಕಣೇ...''
''ನೀನು ತಿದ್ದುತ್ತಲೇ ಇದ್ದರೆ
ನನಗೆ ನನ್ನ ಸ್ವರೂಪ
ಗೊತ್ತಾಗುವುದಾದರೂ ಹೇಗೇ ?''
''ಅತಿಯಾಯಿತು ನಿಂದು !
ನಾ ಕಲಿಸಲಿಲ್ಲ ನಿನಗೆ
ಇಷ್ಟು ಮಾತು !''
''ಏನು ಮಾಡಲೇ ?
ನೀನು ಹೇಳಿಕೊಟ್ಟ
ಮಾತುಗಳೊಂದಿಗೆ
ನಿನ್ನ ಪ್ರೀತಿ, ವಾತ್ಸಲ್ಯ
ನಡೆ, ನಿಟ್ಟುಸಿರು, ನಗೆ
ಕಣ್ಣೀರುಗಳೂ
ಮಾತು ಕಲಿಸುತ್ತವೆಯಲ್ಲೇ !
ಕಿವಿಯೊಂದಿಗೆ ಕಣ್ಣು
ಮೂಗು, ಹೊಟ್ಟೆಗಳೂ
ನನಗಿವೆಯಲ್ಲಮ್ಮ ?
ಏನು ಮಾಡಲಿ ?''
''ಓಹ್ ! ಅವೆಲ್ಲ
ಎಷ್ಟು ಸುಂದರವಾಗಿವೆ ಮಗು !''
''ನಿನ್ನ ಹಾಗೇ
ಅಲ್ವೇನಮ್ಮ ?''

**ಎಚ್.ಎಸ್.ವೀಣಾ**
ಬೆಂಗಳೂರು




## ಓದಿ; ಚಂದಾದಾರರಾಗಿ, ಚಂದಾ ಉಡುಗೊರೆ ನೀಡಿ

ಜೀವನದ ಎಲ್ಲ ಕ್ಷೇತ್ರಗಳ ಆಗುಹೋಗುಗಳನ್ನು
ಗಂಭೀರ ವಿಶ್ಲೇಷಣೆಗೆ ಒಳಪಡಿಸುವ






ತಿಂಗಳ ಪತ್ರಿಕೆ

# ಹೊಸತು

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ




ಸಂಪಾದಕರು : ಡಾ|| ಜಿ. ರಾಮಕೃಷ್ಣ

ಆಕಾರ ಡಿಮ್ಮೈ ¼ ಪುಟಗಳು 64 (ವಿಶೇಷಾಂಕ 256)
ಸಾದಾ ಪ್ರತಿ : ರೂ. 12 (ವಿಶೇಷಾಂಕ ರೂ. 35)
ವಾರ್ಷಿಕ ಚಂದಾ ರೂ. 150
ಮೂರು ವರ್ಷಕ್ಕೆ ರೂ. 350




ಈ ಪ್ರಗತಿಪರ – ವೈಚಾರಿಕ ನಿಲುವಿನ ಪತ್ರಿಕೆಯನ್ನು ನೀವು ಮೆಚ್ಚಿದ್ದೀರೆಂದಾದಲ್ಲಿ ದಯವಿಟ್ಟು ಚಂದಾದಾರರಾಗಿ. ಹಾಗೆಯೇ, ನಿಮ್ಮ ಸ್ನೇಹಿತರಿಗೂ ಈ ಪತ್ರಿಕೆಯನ್ನು ಪರಿಚಯಿಸಿ; ಅವರೂ ಓದಿ ಚಂದಾದಾರರಾದಲ್ಲಿ ಪತ್ರಿಕೆಯ ಪ್ರಸಾರ ಹೆಚ್ಚುತ್ತದೆ. ನಮ್ಮ ಶ್ರಮ ಸಾರ್ಥಕವಾಗುತ್ತದೆ.

ನೀವು ಭಾಗವಹಿಸುವ ಶುಭ ಸಮಾರಂಭಗಳಲ್ಲಿ, ಹುಟ್ಟುಹಬ್ಬಗಳಲ್ಲಿ, ಪ್ರತಿಭಾ ಪುರಸ್ಕಾರ ನೀಡುವ ಸಂದರ್ಭದಲ್ಲಿ ಉಡುಗೊರೆ ನೀಡ ಬೇಕಾದಾಗ 'ಹೊಸತು' ಪತ್ರಿಕೆಯ ಚಂದಾವನ್ನೇ ಉಡುಗೊರೆ ರೂಪದಲ್ಲಿ ನೀಡಬಹುದಲ್ಲವೆ? ಯಾರಿಗೆ ಉಡುಗೊರೆ ನೀಡಬೇಕೆಂದಿರುವಿರೋ ಅವರ ವಿಳಾಸ ಮತ್ತು ಚಂದಾ ಮೊಬಲಗನ್ನು ನಮ್ಮ ವಿಳಾಸಕ್ಕೆ ಕಳಿಸಿದರೆ ನೀವು ತಿಳಿಸಿದ ವಿಳಾಸಕ್ಕೆ ಪತ್ರಿಕೆ ಕಳಿಸುವ ಜವಾಬ್ದಾರಿ ನಮ್ಮದು.




ಚಂದಾ ನೋಂದಾವಣೆ ಚಳುವಳಿಯನ್ನು ಬೆಂಬಲಿಸಿ
ನಿಮ್ಮ ಸ್ನೇಹಿತರನ್ನೂ ಚಂದಾದಾರರನ್ನಾಗಿಸಿ
ಅವರೂ ಚಂದಾ ಉಡುಗೊರೆ ನೀಡುವಂತೆ ಪ್ರೇರೇಪಿಸಿ

**'ಹೊಸತು' ತಿಂಗಳ ಪತ್ರಿಕೆ, 15, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಕುಮಾರ ಪಾರ್ಕ್ ಪೂರ್ವ, ಬೆಂಗಳೂರು – 560 001**

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. G. Ramakrishna

**HOSATHU** Kannada Monthly / MARCH 2012 / Rs. 12
RNI Regd. KARKAN / 1999 / 614. Karnataka Regd. KRNA/BGE/7/2012-14
Licenced to post without prepayment. WPP No.14.
Posted at MBC, Bangalore GPO-560001 on the 28th of every month. (No. of Pages 64)